ಶ್ರೀ ವಿಜಯದಾಸ ಕೃತ

# ಸ್ತೋತ್ರ ಸುಳಾದಿಗಳು

(ಅವತರಣಿಕೆ, ಕಠಿಣ ಶಬ್ದಾರ್ಥ ಹಾಗೂ ಲಘುಟಿಪ್ಪಣಿ)


ಸಂಪಾದಕರು

ಶ್ರೀ ವಿಜಯದಾಸರ ಭಕ್ತವೃಂದ



ಪ್ರಕಾಶಕರು

ಶ್ರೀ ಮಧ್ವಪುರಂದರೋತ್ಸವ ಸೇವಾ ಸಮಿತಿ

***Sri Vijayadasa krutha Sthothra Suladigalu :*** Edited and Compiled by Sri Vijayadasara Bakthavrunda. Published by Sri Madhwa-purandarothosava Seva Samithi.

ಬೆಲೆ : ಪಾರಾಯಣ

ಮುಖಪುಟ ವಿನ್ಯಾಸ : ಎ. ಶ್ರೀನಿವಾಸ

ಮುದ್ರಕರು : ಎ. ಜಿ. ಸುವ್ರತೀಂದ್ರ, ವಾಣೀ ಪ್ರೆಸ್
ಗೀತಾ ರಸ್ತೆ, ಚಾಮರಾಜಪುರಂ, ಮೈಸೂರು–570 005
ದೂ. : 0821–4253295 ಮೊಬೈಲ್ : 9886785095, 9886788295

# ಪ್ರಸ್ತಾವನೆ

ಭೃಗ್ವಂಶರಾದ ಶ್ರೀ ವಿಜಯದಾಸರು ಪುರಂದರದಾಸರ ಶಿಷ್ಯರು. ಪುರಂದರದಾಸರ ಅನುಗ್ರಹ ವಿಜಯದಾಸರ ಜೀವನದಲ್ಲಿ ಹಾಸುಹೊಕ್ಕಾಗಿದೆ. ತ್ರಿಮೂರ್ತಿಗಳ ಪರೀಕ್ಷೆಗೆ ಕಳುಹಿಸಿದವರೆ ನಾರದರು. ಹಾಗೆ ಕಳುಹಿಸದಿದ್ದರೆ ಶ್ರೀ ಶ್ರೀನಿವಾಸನು ಭೂಮಿಗೆ ಇಳಿದು ಬರುತ್ತಿರಲಿಲ್ಲ. ಲಕ್ಷ್ಮೀದೇವಿ ಕೊಲ್ಹಾಪುರ ಸೇರುತ್ತಿರಲಿಲ್ಲ. ಹೀಗಾಗಿ ಭೃಗುವಿನ ಒದೆತ ನಮಗೆ ಅತ್ಯಂತ ಲಾಭವಾಯಿತು. ಶ್ರೀನಿವಾಸನಿಂದಾಗಿ ಲಕ್ಷ್ಮೀದೇವಿಯಿಂದಾಗಿ ಎರಡು ರಾಜ್ಯಗಳು ಸಂಪದ್ಭರಿತವಾಗಿದ್ದವು. ವಿಜಯದಾಸರು ಪುರಂದರದಾಸರ ರೂಪದಲ್ಲಿ ಬಂದು ಎಪ್ಪತ್ತೈದು ಸಾವಿರ ಕೀರ್ತನೆ ಸುಳಾದಿಗಳನ್ನು ಬರೆದು ಗುರುದಕ್ಷಿಣೆ ನೀಡು ಎಂದರು. ನೀನು ಇನ್ನು ಮುಂದೆ ವಿಜಯದಾಸರೆಂದರು. ಇದರರ್ಥ ಶ್ರೀಮದಾಚಾರ್ಯರು 37 ಗ್ರಂಥ ಹಾಗೂ ಟೀಕಾರಾಯರ 21 ಗ್ರಂಥಗಳನ್ನು ಕನ್ನಡದಲ್ಲಿ ನಿನ್ನದೇ ಆದ ಭಾಷೆಯಲ್ಲಿ ಭಕ್ತರಿಗೆ ತಿಳಿಸಿದವನು ಎಂದರ್ಥ. ವಿ–4, ಜ–3, ಯ–1, ದಾ–3, ಸ–7, ವಿಜಯದಾಸನೆಂದರೆ ಆಚಾರ್ಯರ 37 ಗ್ರಂಥ ಕನ್ನಡೀಕರಣ ಮಾಡಿದವರು ವಿxಸ=28, ಜxದಾ=9, 9xಯ=9x1=9, 28+9=37, ಜಯರಾಯರ ಗ್ರಂಥ ಕನ್ನಡಕ್ಕೆ ಪರಿವರ್ತಿಸಿಕೊಟ್ಟವರು

ವಿಜಯದಾಸ = 4 + 3 + 1 + 3 + 2 + 7 = 21
ವಿ ಜ ಯ ದ ಆ ಸ

ಹೀಗೆ ಗುರುಗಳು ನೀಡಿದ ಅಂಕಿತವೂ ಕೂಡ ಮಹಾರ್ಥ ಬೋಧಕ. ಈ ಪ್ರಾರ್ಥನಾಭಾಗ ಸುಳಾದಿ ಗ್ರಂಥವನ್ನು ಉಪ್ಲಿ ಮಧ್ವರಾವ್ ಅವರು ಮುದ್ರಣ ಮಾಡಿಸಿ ಸಜ್ಜನರ ವೃಂದಕ್ಕೆ ವಿತರಿಸಬೇಕೆಂಬ ಹಂಬಲ ಹೊಂದಿದ್ದರು. ಈ ಮಧ್ಯದಲ್ಲಿಯೇ ಶ್ರೀಶನಾಜ್ಞೆ ಬಂದಾಗ ಭೂತ್ಯಾಗ ಅನಿವಾರ್ಯವಾಯಿತು. ಆದರೆ ಅವರ ಪೌತ್ರ ಅನಂತು ಅವರ ಇಚ್ಛೆಯನ್ನು ಪೂರ್ತಿಮಾಡುತ್ತಿರುವುದು ವಿಶೇಷ ಸಂಗತಿ. ತಾವು ಉದ್ಧಾರವಾಗುತ್ತಾ ಇತರರನ್ನೂ ಉದ್ಧಾರ ಮಾಡುತ್ತಿರುವ ಈ ಮಾರ್ಗ ಮೋಕ್ಷಮಾರ್ಗಕ್ಕೆ ಕೈದೀವಿಗೆ. ಇದನ್ನು ನೋಡಿಕೊಡಲು ಮೈಸೂರು ಶ್ರೀ ರಾಮಚಂದ್ರಾಚಾರ್ ನನಗೆ ನೀಡಿದರು. ಈ ನೆಪದಲ್ಲಾದರೂ ಒಂದು ಬಾರಿ ಪಾರಾಯಣ ಯೋಗ ಲಭಿಸಿದ್ದಕ್ಕೆ ವಿಜಯರಾಯರ ಕರುಣೆಗೆ ತಲೆಬಾಗಿ ಒಪ್ಪಿ ಯಥಾಶಕ್ತಿ ಯಥಾಮತಿ ಸರಿಯಾದ ಪದಗಳು ಹಾಕಲು ಪ್ರಯತ್ನಿಸಿದ್ದೇನೆ. ಈ

ಪ್ರಾರ್ಥನಾಭಾಗ ಸುಳಾದಿ ಗ್ರಂಥವು ಈ ಬಾರಿಯ ಪುರಂದರೋತ್ಸವದಲ್ಲಿ ಉಡುಪಿಯಲ್ಲಿ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶ್ವತೀರ್ಥರ ಅಮೃತಹಸ್ತದಿಂದ ಬಿಡುಗಡೆಯಾಗುತ್ತಿರುವುದು ಮತ್ತೊಂದು ವಿಶೇಷ. ಇದರ ಉಪಯೋಗ ಪಡೆದು ನಿತ್ಯ ಪಾರಾಯಣಾದಿಗಳನ್ನು ಮಾಡಿದಾಗ ಈ ಎಲ್ಲರ ಶ್ರಮ ಸಫಲ.

ಇತಿ ಅವನತ ಶಿರಸ್ಕ

**ಡಾ|| ಚತುರ್ವೇದಿ ಎಸ್. ವೇದವ್ಯಾಸಾಚಾರ್ಯ**

ಹರಿಸರ್ವೋತ್ತಮ ವಾಯುಜೀವೋತ್ತಮ

# ಪ್ರಕಾಶಕರ ನುಡಿ

ಭಗವಂತನಲ್ಲಿ ವಿಶೇಷವಾದ ಪ್ರಾರ್ಥನೆಯನ್ನು ಸಲ್ಲಿಸಲು ಮಾರ್ಗದರ್ಶಿಯಾಗಿ ಮಹಾನುಭಾವರಾದ ಶ್ರೀ ವಿಜಯಪ್ರಭುಗಳು ತಮ್ಮ 'ಪ್ರಾರ್ಥನಾ ಭಾಗ ಸುಳಾದಿ'ಯಲ್ಲಿ ತಿಳಿಸಿಕೊಟ್ಟಿರುತ್ತಾರೆ. ಅಂತಹ ಪ್ರಾರ್ಥನೆಗಳನ್ನು ಒಳಗೊಂಡ ಸುಂದರವಾದ ಸುಳಾದಿಗಳ ಸಂಗ್ರಹವನ್ನು ಈ ಪುಸ್ತಕದಲ್ಲಿ ಕೀರ್ತಿಶೇಷ ಉಪ್ಪಲಿ ಮಧ್ವರಾವ್‌ರವರು ಸಂಗ್ರಹಿಸಿ ಬಹಳ ದಶಕಗಳ ಹಿಂದೆ ಪ್ರಕಟಿಸಿ ಸಜ್ಜನವೃಂದಕ್ಕೆ ಉಪಕಾರ ಮಾಡಿರುತ್ತಾರೆ. ಈ ಬಾರಿಯ ಶ್ರೀಮಧ್ವ-ಪುರಂದರೋತ್ಸವದ ಜ್ಞಾನಯಜ್ಞದಲ್ಲಿ ಮತ್ತೊಮ್ಮೆ ಪುನರ್ಮುದ್ರಣ ಮಾಡಲು ಅವರ ಮೊಮ್ಮಗ ಶ್ರೀ ಉಪ್ಪಲಿ ಅನಂತುರವರು ಅನುಮತಿಯನ್ನು ನೀಡಿರುತ್ತಾರೆ. ಅದಕ್ಕಾಗಿ ಶ್ರೀ ಮಧ್ವ-ಪುರಂದರೋತ್ಸವ ಸೇವಾ ಸಮಿತಿಯಿಂದ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತಿದ್ದೇವೆ. ಸುಳಾದಿಯನ್ನು ಪರಿಶೀಲಿಸಿ ಕರಡುಪ್ರತಿಯಲ್ಲಿನ ಮುದ್ರಣ ದೋಷವನ್ನು ಸರಿಪಡಿಸಿಕೊಟ್ಟಂತಹ ಪಂಡಿತರಾದ ಡಾ॥ ಚತುರ್ವೇದಿ ವೇದವ್ಯಾಸಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತಿದ್ದೇವೆ. ಈ ಗ್ರಂಥವನ್ನು ಸುಂದರವಾಗಿ ಮುದ್ರಣ ಮಾಡಿಕೊಟ್ಟಂತಹ ಮೈಸೂರಿನ ವಾಣೀ ಪ್ರೆಸ್‌ನ ಮಾಲೀಕರು ಹಾಗೂ ನಮ್ಮ ಆತ್ಮೀಯರೂ ಆದ ಶ್ರೀ ಎ. ಜಿ. ಸುವ್ರತೀಂದ್ರ ಮತ್ತು ಅವರ ಪುತ್ರ ಶ್ರೀ ಎ. ಶ್ರೀನಿವಾಸರವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇವೆ. ಸಜ್ಜನರು ಈ ಸುಳಾದಿಯ ಪಾರಾಯಣದಿಂದ ಭಗವದ್ಭಕ್ತಿಯನ್ನು ಪಡೆದು ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಪ್ರಾರ್ಥನೆ.

ಇಂತಿ ಸಜ್ಜನರ ಚರಣ ಸೇವಕ
**ಮೈಸೂರು ರಾಮಚಂದ್ರಾಚಾರ್**

ನಿನ್ನಾ ಒಲುಮೆಯಿಂದ ನಿಖಿಳಾ ಜನರು ಬಂದು ಮನ್ನಿಸುವರೋ ಮಹರಾಯ।
ಎನ್ನ ಪುಣ್ಯಗಳಿಂದ ಈ ಪರಿ ಉಂಟೇನೋ ನಿನ್ನದೇ ಸಕಲ ಸಂಪತ್ತು ॥

# ಶ್ರೀ ಉಪ್ಲಿ ಮಧ್ವರಾವ್ – ಪರಿಚಯ



ಶ್ರೀ ದಾಸರಾಯರ ಸೇವೆಗಾಗಿಯೇ ಜೀವನವನ್ನು ಮುಡುಪಾಗಿಟ್ಟ ಎಲೆಮರೆಯ ಕಾಯಿಯಂತೆ ಪ್ರಖ್ಯಾತಿ, ಪ್ರತಿಷ್ಠೆ, ಪ್ರಚಾರದ ನೆರಳಿನಿಂದಲೂ ದೂರ ಸರಿದು ಶ್ರೀ ವಾಯುದೇವರ ಹಂಸಮಂತ್ರ ಜಪದಂತೆ ಸುಳಾದಿಗಳ ಪಾರಾಯಣವೆ ಜೀವನದ ಉಸಿರಾದ ಶ್ರೀ ಉಪ್ಲಿ ಮಧ್ವರಾಯರು ಒಂದು ವಿಶ್ವವಿದ್ಯಾಲಯದಿಂದ ನಡೆಯಬಹುದಾದ ಕೆಲಸವನ್ನು ಒಬ್ಬರೇ ತಮ್ಮ ಜೀವನದಲ್ಲಿ ಸಾಧಿಸಿ ತಿರುಪತಿ ತಿರುಮಲ ದೇವಸ್ಥಾನದ ದಾಸ ಸಾಹಿತ್ಯ ಪ್ರಾಜೆಕ್ಟ್‌ನಿಂದ ಗೌರವ ಪಡೆದರು. ಇವರ ಕಾರ್ಯವನ್ನು ಸ್ವತಃ ವೀಕ್ಷಿಸಿದ ಪಲಿಮಾರು ಮತ್ತು ಭಂಡಾರಕೇರಿ ಮಠದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರಿಂದ ಶ್ರೀ ಮನ್ಮಧ್ವರಾದ್ಧಾಂತ ಸಂವರ್ಧಿನಿ ಸಭಾ ೧೯೮೩, ಶ್ರೀ ಚಿಂತರವೇಲಿ ಪ್ರಾಣದೇವರ ಸನ್ನಿಧಿಯಲ್ಲಿ ಸಚ್ಛಾತ್ರ ಪಂಡಿತರಿಗೆ ಸಮಾನವಾಗಿ ವಿದ್ವತ್ ಸಭೆಯಲ್ಲಿ ಮಾನಿತರಾಗಿ 'ಹರಿದಾಸ ವಾಙ್ಮಯ ವಿಶಾರದ' ಎಂಬ ಪ್ರಶಸ್ತಿ ಪಡೆದರು. ಮನೆಮನೆಗಳಲ್ಲಿ ದಾಸರ ಸುಳಾದಿಗಳ ಪಾಠ ಪ್ರವಚನ ಹಾಗೂ ಶ್ರೀ ಶೇಷದಾಸರ ಅಷ್ಟಕ ಪಠನ ನಡೆಸಿ ಒಂದು ಲಕ್ಷ ಅಷ್ಟಕ ಪಾರಾಯಣದ ಫಲವನ್ನು ಮೊದಲಕಲ್ ಶ್ರೀ ವೇಂಕಟೇಶನ ಪಾದಕ್ಕರ್ಪಿಸಿ ಧನ್ಯರಾದ ಗುಪ್ತಸಾಧಕರು ಶ್ರೀ ಮಧ್ವರಾವ್ ಉಪ್ಲಿ.

ರಾಯಚೂರು **ಕೆ. ರಾಘವೇಂದ್ರರಾವ್**

॥ ಹರಿ ಓಂ ॥

## ಪರಿವಿಡಿ

## ೨ ಕರುಣಾಕರ ಶ್ರೀಹರಿಯ ಸ್ತೋತ್ರ



## ೩. ಶ್ರೀಹರಿಯ ಭಕ್ತವಾತ್ಸಲ್ಯತೆ

## ೪ ಶ್ರೀಹರಿನಾಮ ಪ್ರಶಂಸೆ



## ೫. ಶ್ರೀ ದುರ್ಗಾದೇವಿ ಸ್ತೋತ್ರ



## ೬. ಶ್ರೀ ವಾಯುದೇವರ ಅವತಾರ ಸ್ತೋತ್ರ

### ಶ್ರೀ ಹನುಮದವತಾರ



### ಶ್ರೀ ಭೀಮಾವತಾರ



### ಶ್ರೀ ಮಧ್ವಾವತಾರ

## ೭. ಯತಿವರರ ಸ್ತೋತ್ರ



## ೮. ಶ್ರೀ ಪುರಂದರ ದಾಸರ ಸ್ತೋತ್ರ

॥ ಹರಿಃ ಓಂ ॥

॥ ಶ್ರೀಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೇಂಕಟೇಶ ಪ್ರಸನ್ನ ॥

॥ ಶ್ರೀ ಗುರುರಾಜೋ ವಿಜಯತೇ ॥



# ಶ್ರೀ ವಿಜಯದಾಸ ಕೃತ

# ಸ್ತೋತ್ರ ಸುಳಾದಿಗಳು

## ೧. ಭಗವದವತಾರಗಳ ಸ್ತೋತ್ರ

ದಾಸರಾಯರು ಪ್ರತ್ಯೇಕವಾಗಿ ಭಗವದ್ರೂಪಗಳನ್ನು ವರ್ಣನೆ ಮಾಡಿದ ಸ್ತೋತ್ರ ಸುಳಾದಿಗಳನ್ನು ಈ ಭಾಗದಲ್ಲಿ ಕಾಣುತ್ತೇವೆ.

ಭಗವಂತನ ರೂಪ, ಗುಣ, ಕ್ರಿಯೆಗಳಲ್ಲಿ ಯಾವ ಭೇದವೂ ಇಲ್ಲ. ಆದರೂ ಒಂದೊಂದು ರೂಪವನ್ನು ಪ್ರತ್ಯೇಕವಾಗಿ ಹೇಳುವುದುಂಟು. "ನೃಸಿಂಹಾದಿಕ ಮನ್ಯಚ್ಚ ದುರಿತಾದಿ ನಿವೃತ್ತಯೇ" ಎಂಬ ಭಾಷ್ಯೆಯ ನುಡಿಯಂತೆ ದುರಿತ ನಾಶನೆಗೆ ನೃಸಿಂಹ ಸ್ತೋತ್ರಕ್ಕೆ ಪ್ರಾಮುಖ್ಯವಿದೆ. ಅದರಂತೆ ವೇದವ್ಯಾಸದತ್ತ, ಕಪಿಲ ಹಯಗ್ರೀವ, ಋಷಭ ಮಹಿದಾಸಾದಿ ಭಗವದವತಾರಗಳು ಜ್ಞಾನಕಾರ್ಯಕ್ಕೆ ಮೀಸಲು.

# ಶ್ರೀ ವರಹಾವತಾರ ಸ್ತೋತ್ರ



**ಹೇ ಕೋದಂಡರೂಪಿಯೇ ನನಗೆ ಕೊಟ್ಟ ಸಾಧನಶರೀರ. ಅದರಲ್ಲಿ ಮನೋಬುದ್ಧೇಂದ್ರಿಯಗಳಿಂದ ಮಾಡಿದ ಕರ್ಮಗಳನ್ನು ಯಜ್ಞತ್ವೇನ ನಿನಗೆ ಸಮರ್ಪಣೆ ಮಾಡುವಂತೆ ಮಾಡು.**

**ಹಿರಣ್ಯದಲ್ಲಿಯೇ ಅಂದರೆ ಧನಕನಕಾದಿಗಳಲ್ಲಿಯೇ ದೃಷ್ಟಿಯಿಟ್ಟ ನನ್ನ ಕಂಗಳ ನೋಟವನ್ನು ಹಿಂದಿರುಗಿಸು.**

## ಸುಳಾದಿ–೧

**॥ರಾಗ, ತೋಡಿ, ಧ್ರುವತಾಳ॥**

ಭೂವರಹ ಅವತಾರ ಶೃಂಗಾರ ಗುಣಾಕಾರ ।
ದೇವರ ದೇವನೆ ಧಾರುಣಿಧರಾ ದಾ–।
ನವರ ವಿಪಿನ ಕುಠಾರ ಕಲುಷಹರಾ ।
ಸ್ಥಾವರ ಜಂಗಮ ಜಠರದೊಳಗೆ ಯಿಟ್ಟ ।
ಶ್ರೀವರ ಸರ್ವಸಾರಭೋಕ್ತ ಶ್ರೀಮದಾನಂತ ।
ಜೀವರಾಖಿಳರಿಗೆ ಬಲುಭಿನ್ನ ದಯ ಪಾ–।
ರಾವಾರ ಮೂರುತಿ ಸುರನರೋರಗ ಪಾ–।
ರಾವಾರ ವಿನುತಾ ವಿನುತಜ ಗಮನಾ ಕ್ಷೀರ–।
ವಾರಿಧಿ ಶಯನಾ ವಾರಿಜನಯನಾ ಇಂ–।
ದೀವರ ಶ್ಯಾಮ ಶ್ರೀ ವಿಜಯವಿಠ್ಠಲ ರೇಯಾ।

ತಾವರೆ ಜಲದೊಳಗಿದ್ದಂತೆನ್ನೊಳಗಿಪ್ಪಾ ।
ಭೂ ವರಹಾವತಾರಾ ॥೧॥

**ಮಟ್ಟ ತಾಳ**

ಸುರರನ ಬೆಂಬತ್ತಿ ಧರಣಿಯನು ಕಿತ್ತಿ
ಸುರಳಿಯ ಮಾಡಿ ಸುತ್ತಿ ।
ಭರದಿಂದಲಿ ಎತ್ತಿ ಇರಿಸಿದ ದುರ್ಮತ್ತಿ ।
ಧರುಣಿಯ ನಿಜಪತ್ತಿ ವಿಜಯವಿಠ್ಠಲ ಮೂರ್ತಿ–।
ಮೆರೆದನು ಸತ್ಕೀರ್ತಿ ಧರುಣಿಯ ನಿಜಪತ್ತಿ ॥೨॥

**ರೂಪಕ ತಾಳ**

ಅಸುರ ಕನಕಾಕ್ಷನು ವಸುಧಿಯಾ ಎಳೆದೊಯ್ದು ।
ರಸಾತಳದೊಳಗೆ ಇರಿಸಿದಾನಂದೂ ।
ರಸಹೀನವಾಗೆ ವೀರಸರಾಗಿ ಪೋಗಿ. ಸುಮ–।
ನಸುರು ಚಿಂತೆಯಲಿ ಕಾಣಿಸದೆ ಪುಣ್ಯ–।
ಬಿಸಜಭವನೆಡೆಗೆ ಅಸುರರಿಪುಗಳು ಪೋಗಿ–।
ಪುಸಿಯಾದೆ ಬಿನ್ನೈಸೆ ವಸುಧಿಯಾ ಸ್ಥಿತಿಯಾ–।
ಪಶುಪತಿ ಪಿತ ತಿಳಿದು ವಿಜಯವಿಠ್ಠಲರೇಯಗೆ–।
ಹಸುಳೆಯಂದದಲಿ ಉಬ್ಬಸವ ಪೇಳಿದನು ॥೩॥

**ಝಂಪೇ ತಾಳ**

ಸೂಕರ ರೂಪವತಾಳಿ ಕೋರಿದಾಡಿಲಿಂದ–।
ಭೀಕರ ಶಬ್ದದಿ ದಶದಿಶೆಗಳೆಲ್ಲ ಬೀರುತ್ತ ।
ಭೂಕಂಪಿಸುವಂತೆ ಘುಡಿಘುಡಿಸೆ ಘೋಷವ ।
ಲೋಕೇಶಮುಖ್ಯರು ಸುರರೆಲ್ಲ ಸುಖಬಡಲು ।
ಶೋಕವಾಯಿತು ದೈತ್ಯಾವಳಿಗೆ ವೇದಗಳು ।
ವಾಕು ತೊದಲನುಡಿ ಗದಗದನೆ ಕೊಂಡಾಡೆ–।
ವೈಕುಂಠಪತಿ ನಮ್ಮ ವಿಜಯವಿಠ್ಠಲನು ವಿ–।
ವೇಕರನೊಡಗೂಡಿ ನೂಕಿದನು ಬಲವಾ ॥೪॥

**ತ್ರಿವಿಡಿ ತಾಳ**

ಇಳಿಯಾಬಗದು ರಸಾತಳಕೆ ನಿಲ್ಲದೆ ಪೋಗಿ ।
ಪೊಳೆವದಾಡಿಲಿಂದ ಖಳನ ಕುಕ್ಕಿರಿದೂ ।

ಕೊಳಹಾಳ ವೆಬ್ಬಿಸಿ ನೆಲಕೆ ಅಪ್ಪಳಿಸಿ ।
ಬಲು ಬಲವಂತನಾದವನಾ ।
ಅಳಿದು ಆಕ್ಷಣದಲ್ಲಿ ನೆಲಕೆಕೆಡಹಿ ।
ನೆಲನಾ ಪಲುದುದಿಯಲಿ ಪೊತ್ತು ಕಿಲಿ ।
ಕಿಲಿ ನಗುತಾಲಿಪ್ಪ ಹಲವು ಮಾತಿಲಿ ।
ಜಲಜನಾಭನೆ ನಮ್ಮ ವಿಜಯ ವಿಠ್ಠಲರೇಯಾ ।
ವೊಲವಕಿಟಿದೇವಾನೆ ಇಳಿಯ ಭಾರಹರಣಾ ॥೫॥

**ಅಟ್ಟ ತಾಳ**

ನಾರಾಯಣ ಕೃಷ್ಣ ಅಚ್ಚುತ ಗೋವಿಂದ ।
ನಾರದ ವರದ, ಗೋವಿಂದಾನಂತಾ ।
ಶೌರಿಮುರಾರಿ ಮುಕುಂದ ಸದಾನಂದಾ ।
ಶ್ರೀರಮಣನೆ ಜ್ಞಾನಪುಂಜಾನೆ ಕುಂಜರ-।
ದಾರುಣ ದೈತ್ತ್ಯಾರಿ ಕಾರುಣ್ಯ ಮೂರುತಿ - ।
ಈ ರೀತಿಯಲಿ ಸ್ತೋತ್ರ ಧಾರುಣಿದೇವಿ ಅ-।
ಪಾರವಾಗಿ ಮಾಡೆ ಮಾರಜನಕ-।
ಹರಿ ವಿಜಯವಿಠ್ಠಲರೇಯಾ ।
ಗೀರವಾಣರ ಪ್ರತಿ ಸಾರವ ಹರಿಸಿದಾ ॥೬॥

**ಆದಿ ತಾಳ**

ದುಂದುಭಿ ಮೊರೆಯೆ, ಮೇಲೆ ಮಂದರ ಮೊಗ್ಗೆಗರಿಯೆ ।
ಗಂಧರ್ವಾದಿಗಳು ನಾರಂದ ತುಂಬರಾರು ನಿಂದು-।
ವಂದಾಗಿ ಪಾಡುತ್ತ ನಂದಾದಿಂದ ನಲಿದಾಡೆ-।
ಇಂದುವಿನೊಳು ಕಳಂಕಪೊಂದಿದಂತೆ ದಾಡೆತುದಿಗೆ-।
ಸುಂದರ ವಸುಂಧರವು ಛಂದದಿಂದ ವೊಪ್ಪುತಿರೆ-।
ಮಂದಾಕಿನಿಜನಕ ವಿಜಯವಿಠ್ಠಲ ಉರ-।
ಗೇಂದ್ರಗಿರಿಯಲ್ಲಿ ಬಂದುನಿಂದ ನಿಗಮಗೋಚರ ॥೭॥

**ಜತೆ**

ಸ್ವಾಮಿ ಪುಷ್ಕರಣಿಯವಾಸಿ ಕ್ರೋಡವೇಷಾ-।
ಭೂಮಿರಮಣ ನಮ್ಮ ವಿಜಯವಿಠ್ಠಲ ತಿಮ್ಮಾ ॥೮॥

* * *

# ಶ್ರೀ ನರಸಿಂಹಾವತಾರ ಸ್ತೋತ್ರ



**ಕರುಣಾಕರನಾದ ಶ್ರೀನರಸಿಂಹಮೂರ್ತಿಯೇ ತತ್ವದೈತ್ಯನಾದ ಹಿರಣ್ಯಕಶ್ಯಪು ಎಲ್ಲೆಲ್ಲಿದ್ದ ಹಿರಣ್ಯವನ್ನು ಕಶ್ಯಪುವಿನ ಅಂದರೆ ಹಾಸಿಕೆಯ ಬುಡದಲ್ಲಿ ಬಚ್ಚಿಟ್ಟುಕೊಳ್ಳಲು ನನಗೆ ದುರ್ಮನಸ್ಸನ್ನು ಕೊಡುತ್ತಿದ್ದಾನೆ. ಕಾರಣ ಈ ಹಿರಣ್ಯಕಶ್ಯಪನನ್ನು ಸಂಹರಿಸಿ ನನ್ನ ಮನಸ್ಸು ವಿಷಯಾದಿಗಳಲ್ಲಿ ಮೂಲಭೂತವಾದ ಹಿರಣ್ಯಾದಿಗಳಲ್ಲಿ ಹೋಗದಂತೆ ಸಂರಕ್ಷಿಸು.**

## ಸುಳಾದಿ – ೨

**॥ ರಾಗ ನಾಟಿ–ಧ್ರುವತಾಳ ॥**

ವೀರಸಿಂಹನೆ ನಾರಸಿಂಹನೆ ದಯ ಪಾರಾ–।
ವಾರನೆ ಭಯನಿವಾರಣ ನಿರ್ಗುಣ–।
ಸಾರಿದವರ ಸಂಸಾರ ವೃಕ್ಷದಮೂಲ–।
ಬೇರರಸಿ ಕೀಳುವ ಬಿರಿದು ಭಯಂಕರ–।
ಘೋರಾವತಾರ ಕರಾಳದವದನ ಅ–।
ಘೋರ ದುರಿತ ಸಂಹಾರ ಮಾಯಾಕಾರ–।
ಕ್ರೂರ ದೈತ್ಯರ ಶೋಕ ಕಾರಣ ಉದುಭವ–।
ಈರೇಳುಭುವನ ಸಾಗರ ದೊಡಿಯಾ–।
ಆ ರೌದ್ರನಾಮಾ ವಿಜಯವಿಠ್ಠಲ ನರಸಿಂಗ–।
ವೀರರಸಾತುಂಗ ಕಾರುಣ್ಯಪಾಂಗ–।

**ಮಟ್ಟ ತಾಳ**

ಮಗುವಿನ ರಕ್ಕಸನು ಹಗಲಿರುಳು ಬಿಡದೆ ।
ಹಗೆಯಿಂದಲಿ ಹೊಯ್ದು ನಗಪನ್ನಗ ವನಧಿ-।
ಗಗನ ಮಿಗಿಲಾದ ಅಗಣಿತ ಬಾಧಿಯಲಿ-।
ನೆಗೆದು ಒಗದು ಸಾವುಬಗದು ಕೊಲ್ಲುತಿರಲು-।
ಜಗದವಲ್ಲಭನೆ ಸಗುಣಾನಾದಿಗನೆ-।
ನಿಗಮಾವಂದಿತನೆ ಪೊಗಳಿದ ಭಕುತರ-।
ತಗಲಿ ತೊಲಗನೆಂದೂ ಮಿಗೆ ಕೂಗತಲಿರಲು-।
ಯುಗ ಯುಗದೊಳು ದಯಾಳುಗಳ ದೇವರ ದೇವ-।
ಯುಗಾದಿಕೃತೆ ನಾಮಾ ವಿಜಯವಿಠ್ಠಲ ಹೋ, ಹೋ-।
ಯುಗಳಕರವ ಮುಗಿದು ಮಗುವು ಮೊರೆಯಿಡಲು ॥೨॥

**ರೂಪಕ ತಾಳ**

ಕೇಳಿದಾಕ್ಷಣದಲ್ಲಿ ಲಾಲಿಸಿ ಭಕ್ತನ್ನ-।
ಮೌಳಿವೇಗದಲಿ ಪಾಳಿಸುವೆನೆಂದು-।
ತಾಳಿಸಂತೋಷವ ತೂಳಿ ತುಂಬಿದಂತೆ-।
ಮೂಲೋಕದ ಪತಿ ವಾಲಯದಿಂದ ಸು-।
ಸ್ಸೀಲ ದುರ್ಲಭನಾಮ ವಿಜಯವಿಠ್ಠಲ ಪಂಚ-।
ಮೌಳಿ ಮಾನವ ಕಂಭಸೀಳಿ ಮೂಡಿದ ದೇವ ॥೩॥

**ಝಂಪಿ ತಾಳ**

ಲಟ ಲಟಾ ಲಟ ಲಟಾ ಲಟಕಿಸಿ ವನಜಾಂಡ ।
ಕಟಹ ಪಟ ಪಟ ಪುಟುತ್ಕಟದಿ ಬಿಚ್ಚುತಿರಲು ।
ಪುಟ ಪುಟಾ ಪುಟನೆಗೆದು ಚೀರಿ ಹಾರುತ್ತ ಪ-।
ಲ್ಕಟ ಕಟಾ ಕಟ ಕಡಿದು ರೋಷದಿಂದ ॥
ಮಿಟಿ ಮಿಟಿ ಮಿಟನೆ ರಕ್ತಾಕ್ಷಿಯಲ್ಲಿ ನೋಡಿ ॥
ತಟಿತ್ಕೋಟಿ ಊರ್ಭಟಗೆ ಆರ್ಭಟವಾಗಿರಲು ।
ಕುಟಿಲ ರಹಿತ ವ್ಯಕ್ತ ವಿಜಯ ವಿಠ್ಠಲ ಶಕ್ತ ।
ಧಿಟ ನಿಟಿಲ ನೇತ್ರ ಸುರಕಟಕ ಪರಿಪಾಲಾ ॥೪॥

**ತ್ರಿವಿಡಿ ತಾಳ**

ಬೊಬ್ಬಿರಿಯೇ ವೀರಧ್ವನಿಯಿಂದ ತನಿಗಿಡಿ ।
ಹಬ್ಬಿ ಮುಂಚೋಣಿ ಉರಿ ಹೊರಗೆದ್ದು ಸುತ್ತೆ ।
ಉಬ್ಬಸ ರವಿಗಾಗೆ, ಅಬ್ಜ ನಡುಗುತಿರೆ ।

ಆಬ್ಧಿ ಸಪುತ ಉಕ್ಕಿ ಹೊರಚಲ್ಲಿ ಬರುತಿರೆ ।
ಆಬ್ಜ ಭವಾದಿಗಳು ತಬ್ಬಿಬ್ಬಿಗೊಂಡಾರಿ–।
ಅಬ್ಬರವೇನೆನುತ ನಭದ ಗೂಳೆಯುತಗಿಯೆ–।
ಶಬ್ದತುಬಿಂತು ಅವ್ಯಾಕೃತಾಕಾಶ ಪರಿಯಂತ–।
ನಿಬ್ಬರ ತರುಗಿರಿ ಝುರ್ಝರಿಸಲು ॥
ಒಬ್ಬರಿಗೊಶವಲ್ಲದ ನಮ್ಮಾ ವಿಜಯವಿಠ್ಠಲ ।
ಇಬ್ಬಗೆಯಾಗಿ ಕಂಭದಿಂದ ಪೊರಮಟ್ಟ ॥೫॥

**ಅಟ್ಟ ತಾಳ**

ಘುಡಿಘುಡಿಸುತ ಕೋಟಿ ಸಿಡಿಲು ಗಿರಿಗೆಬಂದು–।
ಹೊಡೆದಂತೆ ಚೀರಿ ಬೊಬ್ಬಿಡುತಲಿ ಲಂಘಿಸಿ–।
ಹಿಡಿದು ರಕ್ಕಸನ್ನ ಕೆಡಹಿ ಮಂಡಿಯ ತುಡುಕಿ–।
ತೊಡಿಯ ಮೆಲೇರಿಸಿ ಹೇರೊಡಲ ಕೂರುಗುರದಿಂದ–।
ಪಡುವಲಗಡಲ ತಡಿಯ ತರಣಿಯ ನೋಡಿ–।
ಕಡುಕೋಪದಲಿ ಸದಬಡಿದು ರಕ್ಕಸನ ಕೆಡಹಿ–।
ನಿಡಿಗರುಳನು ಕೊರಳಡಿಯಲ್ಲಿ ಧರಿಸಿದ–।
ಸಡಗರದ ದೈವ ಕಡುಗಲಿ ಭೂರ್ಭೂವ ವಿಜಯ ವಿಠ್ಠಲ ಪಾ–।
ಲ್ಗಡಲೊಡಿಯಾ ಶರಣರವಡೆವೆ ವಡನೊಡನೆ ॥೬॥

**ಏಕ ತಾಳ**

ಉರಿಮಸಗೆ ಚತುರ್ದಶ ಧರಣಿ ತಲ್ಲಣಿಸಲು ।
ಪರಮೇಷ್ಠಿ ಹರಸುರರು ಸಿರಿದೇವಿಗೆ ಮೊರೆಯಿಡಲು ।
ಕರುಣದಿಂದಲಿ ತನ್ನ ಶರಣನ್ನಸಹಿತ ನಿನ್ನ ।
ಚರಣಕ್ಕೆಯೆರಗಲು ಪರಮ ಶಾಂತನಾಗಿ ।
ಹರಹಿದೆ ದಯವನ್ನು ಸುರರು ಕುಸುಮವರುಷ ।
ಗರಿಯಲು ಭೇರಿ ವಾದ್ಯಮೊರೆವುತ್ತರರೆ ಎನುತ ।
ಪರಿಪರಿವಾಲಗ ವಿಸ್ತಾರದಿಂದ ಕೈಕೊಳ್ಳುತ್ತ ।
ಮೆರೆದು ಸುರರುಪದ್ರಹರಿಸಿ ಬಾಲಕನ ಕಾಯ್ದ ॥
ಪರದೈವ ಗಭೀರಾತ್ಮ ವಿಜಯವಿಠ್ಠಲ ನಿಮ್ಮ ।
ಚರಿತೆ ದುಷ್ಟರಿಗೆ ಭೀಕರವೋ ಸಜ್ಜನಪಾಲಾ ॥೭॥

**ಜತೆ**

ಪ್ರಹ್ಲಾದವರದ ಪ್ರಪನ್ನ ಕ್ಲೇಶಭಂಜನ್ನ ।
ಮಹಹವಿಷೆ ವಿಜಯವಿಠ್ಠಲ ವರಮೃಗವೇಷಾ ॥೮॥

* * *



## ಸುಳಾದಿ–೩

**ಭಕ್ತಿಯೆಂಬ ಭಕ್ತನನ್ನು ಕಾಪಾಡಲು ಭಕ್ತವರ ಬ್ರಹ್ಮನ ನುಡಿಯನ್ನು ಕೆಡಿಸದೇ ಕೆಂಗಿಡಿಯುಗುಳುತ್ತ ಬಂದ ನರಮೃಗದ ಎಂತಹ ವಿಚಿತ್ರ ರೂಪ ನಿನ್ನದು!**

**ಶರಣಾಗತವತ್ಸಲನಾದ ನರಕೇಸರಿಯೇ ನಿನ್ನ ಚರಿತ್ರೆ ಬಹು ಸೋಜಿಗವಾದದ್ದು ಅಗಮ್ಯವಾದದ್ದು. ದುರಿತ ಕುಠಾರಿಯೇ ಸೌಮ್ಯ ತನವತೊರೆದು ಘೋರ ರೂಪತಾಳಿ ದೈತ್ಯರಿಗೆ ಭ್ರಾಂತಿಗೊಳಿಸುವ ನಿನ್ನ ಕಪಟನಾಟಕವಿದೇನೋ! ವಟಪತ್ರಶಾಯಿಯಾದ ಕಂಠೀರವ ಪಠಿಸಿ ಪುಟಾಂಜಲಿಯಾದವಗೆ ತೃಟಿಯೊಳು ಪೊಳೆವ ಪತಿತ ಪಾವನನೇ ಭೃತ್ಯವತ್ಸಲನೇ ನಿನ್ನ ರೂಪಕ್ಕೆ ನಮೋನಮಃ**

### ರಾಗ–ಭೈರವಿ–ಧ್ರುವ ತಾಳ

ಜಯ ಜಯವೆಂದು ಜಗದೋತ್ಪಾದಕವಾಯು ।
ವಯನಾಯಕಾದ್ಯರು ತುತಿಸೆ ಮಾತಾಡದಿಪ್ಪ ।
ಭಯಬಟ್ಟವನಂದದಿ ಘನ್ನತನವನ್ನೆ ಬಿಟ್ಟು ।
ತ್ರಯಲೋಕ ನಗುವಂತೆ ಬಾಯಿದೆರೆದೆನೂ ।
ನಯನಂಗಳು ನೋಡಿದರೆ ವಿಶಾಲಾಯತ ಸೀತಳಾ ।
ದಯರಸ ಪೂರ್ಣವಾಗಿ ನಿತ್ಯವೊಪ್ಪುತಲಿವೆ ।
ವ್ಯಯರಹಿತವಿದೇನೆಂಬೆನೊ ಅಖಿಳರ ಓಡಿಸುವ ।
ಲಯಕಾರಿಯಂತೆ ಕಿಡಿ ಉದರಿಪ ಬಗೆ ಏನು ।
ನಯವಾಗಿ ನಿನ್ನ ಪಾದಗಾಯನ ಗತಿಗೆ ನಿ–।
ರ್ಣಯ ಮಾಡಲಾರದೆ ಸುರರು ಮರುಳಾಹತಿಹ್ಯರು ।
ಅಯುತಾಯುತಾ ನಿಯತಾ ಸಿಡಿಲುಗರ್ಜನೆ ಮಿಗಿಲು ।
ಸಯವಾಗಿ ಭೋಎಂದು ಕೂಗಿ ಕೆಂಗೆಡಿಪದೇನು ।
ಹುಯಲಿಟ್ಟು ಜಗವೆಲ್ಲವಂದಾಗಿ ಕರೆದರೆ ।
ಪಯೋ ಬಿಂದಿನಷ್ಟು ದೂರ ಪೀಠಾಬಿಡದೆ ಮಹಿಮಾ ।
ಪಯಣಗತಿ ಇಲ್ಲದಲೆ ಒಮ್ಮೊಂದೊಮ್ಮೆ ಬಂದುವು–।
ದಯವಾದೆ ಸ್ತಂಭದಿಂದ ವಿಚಿತ್ರವೇನು ।
ಬಯಸಿದವರಾಪತ್ತು ಎಲ್ಲಿದ್ದರು ನಿಲ್ಲದೆ ।

ಬಯಲಾಗಿ ಪೋಪವೆಂದು ಸುರರು ಕೊಂಡಾಡೆ ನಿತ್ಯ ।
ಪ್ರಾಯಕೆ ಸಿಕ್ಕಿದಂತೆ ಬಾಲನ ಮೊರೆಗೆ ವಿ-।
ಜಯನೀವಗೋಸುಗ ನೀನೆ ವದಗಿದ್ದೇನೊ-।
ಪಯೋನಿಧುಸುತಿನಿನ್ನ ಲಕ್ಷಣೋಪೇತ ಚಲುವಿ-।
ಕೆಯ ನೋಡಿ ಹಿಗ್ಗಿ ಹಿಗ್ಗಿ ಹಿಗ್ಗಿ ಹಾರೈಸುತಿರೆ-।
ಪ್ರಿಯನ ಪರಮಾನಂದ ಸಂಪೂರ್ಣೈಶ್ವರ್ಯ ಚಿ-।
ನ್ಮಯ ಮೂರುತಿಯೇ ಇಂಥ ಅಂಗವಿಕಾರವೇನು ।
ಜಯದೇವಿನಾಥ ದೀನನಾಥ ದುರ್ಜಯ ವಿ-।
ಜಯವಿಠ್ಠಲ ನರಸಿಂಹ ನಿನ್ನಲೀಲೆಗೆ ನಮೋ ॥೧॥

### ಮಟ್ಟ ತಾಳ

ಅರಿದರ ಮೊದಲಾದ ನಾನಾಕೈದುಗಳಿರಲು ।
ಅರಿಯ ಉದರ ನಖದಿಸೀಳಿದ ಪರಿಏನೋ ।
ಸರುವ ಕಾಲರೂಪ ನಿನಗೆ ಮೀರಿದವಿಲ್ಲಾ ।
ಅರಿಸದೆ ಸಮಯಾನುಸಾರ ಸಾಕಲ್ಯವೇನೋ ।
ಇರುಳುಹಗಲುದೇವಿ ಸಾರುವ ತೊಡಿಮ್ಯಾಲೆ ।
ದುರುಳಾ ನಿರ್ಜೀವಿಯ ಇಟ್ಟ ಸಂಭ್ರಮವೇನೋ ।
ಶರಣಾಗತವತ್ಸಲ ವಿಜಯವಿಠ್ಠಲರೇಯಾ ।
ನರಕೇಸರಿ ನಿನ್ನ ಚರಿತೆಗೆ ಸೋಜಿಗವೋ ॥೨॥

### ತ್ರಿವಿಡಿ ತಾಳ

ಪರದೇವತಿ ನಿನ್ನ ಗುಣರೂಪ ಕ್ರಿಯೆಗಳು ।
ಪರಮಶಾಂತವೆಂದು ಸಮಸ್ತರೊಲಿಸೆ ।
ಭರದಿಂದ ಘುಡುಘುಡಿಸುತ ಬಂದ ಕಾಲಕ್ಕೆ ।
ಉರಿಮಾರಿ ದೈವವೆಂದಲ್ಲಾ ರೋಡಿದ್ದೇನೋ ।
ವರಮಣಿ ನಾನಾ ಹಾರಗಳಿರೇ ಕೊರಳಲ್ಲಿ ।
ಸುರಿವ ಶೋಣಿತ ಹಸಿಗರಳಾ ಹಾಕಿದಾದೇನು ।
ಸಿರೋರುಹ ಮಿಗಿಲಾದ ಅವಯವಂಗಳೂ ಮೃದು-।
ತರವಾಗಿದ್ದರೆ ಮಹಾಕಠಿಣ ತೋರಿದಾದೇನೊ ।
ನರವಲ್ಲ ಮೃಗವಲ್ಲ ಜಗದ್ವಿಲಕ್ಷಣವಾದ ।
ಶರೀರವ ತೆತ್ತು ಅದ್ಭುತ ಬಿರಿದಾದ್ದೇನೊ ।
ಪರಮೇಷ್ಠಿ ಶಿವಪುರಂದರ ಸುರರಾದ್ಯರು ।
ನಿರುತ ನಿನಗೆ ನಿಜಕಿಂಕರರಾಗಿರೆ ।

ಸುರ ವೈರಿಗಳಿಗೆ ಒಂದೊಂದು ಪರಿಪರಿ ।
ವರ ಪಾಲಿಸಿದ್ದು ಮನ್ನಿಸಿದಾ ಘನವೇನೊ ।
ದುರಿತ ಕುಠಾರಿ ವಿಜಯ ವಿಠ್ಠಲ ಘೋರ ।
ತರ ರೂಪವತಾಳಿದೆ ಸೌಮ್ಯತನವೆ ತೊರದೂ ॥೩॥

**ಅಟ್ಟ ತಾಳ**

ಸಂತತ ನಿನ್ನಾ ಪಾದೈಕಾಶ್ರಯಾ ಏ ।
ಕಾಂತಿಗಳಿಗೆ ಮೆಚ್ಚಿ ಸುಮ್ಮನಾಗದ ದೈವ ।
ಎಂತು ಪೇಳಲಿ, ನೋಡಿ ತರುಳ ಪ್ರಹ್ಲಾದ ।
ಮುಂತೆನಿಲ್ಲಲು ಸೋತ ಮುಗುಳನಗಿ ಏನು ।
ಕಿಂತುಯಿಲ್ಲದಸ್ವಾಮಿ ಶುದ್ಧಾತ್ಮಾ ಶ್ರೀಲಕುಮಿ ।
ಕಾಂತ ಸರ್ವಾಂತರ್ಯಾಮಿ ಕರುಣಾಳೆ ।
ಚಿಂತಿತ ಫಲದಾಯಾ ದೈತ್ಯಾವಳಿಗೆ ಮಹಾ ।
ಭ್ರಾಂತಗೊಳಿಪ ವಿಪರೀತ ಕಾರ್ಯವೇನೊ ।
ತಂತುಗಾರನೆ ನಮ್ಮಾ ವಿಜಯ ವಿಠ್ಠಲ ಸ್ವಾ-।
ತಂತ್ರ ಸರ್ವೋತ್ತಮಾ ನಿನ್ನಾ ಮರಿಯಾದೆಯಂತೊ ॥೪॥

**ಆದಿ ತಾಳ**

ಕುಟಿಲ ನಿಟಿಲಲೋಚನ ಕರುಳವಕ್ತ್ರ ಕರವಾಳಪಾಣಿ ।
ಕಠಿಣ ಕೋಪಾಟೋಪಾಗ್ನಿ ಛಟ ಛಟರಭಸ ಚಂಡ ಪ್ರತಾಪ ।
ಕಠೋರಶಬ್ದ ಹಾಹಾಕಾರ ತೀಕ್ಷ್ಣನಖ ವಜ್ರನಾಗೋಪವೀತ ।
ಝುಟಶತರೋಮ ಕುಚಿತಕರ್ನದಂತೋಷ್ಟ್ರಮಿಳಿತವು ।
ತಟ ಶ್ವಾಸೋಶ್ವಾಸ ನಾಶಿಕ ಪುಟ ಹುಂಕಾರ ಜ್ವಾಲಾಮಾಲಾ ।
ಕಣಕಣ ಪ್ರವಾಹ ಭೃಕುಟಿ ತಟಿ ।
ತಟಿತ್ಕಾಂತಿ ವೀರಾವೇಶ ಕೋಲಾಹಾಸಿಂಹ ।
ಪಟುತರ ಲಂಘಣೆ ಭುಜ ತೊಡೆ ತಟಕೆ ।
ಲಟಲಟ ಜಿಹ್ವಾಗ್ರ ಉಗ್ರಾದಿಟ ಅಧಟ ಅಚ್ಚಟ ನಿಚ್ಚಟವು ।
ತ್ಕೃಷ್ಟ ಅಟ್ಟಹಾಸಾ ಮಿಟಿಮಿಟಿಮಿಟಿ ಮಿಟಿಮಿಟಿ ನೋಟ ।
ನಟ ನಟ ನಟಣೆ ಅಬ್ಬರ ಉಲ್ಬಣ ನಿಬ್ಬರ ಅರ್ಭಟ ಬೊಬ್ಬಾಟ ।
ಕಟಕಟ ಕಾರ್ಬೊಗೆ ಹಬ್ಬಿಗೆ ಮೊಬ್ಬಿಗೆ ಉಬ್ಬಿಗೆ ಇದರ ತಬ್ಬಿಬ್ಬಿಗೆ ಜಬ್ಬಿಗೆಲುಬ್ಧ।
ಭಟರೆದೆ ಇಬ್ಬಗೆ ಇಬ್ಬಗೆ ಆರಾಟಾ ।
ತುಟಿ ಕದಪು ಭುಜಕಂಧರ ಉರಬಾಹು ।
ಜಠರ ನಾಭಿ ಜಘನಾ ಕಟಿಊರು ಜಾನುಜಂಘೆಗುಲ್ಫಾಂ ।

ಗುಟ ಪದಕುಣಿಯೇ ಅನುಕಂಪ ।
ಪುಟಪುಟದಾಡುವ ಅಡಿಗಳು ಬೊಮ್ಮಾಂಡ ।
ಕಟಹದಲ್ಲಣವು ಭಟ ಸುರಮುನಿ–।
ಕಟಕ ನೆರೆದುಘೇ ಉಘೇ ಭಳಿರೆ ಪೊತರೆ ಭಲ್ಲಭಲ್ಲರೆ ಸಿಂಗಾ ।
ಘಟಿತಾಘಟತ ಸಮರ್ಥ ನಿಜೈಶ್ವರ್ಯ ಗುಣಪೂರ್ಣ ।
ಚಟುಲ ನಿರ್ಜರರ ಕಟಕ ಪೂಜಿತ ಸಕಲ ಕ್ರಿಯಾನಂದ ।
ಹಟ ನಾನಾಚಿತ್ರ ವಿಚಿತ್ರ ಅದ್ಭುತ ಐಶ್ವರ್ಯ ಅಣುಮಹತ್ತು ।
ತ್ಕಟ ಅಗೋಚರ ಘೋರ ಯುಗಪದಿ ಪೂರ್ಣನಿರ್ಭೇದ
ದುರ್ಲಭ ಸುಲಭಾ ಅಲೋಭಾ ಅವಿರುದ್ಧಾ ಸುವಿರುದ್ಧಾ ಕರ್ಮ
ವಿಕರ್ಮ ವಿದೂರನೆ ।
ಸಟಿಯಲ್ಲ ಅನಾದಿ ಸಿದ್ಧ ಇಬ್ಬಗೆ ಅಸುರಾರಿ ।
ವಟಪತ್ರಶಾಯಿ ಸಿರಿ ವಿಜಯ ವಿಠ್ಠಲ ಕಂಠೀರವ ।
ಪಠಿಸಿ ಪುಟಾಂಜುಳಿಯಾದವಗೆ ।
ತೃಟಿಯೊಳು ಪೊಳವ, ಪತಿತ ಪಾವನನೇ ॥೫॥

**ಜತೆ**

ಭೃತ್ಯವತ್ಸಲ ನಿನ್ನ ರೂಪಕ್ಕೆ ನಮೊನಮೋ ।
ದೈತ್ಯಮರ್ದನ ವಿಜಯ ವಿಠ್ಠಲ ಕಟಿತರುವಾಯಾ ॥೬॥

* * *

## ಶ್ರೀ ವಾಮನಾವತಾರ ಸ್ತೋತ್ರ



**ವ್ಯೋಮಗಂಗೆಯನ್ನು ಪೆತ್ತವಾಮನನೇ, ತ್ರಿವಿಕ್ರಮ ಮೂರ್ತಿಯೇ, ನನ್ನ ನಾನಾ ಬಗೆಯ ವಿಷಯವಾಸನೆಯನ್ನು ಕೆಳಗೊತ್ತಿ, ಇನ್ನಾವ ಜನ್ಮದಲ್ಲಿಯೂ ಅವು ತಲೆಯೆತ್ತದಂತೆ ಮಾಡಿ ಕಾಪಾಡು.**

### ಸುಳಾದಿ–೪

**ರಾಗ–ನಾಟಿ ಧ್ರುವತಾಳ**

ವಾಮನ ವಟು ಇಂದ್ರಾನುಜ ಉಪೇಂದ್ರನೇ ।
ಭೂಮಿಸುರಾಗ್ರಣಿ ಬಾಲ ಬ್ರಹ್ಮಚಾರಿ ।
ಹೇಮ ಯಜ್ಞೋಪವೀತ ಹೇಮ ಮೇಖಳ ಪೊಳವ ।
ಹೇಮ ಕೌಪೀನಧರ ಕ್ಷೇತ್ರರಮಣಾ ।
ವ್ಯೋಮಗಂಗಾ ಜನಕ ಹಸ್ತ ಛತ್ರಕಮಂಡಲ ।
ಸೋಮ ಸನ್ನಿಭ ಪೂರ್ಣ ಗುಣಗಣನಿಲಯಾ ।
ಕಾಮಿತಫಲವೀವ ಕರುಣಾನಿಧಿ ।
ಸಾಮಗಾಯನ ಪ್ರೀತ ಸುಜನರ ಮನೋರಥ ।
ಸಮಸ್ತಲೋಕನಾಥ ಗರುಡವರೂಢ
ಭೀಮದೈತ್ಯಹರಣ ವಿಜಯ ವಿಠ್ಠಲ ನಿ–।
ಸ್ಸೀಮ ಮಹಿಮ ಸುರಸ್ತೋಮ ವಿನುತಪಾದ ॥೧॥

**ಮಟ್ಟ ತಾಳ**

ಬಲಿರಾಯನು ಬಹಳ ಬಲವಂತನಾಗಿ ।
ಬರರಾಶಿ ಮಿಕ್ಕ ಬಲಿಷ್ಠರಾದವರ ।
ಕಲಹದೊಳೋಡಿಸಿ ಛಲದಲ್ಲಿ ಅವರ ।
ಬಲು ಪದವಿಗಳನು ಕಳೆದು ತೆಗೆದುಕೊಂಡು ।
ಬಿಲ್ಲುಗಾರರಿಗೆ ವೆಗ್ಗಳನಾಗಿ ಚರಿಸಿ ।
ಇಳಿಯೊಳಗಾರಿಗೆ ಅಳುಕದಲಿರುತಿರಲು ।
ಜಲಜ ಮಗನ ಜನಕ ವಿಜಯ ವಿಠ್ಠಲ ತ ।
ನ್ನೊಳಗೆ ನಿರಂತರ ನಿಲಿದೊಲಿದು ನೆನೆವಾ ॥೨॥

**ರೂಪಕ ತಾಳ**

ಮನದೊಳು ಬಲಿರಾಯಾ ಮನಸಿಜನೈಯ್ಯನ ।
ನೆನೆಸುತ್ತ ಸಕಲ ಲೋಕವನೆ ಗೆದ್ದು ।
ಎನಗಾರು ಸರಿಯೆಂದು ಬಲುಗರ್ವದಲಿ ಇರೆ ।
ಅನಿಮಿಷಪತಿ ಪಲಾಯನವಾಗಿ ಪೋಗಲು ।
ದನುಜ ಬಲ್ಲಿದನೆಂದು ದಕ್ಷನ ತನುಜೆ ।
ಮನೋವ್ಯಥೆಯಿಂ ಕ್ಲೇಶಬಡುತತ್ತ ।
ಶಣಿಸಿ ದೈತ್ಯನ ಕೂಡಗೆಲುವ ಮಗನ ಪಡಿವೆಂ...।
ದೆನುತ್ತ ರೋಷದಲಿ ಪತಿ ಆಜ್ಞಾದಲ್ಲಿ ।
ವನಜನಾಭನ ಧ್ಯಾನವನೆ ಮಾಡಿದಳು ತನ್ನ ।
ಮನದ ಬಯಕೆ ಸಲ್ಲಿಸು ಎನುತಲಿ ।
ಫಣಿಶಾಯಿ ವಿಜಯವಿಠ್ಠಲ ವಾಮನ ದೇವ ।
ಮುನಿ ಕಶ್ಯಪ ಅದಿತಿದೇವಿಗೆ ವೊಲಿದಾ । ॥೩॥

**ಝಂಪೆ ತಾಳ**

ಶಕ್ರನ ಸೌಭಾಗ್ಯ ಇಂದ್ರಸೇನನು ಬಿಡದೆ ।
ಆಕ್ರಮಿಸಿ ತ್ರಿಲೋಕ ಮಧ್ಯದಲಿ ಬಲು ಪ–।
ರಾಕ್ರಮನಾಗಿ ತಾನಲ್ಲದಲೆ ಮತ್ತೋರ್ವ ।
ಚಕ್ರವರ್ತಿಯೇ ಇಲ್ಲವೆಂದು ಹಿಗ್ಗೀ ।
ಶುಕ್ರನ್ನ ಶಿಷ್ಯನಿರೆ ಯಾಗದಲ್ಲಿಗೆ ಉ–।
ರುಕ್ರಮನೇ ಉಪೇಂದ್ರನಾಗಿ ಬಂದೂ ।
ತಾ ಕ್ರೀಡೆಯಾಡಿದಂತೆ ಬಾಲಕನಾಗಿ ।
ಆಕ್ರಮಮಾಡಿ ಬಲಿಯಾ ಮೆಚ್ಚಿಸೀ ।

ಸಕ್ರಿಯ ಸಕಲೇಶ ವಿಜಯ ವಿಠ್ಠಲನು ತ್ರಿ-।
ವಿಕ್ರಮವತಾರ ಧರಿಸಿದನು ಸುರರೊಲಿಯೇ ॥೪॥

### ತ್ರಿವಿಡಿ ತಾಳ

ದಾನವವನಲ್ಲಿಗೆ ಮುದ್ದು ಮೋಹನ ಪೋಗಿ ।
ದಾನವಬೇಡಿದ ಮೂರುಪಾದಾ ।
ಕ್ಷೋಣಿಯಕೊಡು ಎಂದು ಕಪಟವೇಷದಲ್ಲಿ ।
ಏನೆಂಬೆ ವಟುವಿನ ಮಹಾಮಹಿಮೆ ।
ಮಾನವವನಂತೆ ಲೀಲೆತೋರಿ ಕರವಡ್ಡಿ ।
ದಾನೊ ಪಿತಾಮಹನಯ್ಯಾ ನಮ್ಮಯ್ಯಾ ।
ಕಾಣುವರಾರು ಈತನ ಮಹತ್ತಣುರೂಪಾ ।
ಏಣಿಸಲಳವೇ ಲಕುಮಿಗಾದರೂ ।
ಬಾಣಾಸುರನ ಜನಕ ಮಾತುಕೇಳುತ ವಿಪ್ರ ।
ಏನು ಬೇಡಿದನೆಂದು ನಸುನಗುತ್ತ ।
ತಾ ನೀರಿನಲಿ ತನ್ನ ಸತಿಯಸಹಿತನಾಗಿ ।
ಕ್ಷೋಣಿಯ ತ್ರಿಪಾದಾ ಧಾರಿಯೆರಿಯೇ ।
ಧೇನು ಭಕ್ತರಿಗೆಲ್ಲ ವಿಜಯವಿಠ್ಠಲ ತಾನೆ ।
ಆನಂದದಲಿ ಕೈಕೊಂಡಾ ಭಕ್ತಿಗೆ ಮೆಚ್ಚಿ ॥೫॥

### ಅಟ್ಟ ತಾಳ

ಒಂದು ಚರಣ ಬೊಮ್ಮಾಂಡ ಖರ್ಪರದಲ್ಲಿ ।
ಒಂದುಚರಣ ಪಾತಾಳಲೋಕದಲ್ಲಿ ।
ಸಂದೇಹವಿಲ್ಲದೆ ವ್ಯಾಪಿಸಿದವು ಮ ।
ತ್ತೊಂದು ಪಾದಕೆ ಭೂಮಿ ಸಾಲದಾಯಿತೆಂದು ।
ಇಂದ್ರಸೇನೆಗೆ ವಾಮನದೇವ ನುಡಿಯಿಂದ ।
ಬಂಧಿಸಿ ಸಮಯಬದ್ಧ ಮಾಡಲು ಬಲಿ ।
ಇಂದಿರಾಪತಿ ಈತನೆಂದು ತಿಳಿದು ವೇಗ ।
ವಂದಿಸಿ ತನ್ನಯ ಶಿರವನು ನೀಡಲು ।
ಅಂದು ಗೋವಿಂದನು ಅರಸನ ತಲೆಮೆಟ್ಟಿ ।
ಒಂದು ಚರಣದಲ್ಲಿ ಪಾತಾಳಕಟ್ಟಿದ ।
ಮುಂದೆ ನಖದಿಂದ ಬೊಮ್ಮಾಂಡ ಭೇದಿಸಿ ।
ಮಂದಾಕಿನಿ ಪೆತ್ತಾ ನಿರುತ ನಿರ್ಭೀತಾ ।
ಇಂದ್ರವಂದಿತ ಸಿರಿ ವಿಜಯವಿಠ್ಠಲ ಕೃಪಾ-।
ಸಿಂಧು ಸಿಂಧುರಪಾಲಾ ಸಿಂಧುತನುಜೆ ಪತಿ ॥೬॥

**ಆದಿ ತಾಳ**

ಕಾಯವನಿತ್ತವಗೆ ನಾರಾಯಣನುವೊಲಿದು ಕಲ್ಪ ।
ಆಯವನಿತ್ತು ಸರ್ವದ ಐಶ್ವರ್ಯದಲ್ಲಿಯಿಟ್ಟು ।
ಕಾಯಿದಾ ತಾನವನಮನಿಯ ।
ಸ್ಥಾಯವಾಗಿ ಬಾಗಿಲೊಳು ಈಯಬಲ್ಲ ದೇವ ತನ್ನ ।
ಮಾಯಾದಿಂದ ಜನರಮೋಹಿಸಿ ಶ್ರೀಯರಸ ವಿ-।
ಜಯವಿಠ್ಠಲ ನಾಯಕ ಶಿರೋಮಣಿ ।
ಶ್ರೇಯಸ್ಸನೀವ ತನ್ನ ಗಾಯನ ಮಾಡುವರಿಗೆ ॥೭॥

**ಜತೆ**

ಇಂದ್ರಂಗೆ ಸುರ ಪದವಿ ಕೊಡಿಸಿ ಬಲಿಗೆ ವೊಲಿದಾ ।
ಕಂದರ್ಪಪಿತ ನಮ್ಮ ವಿಜಯ ವಿಠ್ಠಲವಟು ॥೮॥

* * *



## ಶ್ರೀ ಪರಶುರಾಮಾವತಾರ ಸ್ತೋತ್ರ



**ರೇಣುಕಾನಂದನ, ರಣಭಯಂಕರನಾದ, ಪರಶುರಾಮನೇ ದುಷ್ಟ ಕ್ಷತ್ರಿಯರಂತಿರುವ ನನ್ನ ದುಷ್ಟ ಮನೋವೃತ್ತಿಗಳನ್ನು ನಿರ್ಮೂಲನ ಮಾಡು. ಕೆಟ್ಟ ಕ್ಷತ್ರಿಯರನ್ನು ಕುಟ್ಟಿಕೊಂದಂತೆ ನನ್ನಲ್ಲಿಯ ಅಷ್ಟಮದಗಳ ಅಟ್ಟಹಾಸವನ್ನು ಅಡಗಿಸು.**

### ಸುಳಾದಿ – ೫

**ರಾಗ–ಸಾರಂಗ–ಧ್ರುವ ತಾಳ**

ಸತ್ಯವತಿ ಪುತ್ರ ದುರ್ಗಾಕಳತ್ರ ನಿಜ ।
ಸತ್ಯಸಂಕಲ್ಪ ಸಿದ್ಧ ಸೂರಿ ಪ್ರಸಿದ್ಧ ।
ನಿತ್ಯ ನಿಸ್ಸಂಗಾ ನಿರ್ವಿಕಾರಗುಣ ತರಂಗ ।
ಭೃತ್ಯವತ್ಸಲ ಲೀಲಾ ಭೃಗುಕುಲ ಪಾಲಾ ।
ದೈತ್ಯಜಾತಿ ಮರ್ದನ ಸದ್ಧರ್ಮವರ್ಧನ ।
ಅತ್ಯಂತ ಪರಾಕ್ರಮ ರಾಮರಾಮಾ ।
ಸತ್ಯ ಲೋಕೇಶನಯ್ಯಾ ಸತತ ವಿಜ್ಞಾನ ಕಾಯಾ ।
ಮೃತ್ಯುಂಜಯ ನಿಂದು ಜಯವೆನೆ ಸುರವೃಂದಾ ।
ತೌತ್ಯನೆ ರಾಜರಿಪು ಬಲುಧನ್ವಾ ।
ಹತ್ಯಾದಿ ದೋಷದೂರ ಭೂಭಾರವನಕುಠಾರಾ ।
ನೃತ್ಯಗೀತಕೆ ವೊಲಿದಾ ದೇವರದೇವಾ ।
ಇತ್ಯರ್ಥ ಕಂಡವರಾರು ಎಂದಿಗೆ ನಿನ್ನಾ ।
ಗತ್ಯಾದಿ ಮಿಗಿಲಾದ ಪ್ರವರ್ತಕಾ ।

ದ್ವಿತ್ಯಕ್ತ ಮಾಡಿಸು ಪರಿಣಾಮಕೆ ಚಿತ್ತ ।
ಸತ್ಯವಾಗಲಿ ನಿನ್ನಂಘ್ರಿಯಲಿ ।
ಸತ್ಯರ್ಥ ಮುಕುತಿಗೆ ಸಾಧನಾ ಧನ ವೈಪ ।
ರಿತಳ ಇಲ್ಲವು ಕಾಣೊ ಕಮಲಾಕಾಂತಾ ।
ಅತ್ಯಧಿಕ ದೈವಾ ವಿಜಯ ವಿಠ್ಠಲರೇಯಾ ।
ಕೃತಜ್ಞತೆಯನ್ನು ಮಾಡು ನಿನ್ನ ದಾಸರೊಳು ಪೊಂದಿಸಿ ॥೧॥

**ಮಟ್ಟ ತಾಳ**

ರಾಮಾ ರಾಮಾ ಪೂರ್ಣಕಾಮಾ ಕಾಮಿತ ಫಲದಾ ।
ಜಾಮದಗ್ನಿ ಅಗ್ನಿನೇಮಕ ಪರಶುಧರಾ ।
ರಾಮ ವಲ್ಕಲವಾಸ ರಾಮಣೀಯ ಸರ್ವಸಾರ್ವ ।
ಭೌಮಾ ಪೂರ್ಣ ಪೂರ್ಣಾ ।
ಭೂಮಿನಾಥಾ ತಾಮಸಗುಣಹಾರಿ ।
ಧೂಮಕೇತು ವರ್ನಸ್ವಾಮಿ ಅಂತರ್ಯಾಮಿ ।
ಸಾಮಸ್ತ ಘನತೌರಿ ರಾಮ ರಾಜಿವಾಕ್ಷಾ ।
ಸೋಮಕುಲವೈರಿ ವಿಜಯವಿಠ್ಠಲರಾಮಾ ।
ಕಾಮಧೇನು ಸತತ ಮನದಲಿ ನೆನದವಗೆ ॥೨॥

**ತ್ರಿವಿಡಿ ತಾಳ**

ಮುನಿ ಕುಲೋದ್ಭವ ರಾಮಾ ರೇಣುಕಾನಂದನಾ ।
ಧನುರ್ಧಾರಿ ಖಡ್ಗ ಚರ್ಮಧಾರಿಯೇ ।
ರಣಭಯಂಕರ ಚಂಡ ಪ್ರಚಂಡ ಉದ್ದಂಡಾ ।
ಶೆಣೆಸಿದವರ ಗಂಡಾ ರಿಪು ಭೇರುಂಡಾ ।
ಗಣಣೆಗಾಣಿಸೊ ನಿನ್ನ ಪರತಾಪತನಕೆ ತ–।
ಲ್ಲಣಿಸುತಿದೆ ರಾಯಾಕುಲ ಸಾಗರಾ ।
ಜನಕನ ಮಾತನುಲಾಲಿಸಿ ಭ್ರಾತಾರಾ ।
ಜನನಿಯ ತರಿದು ಮಗುಳೆ ಉಳಹಿದೆ ।
ಜನನ ಮರಣ ಶೂನ್ಯ ರಾಮ ಭಾರ್ಗವರಾಮ ।
ಬಿನಗು ದೈವಂಗಳು ನಿನಗೆ ಸಮನೆ ।
ಅನಿಮಿಷತತಿ ಅಭ್ರದಲಿನಿಂದು ಬಾಗಿ ।
ನೆನ ನೆನದು ಘೇಯನೆ ನಿನ್ನ ಚರಿತೆ ।
ಪಣವ ಮಾಡುವನಾರು ನಿನ್ನ ಸಂಗಡ ಹೊಹೊ ।
ತೃಣ ಸಮವಾಗಿದೆ ತ್ರಿಭುವನಾ ।

ಸನಕಾದಿ ವಂದಿತಾ ವಿಜಯ ವಿಠ್ಠಲರೇಯಾ ।
ಮಣಿದು ನಮೋ ಎಂಬೆ ಉದ್ಧರಿಸು ಊರ್ಜಿತಾ ॥೩॥

**ಅಟ್ಟ ತಾಳ**

ಕೃತವೀರ್ಯಸೂನು ಅರ್ಜುನನ ಸಾವಿರಹಸ್ತಾ ।
ಕ್ಷಿತಿಗುರುಳಿಸಿ ಅವನನ್ನಕೊಂದು ಅವನ ।
ಸುರತನ ಸದದು ಕಾಳಗದೊಳು ಏಕ ವಿಂ–।
ಶತಿಸಾರಿಗೆಲಿ ನಿಕ್ಷತ್ರಿಯರ ಮಾಡಿ ।
ಕೃತುಮಾಡಿ ಅವನಿಸುರರಿಗೆ ಸಕಲದಾನಾ ।
ಚತುರ್ದಿಗ್ಭಾಗವ ಕೊಟ್ಟು ಸಿಂಹ ಪ–।
ರ್ವತದಲ್ಲಿ ಇದ್ದ ಬ್ರಾಹ್ಮಣರ ಮನ್ನಿಸಿ ದಾರಿ–।
ಪತಿಯಿಂದ ಭೂಮಿಯ ಪಡೆದು ರಾಮಭೋಜ ।
ಕ್ಷಿತಿಪನ್ನ ಪೊಂದಿಸಿ ಯಾಗವಮಾಡಿಸಿ ।
ಕೃತಕಾರ್ಯ ನೀನಾದೆ ಪಡುವಲ ವನಧಿಲಿ ।
ನುತಿಸಿದವರ ಪ್ರಾಣಾ ವಿಜಯ ವಿಠ್ಠಲರೇಯಾ ।
ಪ್ರತಿಕೂಲ ಕಳೆವ ವಾಗಿಂದ್ರಿಯ ನಿವಾಸ ॥೪॥

**ಆದಿ ತಾಳ**

ಪರಶುರಾಮನೆಂದು ಸ್ಮರಿಸಿದ ಜನರಿಗೆ ।
ಸ್ಪರಿಸಮಾಡದು ಕಾಣೊ ನಿರಸವಾಗೊದು ನಿತ್ಯ ।
ಹರುಷದಿಂದಲಿ ಸಂಚರಿಸುವ ಪುಣ್ಯಭೂಮಿ ।
ಪುರುಷಾರ್ಥವಾಗುವದು ವರುಷ ವರುಷ ಜ್ಞಾನ ।
ವರುಷಸುರಿವದು ಪರುಶವಾಗಿಪ್ಪನೂ ।
ಅರಸಿನ ಸಹಿತಬಂದು ಅರಸಿದರೆ ದೊರಕನು ।
ಸುರ ಶಿರೋ ಪತಿಕಿರಿಸುವ ತಾನೆ । ಉ–
ದ್ಧರಿಸುವ ಕರುಣದಿಂದ ಪುರುಷ ।
ಪ್ರಧಾನ ಜನಕ ವಿಜಯವಿಠ್ಠಲರೇಯಾ ।
ಸರಿಸಿಜ ಭವಾದ್ಯರಿಗೆ ಅರಸಾಗಿ ಪೊಪ್ಪತಿಹಾ ॥೫॥

**ಜತೆ**

ಭಾವಿ ಸಪ್ತ ಋಷಿಯ ಭಕ್ತವತ್ಸಲ ಕರು–।
ಣಾವ ಲೋಕನ ರಾಮಾ ವಿಜಯವಿಠ್ಠಲ ಮುಖ್ಯ ॥೬॥

* * *

# ಶ್ರೀ ರಾಮಾವತಾರ ಸ್ತೋತ್ರ



**ಅಸುರನ ಉಪಹತಿಯು ವಸುಧೆಗೆ ಭಾರವಾಗಲು, ಬಿಸಜೋದ್ಭವ, ಬಿಸುಗಣ್ಣ ಮೊದಲಾದವರು ದೆಸೆಗೆಟ್ಟು ಪಾಲಿಸಬೇಕೆಂದು ಬಿನ್ನೈಸಿದರು. ಆಗ ಅಪರಾಜಿತನಾದ ವಿಪಗಮಸನೇ, ದಶರಥನ ತಪಕ್ಕೆ ಮೆಚ್ಚಿ ಆತನಲ್ಲಿ ರಾಮನೆಂಬ ನಾಮದಿಂದ ಅವತರಿಸಿದೆ.**

**ರಾವಣಾದಿ ಪ್ರಮುಖರನ್ನು ಸಂಹರಿಸಿ, ವಿಭೀಷಣಾದಿ ಭಕ್ತರನ್ನು ಸಂರಕ್ಷಿಸಿ, ಬ್ರಹ್ಮಾದಿ ದೇವತೆಗಳಿಗೆ ಆನಂದ ನೀಡಿದ ಜ್ಞಾನ ನಂದಮಯ ರೂಪನಾದ ಶ್ರೀರಾಮಚಂದ್ರ ಪ್ರಭುವೇ ನಿನಗೆ ಅನಂತಾನಂತ ವಂದನೆಗಳು.**

**ರಾವಣಾದಿ ದೈತ್ಯರಂತಿರುವ ದುಷ್ಟ ಕಾಮಕ್ರೋಧಾದಿಗಳನ್ನು ದೂರಟ್ಟು, ಹಾಗೂ ಜಗತ್ತಿನಲ್ಲಿರುವ ಸಕಲ ಸುಂದರ ಪದಾರ್ಥಗಳ ಸೌಂದರ್ಯವು ನಿನ್ನಿಂದಲೇ ಎಂಬ ಅನುಭವಯುಕ್ತವಾದ ಸುಜ್ಞಾನವನ್ನು ದಯಪಾಲಿಸಿ ಕೃಪೆಮಾಡು.**

(ದಾಸರಾಯರು ಈ ಸುಳಾದಿಯಲ್ಲಿ ರಾಮಾಯಣದ ಕಥೆಯನ್ನು ಸಂಗ್ರಹವಾಗಿ, ಸ್ವಾರಸ್ಯವಾಗಿ ಹೇಳಿದ್ದಾರೆ.)

## ಸುಳಾದಿ – ೬

**ರಾಗ–ರೇಗುಪ್ತಿ–ಧ್ರುವ ತಾಳ**

ರಾಜ ರಾಜರಮಣಿ ರಾಜಶೇಖರ ವಿನುತಾ ।
ರಾಜ ತೇಜೋನಿಧಿರಾಜಾಧೀಶಾ ।
ರಾಜಹಂಸ ನಯನ ರಾಜಶೇಖರ ವಿ–।
ರಾಜಿತ ಕೀರ್ತಿ ಗಜರಾಜವರದಾ ।

ರಾಜವದನಾ ರಿಪುರಾಜ ಮಸ್ತಕಶೂಲಾ ।
ರಾಜರಾಜೋತ್ತಮ ರಾಜವಿನುತಾ ।
ರಾಜೀವದೊಳಗಿದ್ದ ರಾಜೀವನ ಪಾಲಿಸಿದ ।
ರಾಜಮಾರ್ತಾಂಡ ದ್ವಿಜರಾಜ ಗಮನಾ ।
ರಾಜರಾಜರು ನಿನ್ನ ರಾಜಿಸುವ ಚರಣ-।
ರಾಜೀವದಲ್ಲಿ ವಾಲಗ ಮಾಳ್ಪರೂ ।
ರಾಜ ರಾಜಾಗ್ರಗಣ್ಯ ರಾಜಾಭಿಷೇಕಕ್ಕೆ ।
ರಾಜ ನೀನಲ್ಲದೆ ರಾಜರುಂಟೇ ।
ರಾಜಗಂಭೀರ ಅಪರಾಜಿತನಾಮ ನಮ್ಮ ।
ವಿಜಯ ವಿಠ್ಠಲ ರಂಗರಾಜ ।
ರಾಜ ಸಮುದ್ರರಾಜ ಶಯನನೇ ॥೧॥

**ಮಟ್ಟ ತಾಳ**

ದಶಶಿರನೆಂಬುವನು ಅಸಮ ವೀರನಾಗಿ ।
ಬಿಸನಿಧಿ ಮಧ್ಯದಲ್ಲಿ ತ್ರಿದಶರ ಶೆರೆ ಇಡಲು ।
ದಶದಿಕ್ಕಿನ ಒಳಗೆ ಪೆಸರಾಗಿ ಪಸರಿಸುತ ।
ಪಶುಪನ ವರದಿಂದ ಕುಸಿಯದಲಿರುತಿರೇ ।
ಅಸುರನ ಉಪಹತಿಗೆ ವಸುಧಿಭಾರವಾಗೆ ।
ಬಿಸಿಜಾಭವ ಸುಮನಸರೆಲ್ಲರು ಪೋಗಿ ।
ಬಿಸಿಜದಳನಯನ ವಸುಧಿ ಸಂರಕ್ಷಕನೇ ।
ಅಸುರರ ಶಿಕ್ಷಕನೆ ಅಸಮಯ ಬಂದಿದೆ ।
ದೆಶೆಗೆಟ್ಟವರ ಪಾಲಿಸಬೇಕೆಂದೆನುತ ।
ಶಿಶುಗಳೊದರಿದಂತೆ ಎಸದು ಮೊರೆಯಿಡಲು ।
ವೃಷಭನಾಮಕದೇವ ವಿಜಯವಿಠ್ಠಲರೇಯನ ।
ಬಿಸಿಜಚರಣದಲ್ಲಿ ಹಸನಾಗಿ ಬಿನ್ನೈಸೆ ॥೨॥

**ರೂಪಕ ತಾಳ**

ಮೂರು ಗುಣರಹಿತ ಮೂರುತಿ ಈತನ ।
ಕಾರುಣ್ಯವನ್ನು ಇನ್ನಾರು ಬಲ್ಲವರಿಲ್ಲ ।
ವಾರಿಜಾದ್ಯರ ಸಾರೆಗರದು ಶ-।
ರೀರವ ತಡವರಿಸಿ ತಾರತಮ್ಯದಿಂದ ।
ಭಾರ ಎನ್ನದು ಎಂದು ಭರವಸವ ಇತ್ತು ।
ಕ್ರೂರನಿಂದಲಿ ಬಂದ ಭಾರ ಇಳಿಸುವೆನೆಂದು ।
ಧಾರುಣಿಯೋಳಗಿತ್ತ ಈರೈದುರಥದವನು ।

ನಾರಾಯಣನು ಕುಮಾರನಾಗಲೆಂದೂ ।
ಆರಾಧನೆಯಮಾಡೆ ಶ್ರೀರಾಮನೆಂದೆಂಬವ-।
ತಾರವನ್ನು ಧರಿಸಿದ ರಮಾರಮಣನೂ ।
ಚಾರುಗುಣ ನಿಲಯ ವಿಜಯವಿಠ್ಠಲರೇಯಾ ।
ಸಾರಿದವರ ಮನೋಹಾರವ ತೋರುತ್ತಾ ॥೩॥

### ಝಂಪಿ ತಾಳ

ಮುನಿಪ ಕೌಸಿಕನ ಯಾಗವಕಾಯಿದು ತಾಟಕಿ ।
ದನುಜೆಯ ಮುರಿದು ನಿಜಾನುಜನಕೂಡ ಜನಕನಾ ಪುರಕೆ ಗ ।
ಮನವಾಗಿ ಪೋಗುತ್ತ ಮುನಿಯಾಂಗನಿಯ ಶಾಪವನ್ನೆ ತೊಡದು ।
ಅನಲಾಕ್ಷನ ಧನುಸುಮುರಿದು ನಿಕ್ಕಡಿಮಾಡಿ ।
ಜನಕರಾಯನ ನಂದಿನಿಯ ನೆರದೂ ।
ಅನುವರದೊಳಗೆ ಭೃಗುತನುಜನ್ನ ಪೊಕ್ಕಳಲಿ ।
ದನುಜ ಸೇರಿರಲು ಬಾಣದಲ್ಲಿ ಸದದೂ ।
ತನಗೆ ತಾನೇ ಲೀಲೆ ತೋರಿದ ಮಹದೈವ ವಾ-।
ತನೆಕಾಣೋ ಗೋಹಿತ ವಿಜಯ ವಿಠ್ಠಲ ರಾಮ ॥೪॥

### ತ್ರಿವಿಡಿ ತಾಳ

ಪಿತನಮಾತನು ಮನ್ನಿಸಿ ಸತಿಸಹಿತ ಭಾಗೀ-।
ರಥಿಯದಾಟುತಲಿ ಭಕುತಗೊಲಿದೂ ।
ಅತಿಶಯವಾದ ಪರ್ವತ ಚಿತ್ರಕೂಟದಲಿ ।
ಯತಿಗಳಿಂದಲಿ ಪೂಜಿತನಾಗುತ ।
ಮತಿಹೀನನಾಗಿ ಬಾಳುತಲಿದ್ದ ಕಾಕನ್ನ ।
ಗತಲೋಚನನಮಾಡಿ ಕ್ಷಿತಿಗಟ್ಟಿದೇ ।
ಹಿತವಾಗಿ ಬಂದ ಭರತ ಹಾವಿಗೆ ಕೊಟ್ಟು ।
ವೃತವಧರಿಸಿದ ಉನ್ನತ ಮಹಿಮಾ ।
ಪಥಚಾರನಾಗಿ ಶೋಭಿಸುತ ದಂಡಕಾರಣ್ಯ-।
ಯತಿಪುಂಗವ ಕುಂಭಸುತನ ಕಂಡೂ ।
ಪ್ರತಿರಥ ನಾಮಾ ವಿಜಯ ವಿಠ್ಠಲ ರಘು-।
ಪತಿನೀನೆ ಉತ್ಪತ್ತಿ ಸ್ಥಿತಿ ಲಯಕರ್ತನೇ ॥೫॥

### ಅಟ್ಟ ತಾಳ

ಮೋಸದ ಅಸುರಿಯ ಮೂಗುಕೊಯ್ದು ಖರ-।
ದೂಷಣಾದ್ಯರನ್ನು ಕೊಂದು ಗೌತುಮೆಯಲ್ಲಿ ।

ವಾಸವಾಗಿದ್ದ ಮಾರೀಚ ಮಾಯಾಮೃಗ ।
ವೇಷವಾಗಿ ಬರೆ ಕೊಂದು ಮಾರ್ಗದಲ್ಲಿ ।
ಘಾಸಿಯಾಗಿದ್ದ ವಿಹಂಗನ ಮನ್ನಿಸಿ ।
ದ್ವೇಷಿ ಕಬಂಧನ ಕಡಿದು ಶಬರಿಯ ।
ಮೀಸಲಭಕುತಿಗೆ ಹಣ್ಣುಸವಿದು ಸಂ-।
ತೋಷದಿಂದಲಿ ತುಂಗಾತೀರದಲ್ಲಿ ಪವ ।
ನಾ ಸೂನುಯೆರಗಲು ಎತ್ತಿ ಮಾತಾಡಿ ದಿ-।
ನೇಶ ತನುಜಗೆ ಅಭಯವನ್ನು ಇತ್ತು ।
ಬೀಸಿವಗದೆ ಕಾಲಲಿ ದುಂಧುಮಾರನ್ನ ।
ನೀ ವರಿದೆ ಏಳುತಾಳುವ ಒಮ್ಮೆಲೆ ।
ಸಾಸಿರನಾಮನೇ ವಿಜಯ ವಿಠ್ಠಲ ನರ-।
ವೇಷವ ಧರಿಸಿದ ವೈಕುಂಠವಾಸ ॥೬॥

**ಆದಿ ತಾಳ**

ಭೀತಿ ಶೂನ್ಯನಾದ ಪುರಹೂತ ಮಗನಕೊಂದು ರವಿ-।
ಜಾತಗೆ ಪಟ್ಟವಗಟ್ಟಿ ಪ್ರೀತಿದೂತ ವಾಯುಜನ್ನ ।
ಸೀತೆ ಬಳಿಗೆ ಕಳುಹೇಪೋಗಿ ।
ಮಾತುತಂದು ಪೇಳಿದಾತಗೆ ವರವನಿತ್ತು ।
ಕೋತಿ ಕರಡಿ ಸಹಿತವಾಗಿ ಸೇತುವೆಬಿಗಿಸಿದ ಬಂದ ।
ನೀತ ವಿಭೀಷಣನ ಕೂಡ ಕಾತುರದಿಂದಲಿ ದಾಟಿ ।
ಧೂತ ರಾವಣಾದಿಗಳ ಯಾತನಿಗೆ ಬೀಳ್ಕೊಡಿಸಿ ।
ಪ್ರೀತಿಯಾಸ್ಪದ ನಾದತಿದಾತ ವಿಭೀಷಣಗೆ ಪ್ರ
ದ್ಯೋತ ಶಶಿ ಉಳ್ಳನಕ ಭೂತಳದೊಳಗ ಲಂಕೆ-।
ಯ ತಪ್ಪದಂತೆ ಆಳೆಂದಾತೆಗೆ ಪಟ್ಟವಗಟ್ಟಿ ।
ಸೀತೆ ಸಹಿತ ಬಂದು ಸಾಕೇತಪುರದಲ್ಲಿ ನಿಂದು ।
ಧಾತಾದಿಗಳ ಮನಕೆ ಪ್ರೀತಿ ಬಡಿಸಿ ಶೆರೆಯ ಬಿಡಿಸಿ ।
ಸೀತೆಯರಸ ವಿಜಯ ವಿಠ್ಠಲ ಭೂತ-।
ನಾಥನಿಂದ ಬಂದ ಮಾತು ಮನ್ನಿಸಿದ ಮಹಾತ್ಮಾ ॥೭॥

**ಜತೆ**

ಸಾರ್ವಭೌಮನೆ ರಾಮಾ ದುರುಳ ದೈತ್ಯವಿರಾಮಾ ।
ಸರ್ವಯೋಗಿ ವಿನಿಶ್ರುತಾ ವಿಜಯವಿಠ್ಠಲ ॥೮॥

* * *

# ಶ್ರೀ ರಾಮಾವತಾರ ಸ್ತೋತ್ರ



(ತಾತ್ಪರ್ಯನಿರ್ಣಯದ ಆಕರಕ್ಕೆ ಅನುವಾದ ರಾಮಾಯಣದ ಸಂಗ್ರಹ ರೂಪವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.)

**ವನಜ ಭವಾದ್ಯರು ನಿನಗೆ ತನುಜರಾಗಿರಲು ನೀನು ದಶರಥನಿಗೆ ತನುಭವನಾದ ಬಗೆಯ ಮರ್ಮವನ್ನು ಎಷ್ಟು ಬಗೆ ಎಣಿಸಿ ಗುಣಿಸಿದರೂ ಮನೋವಾಕ್ಕಾಯ ತಣಿಯವು, ದಣಿಯವು ರಾಮ ನಿನ್ನ ಲೀಲೆ ಅಗಮ್ಯ.**

**ಮಲತವರ ಮಸ್ತಕಾಂಕುಶನಾದ ರಾಮನೇ, ನಿನ್ನ ಚರಣದ ಸುಳಿವು ಕಂಡವರಾರೋ! ಗುಣಗಣನಿಧಿಯೇ ನಿನ್ನ ನೆನವೇ ಎಲ್ಲರಿಗೆ ಹಿತ ಪಥ.**

**ಸದಾ ನಿನ್ನ ದಾಸರ ದಾಸ್ಯದ ಸವಿಯುಣಿಸಿ ಪೋಷಿಸು ದಾಶರಥೇ.**

## ಸುಳಾದಿ – ೭

### ॥ ರಾಗ ಮಧ್ಯಮಾವತಿ – ಧ್ರುವತಾಳ ॥

ಸುತ್ತ ವಿರಜಾನದಿ ರತ್ನಮಯದ ಏಳು ।
ಸುತ್ತಿನಕೋಟೆ ಪಚ್ಚ ಮುತ್ತು ವೈಢೂರ್ಯದಿಂದ ।
ಕೆತ್ತಿದ ಪಲಿಗೆ ಕಾಳಗತ್ತಲೆಹರಿಸುವ ।
ಎತ್ತಿದ ಸೂರ್ಯಪಾನ ಪತಾಕಿಗಳ ಗಲಭೆ ।
ಎತ್ತ ನೋಡಿದರತ್ತ ನೃತ್ಯಗೀತವಾದ್ಯ ।
ಇತ್ತಂಡದಲಿ ನಿಂದಾ ಬೆತ್ತದವರ ಸೊಲ್ಲು ।
ಹತ್ತು ದಿಕ್ಕುಗಳಂಜಿತಲಿಪ್ಪ ತೆರದಿ ।
ಚತ್ತುರ ದಿಕ್ಕಿನಲ್ಲಿ ಉತ್ತರಾದಿ ನಾಲ್ಕು ।

ತತ್ಥಳಿಸುವ ದ್ವಾರ ಉತ್ತಮ ಸರೋವರ ।
ಮತ್ತೆ ಆನಂದವನ ಅತ್ತಲತ್ತಲಾಡುವ ।
ಸತ್ವ ಶರೀರಗಳು ಉತ್ತಮಾಂಗಗಳೆ ತೂ-।
ಗುತ್ತ ಸ್ವೇಯಿಚ್ಛೆಯಲ್ಲಿಯಿಂದಾ ।
ನಿತ್ಯ ಕ್ರೀಡೆಯಲ್ಲಿ ಭರಿತವಾಗಿಪ್ಪರು ।
ಸತ್ಯವಲ್ಲದೆ ಪುಶಿ ಉತ್ತರವೆಂಬೊದಿಲ್ಲ ।
ಹೊತ್ತು ಹೊತ್ತಿಗೆ ಎಲ್ಲ ಚಿತ್ತಚಂಚಲರಿಲ್ಲ ।
ತೆತ್ತಿಸಕೋಟಿ ದೇವತೆಗಳು ತಲೆಬಾಗಿ ।
ತೆತ್ತಿಗರಾಗಿನಿಂದು ತುತಿಪರನುಗಾಲಾ ।
ಸತ್ಯಲೋಕದ ಮ್ಯಾಲತ್ತ ಉಳ್ಳ ವೈಕುಂಠ ।
ಹತ್ತಿಲಿ ವಾಲ್ಗೈಸುತ್ತ ಇಂದಿರೆ ಇರೆ ।
ಎತ್ತಣದದು ತ ಧೊರೆತನವೋ ನಿನ್ನದು ।
ಶ್ರುತ್ಯರ್ಥಗಳಿಗೆ ದೂರತ್ತನೆನಿಸುವನೇ ।
ಚಿತ್ತಜಪಿತ ರಾಮ ವಿಜಯ ವಿಠ್ಠಲ ನೀ ।
ಮರ್ತ್ಯಲೋಕಕ್ಕೆ ನರಕೃತ್ಯ ತೋರಿದನೇನೋ ॥೧॥

**ಮಟ್ಟ ತಾಳ**

ವನಜಭವಾದ್ಯರು ತನುಜರಾಗಿರೆ ನಿನಗೆ ।
ಜನಪ ದಶರಥಗೆ ತನುಭವವೆನಿಸುವರೇ ।
ಎಣೆಗಾಣೆನೊ ನಿನ್ನ ಗುಣಕರ್ಮಾವಳಿಗೆ ।
ಮನೋವಾಕ್ಕಾಯಾ ನೆನೆನೆನೆದು ನಿತ್ಯ ।
ದಣಿದಣಿ ಪಾಡಿದರು ದಣಿಯಬಲ್ಲದೆ ಜಿಹ್ವೆ ।
ಯನು ಸಾಲನು ಎನಗೆ ಅನಿಮಿಷಮಿಕ್ಕಾದ-।
ಜನರ ಸಮಾದಿಗೆ ಗಣನೆ ಮಾಡುದಲಿಪ್ಪಾ ।
ಚಿನುಮಯ ಮೂರುತಿ ।
ಮನುಜೋತ್ತಮ ರಾಮ ವಿಜಯ ವಿಠ್ಠಲ ನಿನಗೆ ।
ಮಣಿದು ನಮೋ ಎಂದವನೇ ಬಲು ಧನ್ಯಧನ್ಯ ॥೨॥

**ರೂಪಕ ತಾಳ**

ಅನಂತಯಾಗದ ಕರ್ತಾಭೋಕ್ತನೆ ನಿನಗೆ ।
ಮೌನಿಯ ಮಖವಂದು ಕಾಯ್ದದ್ದು ಸೋಜಿಗವೆ ।
ಏನೆಂಬೆ ಜಡದಿಂದ ಚೇತನ ಈಯ್ವಪನೇನೋ ।
ಮಾನಿನ ಜಡಚೇತನವನ್ನು ಕಳೆದದ್ದು ಸೋಜಿಗವೆ ।
ದಾನವಬಲವಾಗೆ ನಿತ್ರಾಣಗೈಸಿದವನೆ ।

ದೀನ ಉಮೇಶನ ಧನುವ ಮುರಿದದ್ದೇನೊ ।
ರಾಣಿವಾಸವು ನಿತ್ಯ ಶ್ರೀನಾರಿ ಅವಿಯೋಗಿ ।
ಜಾನಕಿ ಮದುವೆಯಾದನು ಎನಿಸುವದೇನೋ ।
ನೀನೆ ನಿನ್ನೊಳುಕಾದಿ, ಮಾನವಾಧಮರಿಗೆ ।
ಹೀನಗತಿಗೆ ಮಾರ್ಗವನು ತೋರಿದ ದೈವಾ ।
ಭಾನುಕುಲೋತ್ತಮಾ ವಿಜಯ ವಿಠ್ಠಲ ರಾಮಾ ।
ನೀನಾಡಿದ ಲೀಲೆ ತಿರಿಗೆ ವಶವಲ್ಲ ॥೩॥

### ಝಂಪಿ ತಾಳ

ಬಲುಜೀವಿಗಳ ಭವದ ವಲಯದೊಳಗಿಟ್ಟು ।
ತೊಳಲುವಂತೆ ಮಾಡಿ ಅಳಲಿಸುವ ಮಹದೈವ ।
ಇಳಿಯೊಳಗೆ ವನವಾಸದಲಿ ತೊಳಲಿದನೆಂದು ।
ತಿಳಿಸಿ ನರರಿಗೆ ಮಾಯ ಕಲ್ಪಿಸಿ ಬಿಡುವದೇನೋ ।
ಸುಲಭದಿಂದಲಿ ಸಕಲರಿಗೆ ಉಣಿಸುವನೆ ।
ಫಲಗಳಿಂದಲಿ ದಿನವ ಕಳೆದನೆನಿಸುವದೇನೋ ।
ನಳಿನ ಜ್ಯಾದರು ನಿನ್ನೆಂಜಲ ಬಯಸುತಿಪ್ಪರು ।
ಒಲಿದು ಶಬರೀಸವಿದ ಫಲ ಮೇಲುವದೀನಯ್ಯ ।
ಜಲಜಭವಾಂಡಕ್ಕೆ ಸಲೆ ನೀನು ಆಶ್ರಯವೋ ।
ಮಲೆವಿಂಧ್ಯದೊಳಗೊಂದು ಸ್ಥಳವಮಾಡಿದದೇನೋ ।
ನೆಲೆಯಾವದೊ ನಿನ್ನ ಬಲವ ಪೊಗಳುವದಕ್ಕೆ ।
ಸುಳಿದ ಮೃಗವಟ್ಟಿ ಬೆಂಬಲ ಪೋದನೆನಸಿದೆ ।
ಚಲುವ ಸೀತೆಯ ನಿನ್ನ ಒಳಲಿಟ್ಟುಕೊಂಡು ।
ಹಲುಬಿದೆ ಹೆಂಡತಿಯ ಕಳಕಂಡವನಂತೆ ।
ಭಳಿರೆ ನಿನ್ನವತಾರ ಹಲಭರಿಗೆ ಸಾಧ್ಯವೇ ।
ಹಲವು ಬಗೆಯಲಿಂದ ಪೊಗಳಲಿಕೂಡದು ।
ಮಲತವರ ಮಸ್ತಕಾಂಕುಶ ರಾಮ ವಿಜಯ ವಿ-।
ಠ್ಠಲ ನಿನ್ನ ಚರಣದಾ ।
ಸುಳುವು ಕಂಡವನಾರೋ ಸುರರು ಬೆರಗಾಗುವರು ॥೪॥

### ತ್ರಿವಿಡಿ ತಾಳ

ಗುಣನಿಧಿಯೆ ನಿನ್ನ ನೆನವೆಲ್ಲರಿಗೆ ಬಲ ।
ನಿನಗೆ ಸಹಾಯವೇನೊ ಇನನಂದನಾ ।
ಕ್ಷಣಮೀರದಲೆ ಬೊಮ್ಮನ ಪದವಿಗೆ ಋಜುಗಣವೇ ।

ಹನುಮಗೆ ನೂತನಪಟ್ಟ ಇನ್ನುಂಟೆ ।
ಅನುದಿನ, ಸರ್ವರಂತರವನು ಬಲ್ಲ ವ್ಯಾಪ್ತನೆ ।
ವನಚರಾದಿಯ ಸುದ್ಧಿಯ ತರಲಟ್ಟಿದೆ ।
ಮುನಿದಾಕ್ಷಣ ಏಳು ವನಧಿನುಂಗುವನೆ ।
ಮಣಿಯ ಸಾಗರನಂದು ಧನುವ ಎಸದದೇನೊ ।
ತೃಣವಂದಿಡದೆ ಕಟ್ಟೆಯನು ಕಟ್ಟಿದ ಧೀರಾ ।
ಘನ ಪರ್ವತಗಳಿಂದ ವನಧಿ ಬಿಗಪದೇನೋ ।
ಮಿನುಗುವ ರತ್ನಭೂಷಣಕೆ ಕೊರತೆಯಿಲ್ಲ ।
ತನುವಿಗೆ ನಾರವಸನ ಉಟ್ಟ ಜಡಿಯೇನೋ ।
ಶಣಿಸಿದವರಗಂಡ ವಿಜಯ ವಿಠ್ಠಲ ನಿನಗೆ ।
ಅನುವಾರಾವೆನೊ ಜನನ ಮರಣ ರಹಿತಾ ॥೫॥

**ಅಟ್ಟ ತಾಳ**

ಇಂದ್ರಂಗೆ ಪುರುಷಾರ್ಥ ತಂದುಕೊಡುವನಿಗೆ ।
ಇಂದ್ರನು ನಿನಗೊಂದು ಶಂದನಟ್ಟಿದನೇನೋ ।
ನೊಂದವರು ನೋಟದಿಂದಲೇಳುವರು ।
ಗಂಧವಹನ ಕರದಿಂದದ್ರಿ ತರಿಸಿದೆ ।
ಕುಂದದೆ ಲೋಕವ ಕೊಂದುಹಾಕುವ ದೇವ ।
ಅಂದು ದುರುಳ ದಶಕಂಧರನನಳಿದದಾ–।
ನಂದಾ ಪಟ್ಟವಗಟ್ಟಿ ವೃಂದಾರಕರ ಪೊರದೆ ।
ಬಂದಾ ವಿಭೀಷಣಗೊಂದು ಕಟ್ಟಿದ ಬಗೇ ।
ನೆಂದು ಪೇಳಲಿ ನಿನ್ನಾನಂದಾ ವಾದಾಟಕ್ಕೆ ।
ವಂದಿಸಿ ನಮೊ ನಮೋ ಎಂದು ಕೊಂಡಾಡುವೆ ।
ಇಂದಿರಾಪತಿ ರಾಮ ವಿಜಯ ವಿಠ್ಠಲ ಶಾಮ–।
ಸುಂದರ ಸುಧಾಕಾಯಾ ಕಂದರ್ಪನಯ್ಯಾ ॥೬॥

**ಆದಿ ತಾಳ**

ಏಸೇಸು ಬೊಮ್ಮಾಂಡ ನಾಶನಗೈಸುವಂಗೆ ।
ದೋಷಕಾರಿಗಳನ್ನು ಘಾಸಿಮಾಡಿದ ಹತ್ಯ ।
ವೂ ಸೇರಿದರಿಂದ ಈಶನ ಭಜನಿ ಲೇಸಾಗಿಮಾಡಿ ನಿ–।
ರ್ದೋಷನಾದನೆಂದು ಹೇಸಿ ನರಕ ನಿತ್ಯ ।
ವಾಸಿಗಳು ನುಡಿದು ಕ್ಲೇಶವ ಬಡುವರು ।
ಏಸೇಸು ಜನ್ಮದಲ್ಲಿ ದೋಷವೆತ್ತಣದೊ ಅ–।

ಶೇಷದೋಷ ದೂರನೆ ದೇಶಾದೊಳಗೆ ನಿನ್ನ ।
ದಾಸನಾದವನಿಗೆ ಲೇಶ ದೋಷಗಳಿಲ್ಲಾ ।
ದೋಷ ನಿನಗೆ ಉಂಟೆ ದಾಶರಥೆ ನಮ್ಮ ವಿಜಯವಿಠ್ಠಲ ಸ್ವಪ್ರ
ಕಾಶನೆ ನಿನಗೆಣಿಸಲು ಕಾಣೆ ॥೭॥

**ಜತೆ**

ನಿನ್ನ ಮಾಯಾ ಮೋಹಾ ಖಳರಿಗೆ ತಮಸ್ಸು ಆ-।
ಪನ್ನರಿಗೆ ಮೋಕ್ಷ ವಿಜಯವಿಠ್ಠಲಧೋರಿಯೇ ॥೮॥

* * *



॥ ಶ್ರೀ ಮನ್ಮೂಲರಾಮೋ ವಿಜಯತೇ ॥



**ಆಚಾರ್ಯ ಮಧ್ವರ ಶುದ್ಧಾಂತಃಕರಣದ ಆಶಯದಂತೆ ಶ್ರೀ ನರಹರಿ ತೀರ್ಥರಿಗೆ ಒಲಿದು ಬಂದ ಶ್ರೀಮನ್ಮೂಲರಾಮನೇ, ಗುರುದ್ವಾರ ಸಾರಿದವರ ಹೃದ್ವನದಲ್ಲಿದ್ದು, ಸದ್ವಿಚಾರ ನಡೆಸುವ, ಧರ್ಮಬೋಧಕನಾದ ಭರ್ಮಗರ್ಭನ ಪಿತನೇ,**

**ಬಲವಂತ ಭಕ್ತರ ಪ್ರಿಯಾ ಸುಜನಗೇಯಾ, ಮಂಗಳಕಾಯಾ ಬ್ರಹ್ಮಕರಾರ್ಚಿತನಾದ ಪರಬ್ರಹ್ಮನೇ ಹಿರಿದಾದ ಆನಂದವನ್ನು ಕರುಣಿಸು ನಿನಗೆ ನಮೋ ನಮಃ.**

## ಸುಳಾದಿ – ೮

### ರಾಗ–ನಾಟಿ–ಧ್ರುವ ತಾಳ

ಮಧ್ವವಲ್ಲಭಜಯ ಸದ್ವೈಷ್ಣವರ ಪ್ರಿಯಾ ।
ಅದ್ವೈತಮಹಿಮ ಜಗದ್ವಿಲಕ್ಷಣ ರಾಮಾ ।
ಸದ್ವರ್ಣಭೂತ ಭವಿಷ್ಯದ್ವರ್ತಮಾನ ಬಲ್ಲ ।
ವಿದ್ವಾಂಸರೊಡಿಯಾಘ ಪ್ರಧ್ವಂಸ ಅಪ್ರಮೇಯ ।
ಸದ್ವೀರ ಏಕಮೇವ ಅದ್ವಿತಿಯಾ ಪಾ–।
ದದ್ವಯನೆನಿಸುವ ಸದ್ವಾಣಿವುಳ್ಳ ಗು–।
ರುದ್ವಾರ ಸಾರಿದವರ ಹೃದ್ವನದಲ್ಲಿದ್ದು ।
ಸದ್ವಿಚಾರ ನಡೆಸುವ ತದ್ವಿಪರೀತ ಕಾರ್ಯ ।
ಅಧ್ವರ ಭೋಕ್ತ ನಮ್ಮ ವಿಜಯವಿಠ್ಠಲರೇಯಾ ಮ–।
ರುದ್ವಂಶರಿಂದ ನಿತ್ಯ ಸದ್ವಾಲಗಕೊಂಡ ಮೂರ್ತಿ ॥೧॥

**ಅಟ್ಟ ತಾಳ**

ಪೆರ್ಮೆಯಿಂದಲಿ ವಿಶ್ವಾಕರ್ಮನಿಂದಲಿ ಅಂದು ।
ನಿರ್ಮಿತವಾಗಿದ್ದ ನಿರ್ಮಳ ಶರೀರ ।
ಧರ್ಮಬೋಧಕ ರಾಮಾ ನಿರ್ಮಯನೆ ಚ-।
ತುರ್ಮೊಗ ನಿತ್ಯ ನಿಷ್ಕರ್ಮಭಾವದಲ್ಲಿ ।
ನಿರ್ಮತ್ಸರನಾದ ವಿಜಯವಿಠ್ಠಲರೇಯನ ।
ನಿರ್ಮಲ ಚಿತ್ತದಲ್ಲಿ ಅರ್ಚನೆ ಮಾಡಿದನೋ ॥೨॥

**ತ್ರಿವಿಡಿ ತಾಳ**

ಬಲುಕಾಲ ಲೋಕೇಶ ತನ್ನ ಮನಿಯಲ್ಲಿ ।
ಚಲುವ ರಾಮನಪೂಜೆ ಮಾಡುತಿರಲೂ ।
ಒಲಿದು ಜಾಬಾಲಿಮುನಿ ಪ್ರಾರ್ಥನೆಯಿಂದಲಿ ।
ಜಲಜಸಂಭವ ಮೆಚ್ಚಿಸಿ ಬೇಡಲು ।
ಸಲಿಸಿಮಾತನು ಋಷಿಗೆ ಈ ಪ್ರತಿಮೆ ಕೊಡಲಾಗಿ ।
ಒಲಿಸಿಕೊಂಡಲ್ಲಿಂದ ಶಿವಗೆ ಕೊಡಲು ।
ಸುಲಭದಿಂದ ಶಿವನು ತನ್ನಯ ನಿಜ-।
ಲಲನಿಗೆ ಕೊಡಲಾಗಿ ವಿನಯದಿಂದ ।
ಕೆಲವು ದಿವಸ ಗಿರಿಜೆಪೂಜಿಸಿ ಆಮೇಲೆ ।
ತಿಳಿದು ದಕ್ಷನ ಯಾಗದಲ್ಲಿಗೆ ಬಂದು ।
ಇಳಿದು ಪೋಗುವಾಗ ಸ್ಯೆಮುನಿ ಋಷಿ ಕೈ-।
ಯಲ್ಲಿ ಕೊಟ್ಟ ತರುಆಯ ರಾಮಪ್ರತಿಮೆಯನ್ನು ।
ಜಲಗರ್ಭನ ವಶಕೆ ತಂದುಕೊಡಲು ।
ಪೊಳೆವ ಸೂಮೇರು ಪರ್ವತದಲ್ಲಿ ಇಟ್ಟು । ನಿ-
ಶ್ಚಲ ಪೂಜೆಮಾಡುತಿದ್ದಾ ಇದ್ದಾನೆಂದೂ ।
ಬಲುದೈವ ವಿಜಯವಿಠ್ಠಲ ಜಾನಕಿಪತಿ ।
ಬಲವಂತ ಭಕ್ತರ ಪ್ರಿಯ ಸುಜನಗೇಯಾ ॥೩॥

**ಅಟ್ಟ ತಾಳ**

ತಪಮಾಡಿ ಇಕ್ಷ್ವಾಕು ಬ್ರಹ್ಮಗೆ ಮೆಚ್ಚಿಸಿ ।
ಕೃಪೆಯಲ್ಲಿ ಮೂಲರಾಮನ ಕೊಡಲಿತ್ತಲು ।
ಕ್ಷಿತಿಯೊಳಗ್ಯೆಯೋಧ್ಯದಲ್ಲಿ ಪೂಜಿಸಲಾಗಿ ।
ಅತಿಶಯವಾಗಿ ರಾಮಚಂದ್ರ ಪರಿಯಂತ ।

ಮಿತಿ ಇಲ್ಲದ ವಾಲಗದಲ್ಲಿ ವಪ್ಪಲು ।
ಕ್ಷಿತಿಸುತಿ ತಾನೆ ಪೂಜಿಸಿ ಹನುಮಂತನಿಗೆ ।
ಪ್ರತಿಮೆಯ ಪಾಲಿಸೆ ಅಲ್ಲಿಂದ ಮಾರುತ ।
ಸುತನು ಜಾಂಬುವಂತನಿಗೆ ದಯಮಾಡಿದಾ ।
ಸತತ ಮಂಗಳಕಾಯಾ ವಿಜಯವಿಠ್ಠಲ ರಾಮಾ ।
ನುತಿಸಿಕೊಳುತಲಿದ್ದಾ ಸುರರಾದಿ ಕೈಯಾ ॥೪॥

**ಆದಿತಾಳ**

ವೇದಗರ್ಭನೆಂಬೊ ಭೂಸುರ ರಾಮನ್ನ ।
ಪಾದಸಂದರ್ಶನ ವಾಗದಲೆ ಅ-।
ನ್ನೋದಕ ಕೊಳದಿರೆ ರಾಘವ ಭಕ್ತನಿಂ-।
ದಾದ ಪ್ರತಿಜ್ಞೆಯನು ತಿಳಿದು ತನ್ನ ಮೂರ್ತಿಯ
ಆದರದಿಂದಲಿ ಕೊಟ್ಟು ಕಳುಹಲಿತ್ತಾ ।
ಭೂದೇವ ಬಹುಕಾಲ ಪೂಜಿಸಿ ತೀರ್ಥಯಾತ್ರೆ ।
ಆದರದಿಂದ ಮಾಡಿಕೊಳ್ಳುತ ಬರಲು ಗತಿಗೆ-।
ಐದುವ ಕಾಲದಲ್ಲಿ ಸೀತಾರಾಮ ಪ್ರತಿಮೆಯ ।
ಮೇದಿನಿಯೊಳು ಬಿಟ್ಟು ಪೋಗಲಾಗಿ ಇತ್ತ ।
ಸಾಧುಗುಣವುಳ್ಳ ಮುಕುಂದವರ್ಮನೆಂಬ ।
ಮೇದಿನಿಪತಿಯಾಗಿ ವಡ್ಡಿ ದೇಶದಲ್ಲಿರೆ ।
ಆದುದು ಅಶರೀರವಾಕ್ಯ ಆತಗೆಕೇಳಿ ।
ಆದಿತ್ಯವಂಶಜ ವಿಜಯ ವಿಠ್ಠಲ ರಾಮಾ ।
ರಾಧನೆಗೊಳುತಿದ್ದ ಅಜನಿಂದ ಕೋಶದಲ್ಲಿ ॥೫॥

**ಜತೆ**

ನರಹರಿತೀರ್ಥರಿಗೆ ವೊಲಿದ ವಿಜಯ ವಿಠ್ಠಲ ।
ಸ್ಮರಿಸಿದವರ ಕಾವಾ ನಿತ್ಯ ರಘುರಾಮಾ ॥೬॥

* * *

## ॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥



**ವೃಂದಾರಕ ಮುನಿವೃಂದ ವಂದ್ಯ ಸುಖಸಾಂದ್ರ, ಸರ್ವೋತ್ತಮಾ, ಮಂದಹಾಸ ಮಂದಾಕಿನೀ ಜನಕ, ಕಾರುಣ್ಯಾ, ಸಿಂಧು, ಭಕ್ತರ ಬಂಧುವಾದ ಶ್ರೀ ದಿಗ್ವಿಜಯ ರಾಮಚಂದ್ರನೇ, ನಿನ್ನಂಘ್ರಿ ನಖಚಂದ್ರ ಚಂದ್ರಿಕೆಯಲ್ಲಿ ನನ್ನ ಹೃತ್ತಾಪವನ್ನು ಕುಂದಿಸು, ನೊಂದಿಸು.**

**ಶ್ರೀನಾರಿ ಕರಕಮಲ ಪೂಜಿತಪಾದ, ಆನಂದಮುನಿ ಮನೆಯಲಿ ನಿಂದ ಅತಿನಿರ್ಮಲ ಪಾದ, ವಸುಧೇಂದ್ರ ಮುನಿಯಿಂದ ನಿಷ್ಠಾಪೂಜೆಗೊಂಡು ವಸುಧೆಯೊಳಗೆ ಜಸವಾಗಿ ಮೆರೆದು ಶ್ರೀದಿಗ್ವಿಜಯರಾಮನೇ, ಪರಿಪೂರ್ಣ ಕಾಮನೇ, ಸದಾ ನಿನ್ನ ಪಾದಪದುಮ ದರ್ಶನವಿತ್ತು ಪಾವನಗೊಳಿಸು.**

### ಸುಳಾದಿ – ೯

### ರಾಗ–ಭೈರವಿ–ಧ್ರುವ ತಾಳ

ವಂದೆ ಮುಕ್ಕುಂದ ಮುಚಕುಂದ ಪರಿಪಾಲಕ ।
ಕುಂದೇಂದು ಪಥನ ಆನಂದಮೂರ್ತಿ ।
ಗಂಧದೋಷ ದೂರವಾಗಿದ್ದ ಚಿತ್ ಪ್ರಕೃತಿ ।
ಯಿಂದೆ ನೋಡೆ ಚತುರ್ವಿಧ ದೋಷದೂರಾ ।
ವಂದೆ ಮುಕುಂದ ನಮೋ ವೃಂದಾರಕ ಮುನಿ ।
ವೃಂದ ವಂದ್ಯ ಸುಖಸಾಂದ್ರ ಸರ್ವೋತ್ತಮಾ ।
ಮಂದಹಾಸ ಮಂದಾಕಿನಿ ಜನಕ ।
ಸುಂದರಿನಾಥ ಗೋವಿಂದ ಇಂದೀವರದಳ ಶಾಮಲಾ ।

ಕಂದರ್ಪ ಕೋಟಿಲಾವಣ್ಯ ತಾರುಣ್ಯ ಸದಾ-।
ಮಂದಿರಾ ವೈಕುಂಠ ವೈನತೇಯಾ-।
ಸ್ಯೆಂದನ ಸ್ಕಂದ ಸನಂದನ ಪ್ರಿಯ ಪು-।
ರಂದರ ನಂದನ್ನ ಮಾನಭಂಗ ಇಂದನ್ನಭೋಕ್ತನೇತ್ರಾ ।
ಒಂದೊಂದು ಒಂದಾರು ಮ್ಯಾಲೊಂದು ।
ಕಂಧರನನಗೊಸುಗ ಅಹಮತಿಯಲ್ಲಿ ।
ಬಂದು ನಿಂದೆದಿರಾಗೆ ಜಡಮಾಡಿ ನಿಲಿಸಿದ ಅ-।
ರಿಂದಮ ದಮಶಾಂತ ಪೂರ್ಣ ಪೂರ್ಣಾ ।
ವಂದೆ ಮುಕುಂದ ನಮೋ ।
ನಂದ ಗೋಕುಲ ಪಾವನ್ನ ವಿಜಯ ವಿಠ್ಠಲ ರಾಮ ।
ಚಂದ್ರ ಪಾಪವರ್ವತಕೆ ಇಂದ್ರಾಯುಧವೆಂದೆನಿಪ ॥೧॥

## ಮಟ್ಟ ತಾಳ

ಮಂಗಳಾಂಗಿ ರಮಣ ರಂಗ ರಂಗೋರಂಗ-।
ಪುಂಗವ ಪರಿಯಂಕ ಸಂಗ ಸಂಗೀತಲೋಲ ।
ಅಂಗ ವಿಚಿತ್ರಂಗ ತುಂಗ ಮಾತುಂಗ ರಿಪು ।
ಭಂಗ ರಾಜಸಿಂಗ ಭಂಗರಹಿತ ಸರ್ವಾಂಗ ರೋಮಪ್ಲ-।
ವಂಗ ಕಟಕನಾಯಕ ಇಂಗಿತ ಜನರಂತ-।
ರಂಗ ಕರುಣಾಪಾಂಗ ರಂಗುಮಾಣಿಕ ಭೂಷಾ ।
ಶೃಂಗಾರಾಂಗ ಮಾರ್ಗಣ ಶಿಂಗಾಡಿ ಹಸ್ತ ।
ವಂಗುಳಿ ಚಾತುರ್ಯ ಗಂಗಾಧರ ಚಾಪ-।
ಭಂಗ ಭಕ್ತವತ್ಸಲ ರಂಗ ರಂಗರಾಮ ।
ಮಂಗಳಾಂಗ ದೇವೋತ್ತುಂಗ ವಿಜಯವಿಠ್ಠಲ ।
ಜಂಗಮ ಸ್ಥಾವರ ಜಂಗುಳಿ ಜಡಭಿನ್ನಾ ॥೨॥

## ತ್ರಿವಿಡಿ ತಾಳ

ಇಂದ್ರಗೋಪದಂತೆ ವರ್ನದಿಂದೊಪ್ಪುವ ।
ಅಂದವಾದ ದಿಗ್ವಿಜಯರಾಮ ।
ಚಂದ್ರ ಭಕ್ತಚಕೋರ ಮಾನವ ಮನುಜ ಲೀಲಾ ।
ಸಂದರುಶನ ಮಾತ್ರದಿಂದ ಲಾಭಾ-।
ಸಂದೋಹ ಕೊಡುವನೆ ಕ್ಷತ್ರಕುಲೋತ್ತಮ ।
ಶ್ಯಂದನಹತ್ತು ನಾಮಕ ನಂದನಾ ।
ಇಂದೆನ್ನ ಹೃದಯಾಬ್ಜ ಮಂದಿರದಲಿ ಬಂದು ।

ನಿಂದಾಡುವ ದಾಶರಥಿಯೆ ತಂದೆ ।
ತಂದೆ ತಂದೆ ತಂದೆ ಈ ಪರಿ ಎನ್ನಾ ।
ನಂದವಾದ ಮನಕೆ ನಿನ್ನ ಮೂರ್ತಿ ।
ಪೊಂಬಿಸು ಭುವನ ಪಾವನವಾದ ಚರಿಣಾರ ।
ಎಂದ ಪಾಂಸ ಲೇಶ ಧರಿಪಾರಲ್ಲಿ ।
ಬಂದು ಕಾರುಣ್ಯ ಸಿಂಧು ನಿನ್ನಂಘ್ರಿನಖಚಂದ್ರ ।
ಚಂದ್ರಿಕೆಯಲಿ ಎನ್ನ ಹೃತ್ತಾಪವ ।
ನೊಂದಿಸು ನಾನಾವತಾರ ನಾರೆಯಣಾ ।
ಮಂದರೋದ್ಧರನೇ ಮಹಾಮಹಿಮಾ ।
ಸಂದೇಹ ಎನಗಿಲ್ಲ ನಿನ್ನ ಕಂಡಮೇಲೆ ।
ಬಿಂದುಮಾತುರ ಕ್ಲೇಶ ಎನಗಿಪ್ಪದೇ ।
ಕೊಂದು ಬಿಸುಟುವೆನು ಖಳರ ಉಪದ್ರವ ।
ಕಂದ ನಾನೆನಲೋ ನಿನಗೆ ಜನುಮಜನುಮ ।
ಎಂದೆಂದಿಗೆ ಎನ್ನ ಸಾಧನದಿಂದಲಿ ಆ–।
ನಂದು ಕೊಡುವೆನೆಂಬೊ ಕೀರ್ತಿಯುಂಟೇ ।
ಬಂದು ಸೇರಿದ ಭೂತ ಪ್ರೇತಾದಿಗಳು ಮಂತ್ರ–।
ದಿಂದಲಿ ಅನ್ನಪಾನಾದಿಗಳು ತಂದು ಇತ್ತದ–।
ರಿಂದ ವಶವಾಗಿ ಒಡನೊಡನೆ ।
ಹಿಂದೆ ತಿರುಗುತಿಪ್ಪವು ತ್ರಾಣಗೆಟ್ಟು ।
ವಂದಿಪೆ ಅದರಂತೆ ನಿನಗಲ್ಲವೂ ಎಳೆ–।
ಗಂದಿಯೋ ಸಂತಸ ಅನುಕಂಪನೆ ।
ಅಂದ ಜನಕೆ ಪ್ರಾಣ ನಿಜಸ್ವಭಾವ ಉ ।
ಪೇಂದ್ರ ವಿಜಯವಿಠ್ಠಲ ರಾಮ ರಘುಕುಲ ತಿಲಕಾ ॥೩॥

**ಅಟ್ಟ ತಾಳ**

ಜಡಚೇತನದೊಳು ವ್ಯಾಪ್ತವಾಗಿಪ್ಪನೆ ।
ದೃಢಭಕ್ತರಿಗೆ ತತ್ತದಾಕಾರ ರೂಪನಾಗಿ ।
ಬಿಡದೆ ಕಾಣಿಸಿಕೊಂಬುದೇನು ಸೋಜಿಗವೆ ।
ಬಡವ ಭಾಗ್ಯವಂತ ಎಂಬೊ ವಾರ್ತೆಯಲ್ಲಿ ।
ಅಡಿಗಡಿಗೆ ಕೇಳು ಇದರ ವಿಚಿತ್ರದ ।
ನುಡಿಬೇರೆ ನಡೆಬೇರೆ ಪಾರಾವಾರ ಮೂರ್ತಿಯೆ ।
ಸಡಗರ ಏನೆಂಬೆ ಯೋಗ್ಯತಾನುಸಾರ ।
ಕೊಡುವೆನು ಜ್ಞಾನ ಭಕುತಿ ವೈರಾಗ್ಯವ ।

ಎಡಿಗೆಡಿಗೆ ತನ್ನ ಧ್ಯಾನವ ಪಾಲಿಸೀ ।
ಪೊಡಿವಿಲಿ ಬುಧರೆಲ್ಲ ಮತ್ಸರದುರ್ಗವ ।
ಕಡಿದು ಮನೋರಥ ಪಡಕೊಂಡು ಸುಖಿಪರು ।
ಕಡಲಶಯನ ನಮ್ಮ ವಿಜಯವಿಠ್ಠಲರೇಯಾ ।
ಅಡಿಗಳರ್ಚಿಪರ ಚಿತ್ತದಲ್ಲಿ ನೆಲಸಿಪ್ಪ ॥೪॥

**ಆದಿ ತಾಳ**

ಆನಂದ ಜ್ಞಾನಪ್ರದ ಶ್ರೀನಾಥನ ದಕ್ಷಿಣ ವಾಮಾಂಘ್ರಿ ।
ಆನಂದಪಾದ ಆನಂದಪ್ರದ ವಾನರಕಾಂತ ಲಕ್ಷ್ಮಣ ಸುಗ್ರೀವ
ದಾನವನಿಂದಲಿ ಪೂಜೆಗೊಂಬಪಾದ ರಾಜಿಸುವಪಾದ ।
ದೀನಮಾನವರಿಗೆ ಒಲಿದೊಲಿದು ನಿತ್ಯ ।
ಧಾನ್ಯಪ್ರದಪಾದ ಮಾನಪ್ರದ ಪಾದ ।
ಶ್ರೀನಾರಿ ಕರಕಮಲ ಪೂಜಿತ ಸರ್ವಾಂಕಿತಪಾದ ಭವತಾರಕಪಾದ ।
ಏನೇನು ಬೇಡಿದಭೀಷ್ಟೆಯ ಕೊಡುವದು –
ಒಳಗೆ ಪೊಳೆವ ಪಾದ ಹೊರಗೆ ತೋರುವಪಾದ ।
ಆನಂದತೀರ್ಥರ ಮನದಲ್ಲಿ ನಿಂದ ಅತಿನಿರ್ಮಳ ಪಾದ, ಅಪ್ರಾಕೃತ ಪಾದ।
ದಾನಿಗಳರಸ ವಿಜಯ ವಿಠ್ಠಲ ಕಾಮ ।
ಧೇನು ರಾಮ ರಾಮಕೌಸಲ್ಯ ತನಯನ ಪಾದ ॥೫॥

**ಜತೆ**

**ವಸುಧೇಂದ್ರ ಮುನಿಯಿಂದ** ನಾನಾಪೂಜೆಯಗೊಂಡು ।
ವಸುಧಿಯೊಳಗೆ ಮೆರೆವ ವಿಜಯ ವಿಠಲ ರಾಮಾ ॥೬॥

* * *

## ॥ ಶ್ರೀ ಧನ್ವಂತ್ರಿ ಅವತಾರ ಸ್ತೋತ್ರ ॥



ಸುರಾಸುರರು ಸೇರಿ ಪಾಲ್ಗಡಲನ್ನು ಕಡೆವಾಗ ಒಡಮೂಡಿ ಮೇಲ್ಬಂದ ಮುದ್ದು ಮೂರುತಿಯಾದ ಧನ್ವಂತ್ರಿಯೇ, ನಮ್ಮ ದೇಹದಲ್ಲಿ ದಿನಾಲೂ ಶ್ವಾಸರೂಪದಿಂದ ಆಯುಷ್ಯ ಕ್ಷೀಣವಾಗುತ್ತದೆ. ಇದು ಕ್ಷೀಣಿಸಿದಂತೆ ಸಾರ್ಥಕವಾಗುವಂತೆ ಮಾಡಲು ವಸು, ರುದ್ರ ಆದಿತ್ಯರು ನಮ್ಮ ದೇಹದಲ್ಲಿದ್ದು ಆಯುಷ್ಯವಿರುವವರೆಗೆ ಅದನ್ನು ಆಯುರ್ಯಜ್ಞವೆಂದು ಚಿಂತಿಸಿ ಸಕ್ರಮವಾಗಿ ನಿನಗೆ ಸಮರ್ಪಿಸುತ್ತಾರೆ. ಮರಣವೇ ಅವಭೃತ.

ಸುಜನರ ಅನುಗ್ರಹದಿಂದ ಈ ರೀತಿಯಾಗಿ ಸದಾ ನಿನ್ನನ್ನು ಸ್ಮರಿಸುವ ನಮ್ಮ ಆಯುಷ್ಯವನ್ನು ಅಭಿವೃದ್ಧಿಗೊಳಿಸಿ ಅನಾದಿರೋಗವನ್ನು ದೂರಮಾಡೆಂದು ಸ್ತುತಿಸುತ್ತೇವೆ.

### ಸುಳಾದಿ – ೧೦

। ರಾಗ–ಭೈರವಿ–ಧ್ರುವ ತಾಳ ।

ಆಯು ವೃದ್ಧಿಯಾಗೋದು ಶ್ರೇಯಸ್ಸು ಬರುವದು ।
ಕಾಯಾ ನಿರ್ವಲಿನಾ ಕಾರಣವಾಹದೋ ।
ಮಾಯಾಹಿಂದಾಗುವದು ನಾನಾರೋಗದ ಬೀಜ ।
ಬೇಯಿಸಿ ಕಳೆವದು ವೇಗಾದಿಂದ ।
ನಾಯಿ ಮೊದಲಾದ ಕುತ್ಸಿತದೇಹ ನಿ–।
ಕಾಯುವತೆತ್ತು ದುಷ್ಕರ್ಮದಿಂದ ।
ಕ್ರೀಯಮಾಣ ಸಂಚಿತ ಭರಿತವಾಗಿದ್ದ ದುಃಖ ।

ಹೇಯಸಾಗರದೊಳು ಬಿದ್ದು ಬಳಲೀ ।
ನೋಯಿಸಿಕೊಂಡು ನೆಲೆಗಾಣದೆ ಒಮ್ಮೆ ತನ್ನ ।
ಬಾಯಿಲಿ ವೈದ್ಯಮೂರ್ತಿ ಶ್ರೀಧನ್ವಂತ್ರಿ ।
ರಾಯಾ ರಾಜೌಷಧಿ ನಿಯಾಮಕಕರ್ತ ।
ಕ್ರೀಯರಸನೆಂದು ತುತಿಸಲಾಗಿ ।
ತಾಯಿವೊದಗಿ ಬಂದು ಬಾಲನ್ನ ಸಾಕಿದಂತೆ ।
ನೋಯಗೊಡದೆ ನಮ್ಮನ್ನು ಪಾಲಿಪಾ-।
ಧೇಯಾ ದೇವಾದಿಗಳಿಗೆ ಧರ್ಮಜ್ಞ ಗುಣಸಾಂದ್ರ ।
ಶ್ರೇಯಸ್ಸು ಕೊಡುವನು ಭಜಕರಿಗೆ ।
ಮಾಯಾಮಂತ್ರದಿಂದ ಜಗವೆಲ್ಲ ವ್ಯಾಪಿಸಿ ಸ-।
ನ್ಯಾಯವಂತನಾಗಿ ಚೇಷ್ಟೆಮಾಳ್ಪಾ ।
ವಾಯುವಂದಿತ ನಿತ್ಯ ವಿಜಯ ವಿಠ್ಠಲರೇಯಾ ।
ಪ್ರಿಯನುಕಾಣೊ ನಮಗೆ ಅನಾದಿರೋಗ ಕಳೆವಾ ॥೧॥

## ಮಟ್ಟ ತಾಳ

ಧನ್ವಂತ್ರಿ ಶ್ರೀ ಧನ್ವಂತ್ರಿ ಎಂದು ।
ಸನ್ನುತಿಸಿ ಸತತ ಭಿನ್ನಜ್ಞಾನದಿಂದ ।
ನಿನ್ನವ ನಿನ್ನವನೊ ಘನ್ನತಿಯಲಿ ನೆನೆದ ।
ಮನ್ನುಜ ಭುವನದೊಳು ಧನ್ಯನು ಧನ್ಯನೆನ್ನಿ ।
ಚನ್ನಮೂರುತಿ ಸುಪ್ರಸನ್ನ ವಿಜಯ ವಿಠ್ಠ-।
ಲನ್ನ ಸತ್ಯವೆಂದು ಬಣ್ಣಿಸು ಬಹುವಿಧದಿ ॥೨॥

## ತ್ರಿವಿಡಿ ತಾಳ

ಶಶಿಕುಲೋದ್ಭವ ದೀರ್ಘತಮನಂದನ ದೇವಾ ।
ಶಶಿವರ್ನ ಪ್ರಕಾಶ ಪ್ರಭುವೆ ವಿಭುವೆ ।
ಶಶಿಮಂಡಲ ಸಂಸ್ಥಿತ ಕಲಶ ಕಲಶಪಾಣಿ ।
ಬಿಸಿಜಲೋಚನ ಅಶ್ವಿನೇಯ ವಂದ್ಯಾ ।
ಶಶಿಗರ್ಭ ಭೂರುಹ ಲತೆಪೊದೆತಾಪ ಓ-।
ಡಿಸುವೌಷಧಿ ತುಲಸಿ ಜನಕ ।
ಅಸುರ ನಿರ್ಜರತತಿ ನೆರೆದು ಗಿರಿಯತಂದು ।
ಮಿಸಕದಲೆ ಮಹೋದಧಿ ಮರ್ದಿಸಲಾಗಿ ।
ನಸುನಗುತ ಪುಟ್ಟಿದೆ ಪೀಯೂಷಘಟಧರಿಸಿ ।
ಅಸಮ ದೈವನೆ ನಿನ್ನ ಮಹಿಮೆಗೆ ನಮೋ ।
ಬಿಸಿಜಸಂಭವ ರುದ್ರ ಮೊದಲಾದ ದೇವತಾ ।

ಋಷಿನಿಕರ ನಿನ್ನ ಕೊಂಡಾಡುವರೂ ।
ದಶದಿಶದೊಳು ಮೆರೆವ ವಿಜಯವಿಠ್ಠಲ ಭಿಷ್ಕಾ ।
ಅಸುಇಂದ್ರಿಯಂಗಳ ರೋಗನಿವಾರಣ ॥೩॥

**ಅಟ್ಟ ತಾಳ**

ಶರಣು ಶರಣು ಧನ್ವಂತರಿ ತಮೋಗುಣನಾಶ ।
ಶರಣ ಆರ್ತಜನ ಪರಿಪಾಲಕ ದೇವಾ ।
ತರವೆ ಭವತಾಪ ತರಣ ದಿತಿಸುತ ।
ಹರಣಮೋಹಕ ಲೀಲಾ ಪರಮ ಪೂರ್ಣಬ್ರಹ್ಮ ಬ್ರಹ್ಮ ಉದ್ಧಾರಕ ।
ಉರುಪರಾಕ್ರಮ ಉರುಪರಾಕ್ರಮ ಉರಗಶಾಯಿ ।
ವರಕಿರೀಟ ಮಹಾಮಣಿ ಕುಂಡಲ ಕರ್ನ ।
ಮಿರುಗುವ ಹಸ್ತಕಂಕಣ ಹಾರಪದಕ ತಾಂ–।
ಬರ ಕಾಂಚೀಪೀತಾಂಬರ ಚರಣಭೂಷಾ ।
ಸಿರಿವತ್ಸಲಾಂಛನ ವಿಜಯ ವಿಠ್ಠಲೇಯಾ ।
ತರುಣಗಾರುತ ಜ್ಞಾನಮುದ್ರಾಂಕಿತ ಹಸ್ತಾ ॥೪॥

**ಆದಿ ತಾಳ**

ಏಳುವಾಗಲಿ ಮತ್ತೆ ತಿರಿಗಿ ತಿರುಗುತಲಿ ।
ಬೀಳುವಾಗಲಿ ನಿಂತುಕುಳ್ಳಿರುವಾಗಲಿ
ಹೇಳುವಾಗಲಿ ಮಾತು ಕೇಳುವಾಗಲಿ ಕರೆದು ।
ಪೇಳುವಾಗಲಿ ಪೋಗಿ ಸತ್ಕರ್ಮ ಮಾಡುವಾಗ ।
ಬಾಳುವಾಗಲಿ ಭೋಜನ ನಾನಾಷಡ್ರಸ ಸಂ–।
ಮ್ಮೇಳವಾಗಲಿ ಮೇಲು ಪುತ್ರಾದಿ ಒಡನೊಡನೆ ।
ಖೇಳವಾಗಿ ಮನುಜ ಮರ್ಯಾದೆ ನಿನ್ನಯ ।
ನಾಲಿಗೆ ಕೊನೆಯಲ್ಲಿ ಧನ್ವಂತರಿ ಎಂದು ಒಮ್ಮೆ
ಕಾಲ ಅಕಾಲದಲ್ಲಿ ಸ್ಮರಿಸಿದರೆ ಅವಗೆ ।
ವ್ಯಾಳಿ ವ್ಯಾಳಿಗೆ ಬಾಹ ಭವಬೀಜ ಪರಿಹಾರ ।
ನೀಲಮೇಘಶ್ಯಾಮ ವಿಜಯ ವಿಠ್ಠಲರೇಯಾ ।
ವಾಲಗ ಕೊಡುವನು ಮುಕ್ತರ ಸಂಗದಲಿ ॥೫॥

**ಜತೆ**

ಧಂ ಧನ್ವಂತರಿ ಎಂದು ಪ್ರಣವ ಪೂರ್ವಕದಿಂದ ।
ವಂದಿಸಿ ನೆನೆಯಲು ವಿಜಯ ವಿಠ್ಠಲ ವೊಲಿವಾ ॥೬॥

* * *

## ॥ ಶ್ರೀ ಹಯಗ್ರೀವಾವತಾರ ಸ್ತೋತ್ರ ॥



**ಶಶಿಮಂಡಲ ಮಂದಿರ ಮಧ್ಯದಿ ಯೋಗಾಸನದಲ್ಲಿ ಕುಳಿತ, ನಿತ್ಯ ಮಿನಗುವ ಶುಭಕಾಯನೇ, ಎಸಳುಗಂಗಳ ಚಲುವನೇ ಹುಂಕರಿಸುವ ನಾದವುಳ್ಳವನೇ, ಶಂಖ ಅಕ್ಷಮಾಲೆ, ಪುಸ್ತಕ ಜ್ಞಾನ ಮುದ್ರೆ ಹೊಂದಿದ ಚತುರ ಬಾಹುಗಳುಳ್ಳ ಕೌಸ್ತುಭಮಾಲಾಧಾರನಾದ ಭವ ಭಯಪರಿಹಾರಕ ಹಯವದನ ಮೂರ್ತಿಯೇ, ಸಜ್ಜನರಿಂದ ಅಪೇಕ್ಷಿತನಾದ ಸುಜ್ಞಾನದ ಖಣಿಯೇ, ನಾನು ನಿನ್ನನ್ನು ಆಶ್ರಯಿಸಿದ್ದೇನೆ. ಆಶ್ರಿತನಾದ ನನಗೆ ಶಾಸ್ತ್ರದ ಅಂತರ್ಯದ ಅರಿವನ್ನು ಅನುಗ್ರಹಿಸು.**

**ಶ್ರೀ ಗುರುವಾದಿರಾಜರಿಗೊಲಿದ ಕರುಣಾಸಾಗರನಾದ ನರಹಯನೇ, ನಿನ್ನ ಪಾದಾಶ್ರಯವನ್ನೇ ಪಡೆದ ನನ್ನನ್ನು ಸಂಸಾರದಿಂದ ಬಿಡುಗಡೆ ಮಾಡು.**

### ಸುಳಾದಿ – ೧೧

#### ರಾಗ–ಸಾರಂಗ–ಧ್ರುವತಾಳ

ಜಯಜಯ ಜಾನ್ಹವಿಜನಕ ಜಗದಾಧಾರ ।
ಭಯನಿವಾರಣ ಭಕ್ತ ಫಲದಾಯಕ ।
ದಯಪಯೋನಿಧಿ ಧರ್ಮಪಾಲ ದಾನವಕಾಲ ।
ತ್ರಯ ಹತ್ತೆಂಟು ಮೀರಿದ ತ್ರೈಲೋಕನಾಥ ಆ–।
ಶ್ರಯ ಸಂತರ ಕಾಮಧೇನು ಧೇನುಕಭಂಜ ।
ವ್ಯಯದೂರ ವ್ಯಾಧಿಹರಣ ವ್ಯಾಪ್ತ ವ್ಯಾಕುಲಹಾರಿ ।
ಪ್ರಿಯ ಪ್ರೇರಕ ಪ್ರಥಮ ಪ್ರಾಪ್ತಿ ಪ್ರಾಣ ।
ಜಯದೇವಿರಮಣ ಜಯಜಯ ಜಯಾಕಾರ ।

ಸುಯತಿಗಳ ಮನೋಹಾರ ಮಂದಹಾಸ ಚಂದ್ರೋ-।
ದಯಭಾಸ ಪೂರ್ಣಶಕ್ತಿ ಸರ್ವರೂಪ ।
ತ್ರಯಕಾಯ ತತ್ವ ತತ್ವ ತದಾಕಾರ ಮೂರುತಿ ।
ಕ್ರಿಯ ಗುಣಾನಂತ ರೂಪಾನಂತ ಏಕಾನೇಕ ಸಮಸ್ತ ।
ಸಯವಾಗಿಪ್ಪ ಸಮಸಮ ದೈವಾ ।
ಹಯಮೊಗಾ ವಾದಿರಾಜಗೊಲಿದಾ ವಿಜಯ ವಿಠ್ಠಲ ।
ಪಯೋನಿಧಿ ಶಯನ ಸತ್ವನಿಯಾಮಕ ॥೧॥

**ಮಟ್ಟ ತಾಳ**

ಶಶಿಮಂಡಲ ಮಂದಿರ ಮಧ್ಯದಲಿ ನಿತ್ಯ ।
ಮಿಸುಣಿಪ ಶುಭಕಾಯಾ ಯೋಗಾಸನನಾಗಿ ।
ಎಸುಳುಗಂಗಳ ಚೆಲುವ ಹುಂಕರಿಸುವನಾದ ।
ಬಿಸಜಾಕ್ಷ ಪುಸ್ತಕ ಜ್ಞಾನಮುದ್ರಾ ।
ಎಸೆವೆ ಚತುರಬಾಹು ಕೊರಳ ಕೌಸ್ತುಭಮಾಲೆ ।
ಶಶಿಮುಖಿಯರು ವೊಲಿದು ಸೇವೆಮಾಡುತಲಿರೆ ।
ಅಸುರರ ಕಾಳಗವ ಕೆಣಕುವ ಕಾಲ್ಗೆದರಿ ।
ದಶದಿಶ ಕಂಪಿಸಲು ಖುರಪುಟದ ರಭಸ ।
ಪುಸಿಯಲ್ಲ ನಮಗೆ ಪರದೇವತಿ ಇದೇ ।
ಕುಶಮೊನೆ ಮನದಲ್ಲಿ ಧ್ಯಾನ್ಯಮಾಡಲಿಬೇಕು ।
ಹಸನಾಗಿಕೇಳಿ ಮುದದಿ ವಾದಿರಾಜಾ ।
ಮಸಕರಿಗೆವೊಲಿದ ವಿಜಯವಿಠ್ಠಲರೇಯಾ ।
ಕುಶಲವ ಕೊಡುವನು ಈಪರಿ ಕೊಂಡಾಡೆ ॥೨॥

**ತ್ರಿವಿಡಿ ತಾಳ**

ನಾಶಿಕ ಪುಟದಿಂದ ಸರ್ವವೇದಾರ್ಥಂಗಳು ।
ಶ್ವಾಸೋಚ್ಛ್ವಾಸದಿಂದ ಪೊರಡುತಿವಕೋ ।
ಏಸುಬಗೆ ನೋಡು ಇದೇ ಸೋಜಿಗವೆಲ್ಲಾ ।
ಶ್ರೀಶನ್ನ ಸಮಸ್ತ ದೇಹದಿಂದ ।
ಭಾಸುರವಾಗಿದ್ದ ಸಾಕಲ್ಯ ಶ್ರುತಿಪತಿ ।
ಲೇಶಬಿಡದೆ ಪೊರಟು ಬರುತಿಪ್ಪವು ।
ಈ ಸಾಮರ್ಥಿಕೆ ನೋಡು ಅನ್ಯದೇವಕೆ ವುಂಟೆ ।
ಈಶನಯ್ಯಗೆ ಉಪದೇಶ ಮಾಳ್ಪಾ ।
ದೇಶ ಕಾಲವ ಮೀರಿ ತನಗೆ ತಾನೇ ಇಪ್ಪಾ ।

ಏಸು ಕಲ್ಪಕೆ ಸರ್ವಸ್ವಾತಂತ್ರನೋ ।
ಮೋಸ ಪೋಗುವನಲ್ಲ ಆರಾರ ಮಾತಿಗೆ ।
ಕೇಶವ ಕ್ಲೇಶನಾಶನ ಕಾಣಿರೋ ।
ದ್ವೇಷ ತಾಳಿ ಆಗಮ್ಯ ವೈದವನನ್ನು ।
ರೋಷದಿಂದಲಿ ಕೊಂದ ನಿಷ್ಕಪಟಿಯೋ ।
ಸೂಸುವ ಬಾಯಿಂದ ಸುರಿಯುವ ಜೊಲ್ಲು ಪಿ-।
ಯೂಷಕ್ಕಧಿಶ ಕಾಣೋ, ಸವಿದುಣ್ಣಿರೋ ।
ವಾಸುದೇವನೇ ಈತನೆ ಅವಲ್ಲಿಪ್ಪನೆಂದು ।
ಬೇಸರಗೊಂಡು ಬಳದಿರೀ ।
ಈ ಶರೀರದಲ್ಲಿ ಜೀವಾಂತರ್ಗತನಾಗಿ ।
ವಾಸವಾಗಿ ಅಣುಮಹಕಾಣೋ ।
ಹ್ರಾಸವೃದ್ಧಿಗಳಿಲ್ಲ. ವಿಶೇಷ ಅವಿಶೇಷ
ಈಸು ಬಗೆಯುಳ್ಳರೆ ಸ್ವರೂಪ ಭೂತ ।
ದೋಷರೂಪಗಳಲ್ಲಿ ಜ್ಞಾನಾನಂದಕಾರ್ಯ ।
ದಾಸರಿಗಾಗಿ ಈ ಪರಿಮಾಡುವ ।
ಆಶಾಬದ್ಧನು ಅಲ್ಲ ಆಪ್ತಕಾಮನು ಕಮ ।
ಲಾಸನ್ನ ಜನಕ ಸರ್ವಭೂಷಿತಾ ।
ಲೇಸು ವಾದಿರಾಜ ವಂದ್ಯ ವಿಜಯ ವಿಠ್ಠಲ ।
ಸಾಸಿರನಾಮದವೊಡಿಯ ಹಯವದನಾ ॥೩॥

॥ ಅಟ್ಟ ತಾಳ ॥

ಸುರರಿಗೆ ಹಯವಾಗಿ ಗೆಲಿಸುವನು ಗಂಧ-।
ರ್ವರಿಗೆ ವಾಜಿಯಾಗಿ ಪೋಗುವ ಮುಂಚಾಗಿ ।
ದುರುಳದಾನವರಿಗೆ ಅರ್ವನಾಗಿ ತಾನು ।
ಇರದೆ ಪರಾಭವನಾಗುವ ಸಿಗದಲೆ ।
ನರರಿಗೆ ಅಶ್ವನೆಂದೆನಿಸಿ ಮಹಾಭಾರ ।
ಹೊರುವನು ದಣಿವಿಕೆ ಇಲ್ಲದೆ ಅವರ ।
ಪರಮ ಪುರುಷನ್ನ ಅದ್ಭುತಚರಿತೆ ಕೇಳಿ ।
ಅರಿವಾದು ಮನದಲ್ಲಿ ಸರ್ವಜೀವಿಗಳೊಳು ।
ಇರುಳು ಹಗಲು ಈ ಪರಿಯಾಗಿ ಮಾಡುವ ।
ಮರಿಯಾದೆ ಇಪ್ಪದು ಮರಿಯಾದೆ ಸ್ಮರಿಸಿ ಪಾ-।
ಮರ ಬುದ್ಧಿ ಪೋಗಾಡಿ ತುರಿಯಾಶ್ರಮ ಮಣಿ ವಾ-।
ದಿರಾಜಯತಿ ಕರದಿಂದರ್ಚನೆಗೊಂಡ ವಿಜಯ ವಿಠ್ಠ-।
ಲರೇಯಾ ತುರಗಾಸ್ಯನುಕಾಣೋ ತೃಪ್ತಿಯ ಕೊಡುವನು ॥೪॥

॥ ಆದಿ ತಾಳ ॥

ಶಿತವರ್ನದಲಿ ಸತ್ವಗುಣದಲ್ಲಿ ।
ಜಾತ ವೇದಸಂಗೆ ಆಹುತಿ ಕೊಡುವಲ್ಲಿ ।
ಭೂತಳದಲ್ಲಿ ಮತ್ತೆ ಜಠರಾಗ್ನಿಯಲ್ಲಿ ।
ಆತುಮದಲ್ಲಿ ವಿತ್ತಪತಿಯಲ್ಲಿ ಹೇಳನ ।
ಪಾತಕ ಪೋಗುವೆಲ್ಲಿ ವಂಜರ ನದಿಯಲ್ಲಿ ।
ಸೋತ್ತಮರಲ್ಲಿ ವೇದ ಓದುವ ಠಾವಿನಲ್ಲಿ ।
ಮಾತುಪೂರ್ವರಂಗದಲ್ಲಿ ಭದ್ರಾಶ್ವ ಖಂಡದಲ್ಲಿ ।
ಜ್ಯೋತಿ ಪ್ರಕಾಶದಲ್ಲಿ ಮನಿಯ ದ್ವಾರದಲ್ಲಿ ।
ನೇತುರ ರೇಖೆಯಲ್ಲಿ ನಾಶಿಕಪುಟದಲ್ಲಿ ।
ದಾತನಲ್ಲಿ ಸರ್ವಜೀವರಲ್ಲಿ ನಿವಾಸಾ ।
ನೀತವಾಗಿ ಎಣಿಸು ನಿರ್ಣೈಸುವುದಕ್ಕೆ ।
ಶ್ರೀತರುಣಿಗಾದರೂ ಗೋಚರಿಸದು ಕಾಣೋ ।
ಈತನ ನೆನೆದರೆ ಬೇಡಿದ ಪುರುಷಾರ್ಥ ।
ಮಾತುಮಾತಿಗೆ ತಂದುಕೊಡುವ ಸರ್ವದಾ ।
ಆತುಮದೊಳಗಿದ್ದು ಆನಂದ ಕೊಟ್ಟು ಪಾಲಿಪ ।
ಶ್ರೀತಾಂಶುಮಂಡಲವದನ ವಿಜಯ ವಿಠ್ಠಲ ರೇಯಾ ।
ಪ್ರೀತಿಯಾಗಿ ಇಪ್ಪಾ ವಾದಿರಾಜಗೆ ಹಯವದನಾ ॥೫॥

ಜತೆ

ಗುರು ವಾದಿರಾಜಗೆವೊಲಿದ ಹಯವದನಾ ।
ಕರುಣಾಕರ ಮೂರ್ತಿ ವಿಜಯವಿಠ್ಠಲರೇಯಾ ।

* * *

## ಶ್ರೀ ಋಷಭಾವತಾರ ಸ್ತೋತ್ರ



ಮೇರುದೇವಿಯಲ್ಲಿವತರಿಸಿದ ಸೌಭರಿಮುನಿವಂದ್ಯ ಮೇಧಾದಿ ನಿಯಾಮಕ ವಿಷಯದ ಮಡುವಲ್ಲಿ ವಿಷದಂತನ ಕಸುವಡಗಿಸಿದ, ಋಷಿ ವೇಷಧಾರಿಯಾದ, ಋಷಭದೇವನೇ ಸದಾ ಎನ್ನ ಹೃದಯದಲ್ಲಿ ಸುಳಿದು ದುರಿತವನ್ನು ತರಿದು ಸಂಸಾರ ಸಾಗರದಿಂದ ದಾಟಿಸು.

### ಸುಳಾದಿ – ೧೨

#### ರಾಗ–ರೇಗುಪ್ತಿ–ಧ್ರುವ ತಾಳ

ಸೌಭಾಗ್ಯವಂತ ಜಯತು ಸೌಂದರ್ಯಸಾರ ಜಯತು ।
ಭೂಭಾರಹರಣ ಜಯತು ಭೂಮಾ ಜಯತು ।
ಶ್ರೀಭೂರಮಣ ಜಯತು ಶೃಂಗಾರ ಪುರುಷ ಜಯತು ।
ಶೋಭನಮೂರ್ತಿ ಜಯತು ಸೌಖ್ಯಾ ಜಯತು ।
ಲೋಭವಿರಹಿತ ಜಯತು ಲೋಕೇಶ ಜನಕ ಜಯತು ।
ಲಾಭ ಪ್ರದಾತ ಜಯತು ಲಘುವೆ ಜಯತು ।
ವೈಭೋಗಾನಂದ ಜಯತು ವೈಕುಂಠವಾಸ ಜಯತು ।
ಭೂಭೂಜ ರತ್ನ ಜಯತು ಭೂಷಾ ಜಯತು ।
ನಾಭಿಕಮಲಾ ಜಯತು ನಾಗಾರಿಗಮನಾ ಜಯತು ।
ಗೋ ಭೀತಿನಾಶ ಜಯತು ಗೋತ್ರಜ ಜಯತು ।
ಶ್ರೀಭಾಗ ಚರಣ ಜಯತು ತ್ರಿದಶವಂದಿತ ಜಯತು ।
ವೈಭವಕೀರ್ತಿಜಯತು ನಾನಾವತಾರ ಜಯತು ।

ಸ್ವಭಾವ ಲೀಲಾ ಜಯತು ಸ್ವಾಮೀ ಜಯತು ।
ಸಾಭಿಮಾನನೆ ಜಯತು ಸಮಸ್ತ ಫಲದಾ ಜಯತು ।
ಸಾಭೀಮದೈವ ಜಯತು ಸಮಸ್ತ ಸಾಧೂ ಜಯತು ।
ಸುಭಾಷ್ಯಪಾಲ ಜಯತು ಸುಖಸಾಂದ್ರ, ಜಯತು ।
ಕುಭಾವ ವೈರಿ ಜಯತು ಕುಶಲಾ ಜಯತು ।
ಸೌಭರಿ ಮುನಿ ವಂದ್ಯ ವಿಜಯ ವಿಠ್ಠಲ ಋಷಭ ।
ಈ ಭೋಗದಲ್ಲಿ ನಿಂದು ವಿಜ್ಞಾನವನ್ನೆ ಕೊಡು ॥೧॥

**ಮಟ್ಟ ತಾಳ**

ಋಷಭ ಋಷಭ ಮಹಾ ।
ಋಷಿಜನ ಮನೋಹರ ।
ವೃಷವಾಹನ ಪ್ರೀಯ ।
ಹೃಷಿಕೇಶ ಪರಮೇಶ ಋಷಿ ವೃಷಭ ।
ವಿಷಭಂಜನ ನಿತ್ಯ ವಿಷಯವಿದೂರ ।
ವಿಷಯದ ಮಡುವಿನೊಳಗೆ ।
ವಿಷದಂತನ ತುಳಿದ ವಿಜಯ ವಿಠ್ಠಲ ರೇಯಾ ।
ಋಷಿವೇಷವಧರಿಸಿ ವಸುಧೆಯೊಳಗೆ ಮೆರದೆ ॥೨॥

**ತ್ರಿವಿಡಿ ತಾಳ**

ಪಾರತಂತ್ರರಹಿತ ಪರಿಪೂರ್ಣ ವಿಜ್ಞಾನ ।
ಶಾರಿರ ಸತ್ವ ಜಾಗರ ಮೂರುತೀ ।
ಮೇರು ಗರ್ಭೋದಯ ಮೇಧಾದಿ ನ್ಯಾಮಕ ।
ಚಾರು ಪರಮಹಂಸರೂಪ ಭರತಜನಕ ।
ಧಾರುಣಿಯೊಳಗವಧೂತ ವೇಷವ ಧರಿಸಿ ।
ತೋರಿದೆ ಅಜಗರ ವೃತ್ತಿಯನ್ನು ।
ಸಾರಿಸಾರಿಗೆ ಮನುಜ ಲೀಲೆ ಇಂದಲಿ ಮೆರೆದೆ ।
ಆರಾರು ನುಡಿದದ್ದೆ ಸೈರಿಸಿಕೊಂಡೆ ।
ಮೂರು ಭುವನದೊಳು ಆಶ್ಚರ್ಯ ತೋರಿ ಸಂ ।
ಸಾರ ಉತ್ತರಿಸುವ ಮಾರ್ಗವ ತಿಳುಪಿ ।
ಊರ ಪೋರಂಗಳಿಂದ ನೀಚತ್ವ ನುಡಿಕೊಂ-।
ಡೀರಿತಿಯಲ್ಲಿ ವೊಪ್ಪಿದ ನಿರ್ದೋಷನೆ ।
ಆರುಬಲ್ಲರು ನಿನ್ನ ಆನಂದಾನಂದವ ॥
ವಾರಿಜೋದ್ಭವಾದಿಗಳು ಪೊಗಳಲೊಶವೆ ।

ಭಾರಕರ್ತ ನಮ್ಮ ವಿಜಯ ವಿಠ್ಠಲರೇಯಾ ।
ವಾರವಾರಕೆ ಎನ್ನ ಮನದಲ್ಲಿ ಸುಳಿದಾಡು ॥೩॥

**ಅಟ್ಟ ತಾಳ**

ತತುವ ಮೋದಾಂಬುಧಿ ತಪನೀಯವರ್ನನೆ ।
ತತುತಕ್ಕದ್ದು ವ್ಯಾಪಾರವ ಮಾಡುವಿ ।
ಹುತವಾಹನನೊಳು ಅಂತರ್ಧಾನನಾಗಿ ।
ಕ್ಷಿತಿಯೊಳು ಷೋಡಶಗಿರಿಯಲ್ಲಿ ಅಡಗಿದೆ ।
ಮತಿಹೀನ ಮನುಜರು ವಿಪರೀತ ತಿಳಿದು ದು-।

ರ್ಗತಿಯಲ್ಲಿ ಪೋಗಿಬೀಳುವರು ಶ್ರುತಿಸಿದ್ಧಾ ।
ಸತತ ನಿಜವೆಂದು ವೊಲಿಸಿದ ಮನುಜ ಉ ।
ನ್ನತ ಪದವಿಯಲ್ಲಿ ಸೇರಿ ಸುಖಿಸುವರು ।
ಅತಿ ಚಿತ್ರ ವಿಚಿತ್ರ ವಿಜಯ ವಿಠ್ಠಲ ಋಷಭ ।
ಯತಿಶಿರೋಮಣಿ ಮಧ್ವಮುನಿವಂದ್ಯ ಆನಂದಾ ॥೪॥

**ಆದಿ ತಾಳ**

ಸುಜನರ ಸಂತಾಪಹರಣ ಅನಾದಿಕಾಯ ।
ದ್ವಿಜಕುಲ ಸಂರಕ್ಷಣಯೋಗಿ ಯೋಗೇಶ್ವರ ।
ಭಜಿಸುವೆ ನಿನ್ನ ಪಾದ ಕಾಲಕಾಲಕೆ ಎನ್ನ ।
ವೃಜನಗಳು ಪೋಗಾಡಿ ಶುದ್ಧಾತ್ಮನಮಾಢು ।
ಅಜ ದೇವಾದಿಗಳಿಗೆ ಸಮಸ್ತ ಸಾಧನ ।
ಸೃಜಿಸಿಕೊಡುವೆ ವೇಗ ತಾರತಮ್ಯದಿಂದಲಿ ।
ಪ್ರಜಪಾಲ ಪಾವನ ವಿಜಯ ವಿಠ್ಠಲರೇಯಾ ।
ನಿಜಭಕ್ತರ ಕೈಯ್ಯ ಪೂಜೆಗೊಂಬ ಪರಮಾತ್ಮಾ ॥೫॥

**ಜತೆ**

ಅಂಜನಾಭ ಅಮೃತ ವಪುವೆ ಋಷಭ ನಿ-।
ರಂಜನ ಮೂರುತಿ ವಿಜಯ ವಿಠ್ಠಲ ಸ್ವಾಮಿ ॥೬॥

* * *

# ಶ್ರೀ ದತ್ತಾವತಾರ ಸ್ತೋತ್ರ



ಯೋಗೀ ಯೋಗಶಕ್ತಿಪ್ರದನಾದ, ಪ್ರಣತರಿಗೆ ಪ್ರಣವ ಪ್ರತಿಪಾದ್ಯನಾದ, ಸಜ್ಜನರಿಗೆ ಸತ್ಕರ್ಮ ಪ್ರದತ್ತನಾದ, ದತ್ತನಾಮಕ ಪರಮಾತ್ಮನೇ ಜಯತು ಜಯತು.

ಭಕ್ತಾಭೀಷ್ಟದತ್ತಾ, ಸದಾ ನಿನ್ನ ಸ್ಮರಣೆಯನ್ನಿತ್ತು, ಸದ್ವಿದ್ಯೆಯನ್ನು ದಯಪಾಲಿಸಿ ಈ ಭವಬಂಧನದಿಂದ ಬಿಡುಗಡೆಮಾಡು.

## ಸುಳಾದಿ – ೧೩

### ರಾಗ–ಭೈರವಿ–ಧ್ರುವತಾಳ

ದತ್ತಾಯೋಗೀಶ ಯೋಗಿ ಯೋಗ ಶಕ್ತಪ್ರದ ।
ದತ್ತಾ ಪ್ರಣತರಿಗೆ ಪ್ರಣವಪ್ರತಿಪಾದ್ಯ ।
ದತ್ತ ಸ್ವತಂತ್ರದಿಂದ ಜಗಕೆ ಸತ್ಕರ್ಮ ಪ್ರ–।
ದತ್ತ ಮಾಡಿಕೊಡುವ ದೀಪ್ತಾ ಚೂಡಾ ।
ದತ್ತಾ ಚೀರಾಂಬರಗೇಯಾ ವಲ್ಕಲವಾಸ ।
ದತ್ತಾ ದುರ್ವಾಸ ಚಂದ್ರ ಸಹಭವ ಭವ್ಯಹಂಸಾ ।
ನಿತ್ಯ ಪ್ರಕೃತಿರಮಣಾ ಮೂಲಮೂರ್ತಿ ।
ಅತ್ರಿನಂದನ ಕೃಷ್ಣಾಂಜನ ಬ್ರಹ್ಮಸೂತ್ರ ಪ–।
ವಿತ್ರ ಧಾರಣದೇವಾ ದೇವವಂದ್ಯಾ ।
ಸತ್ಕ್ರಿಯಾ ಸತತ ಸಾವಿರ ಹಸ್ತ ವರದ ।
ದೈತ್ಯ ಮೋಹಕ ರೂಪಾ ಘನ ಪ್ರತಾಪಾ ।
ಅತ್ಯಂತ ಜಗದ್ಭರಿತಾ ಜನನಾದಿ ಶೂನ್ಯ ಸ–।

ವೋರ್ಣತ್ತಮ ಮಹಾ ಪ್ರಭುವೆ ಸ್ವಪ್ರಭಾವಾ ।
ಕೀರ್ತಿ ಪಾವನವಪುಷ ವೈಕುಂಠವಾಸ ತಪೋ – ।
ವಿತ್ತ ಸುಚಿತ್ತ ಸಚ್ಚಿದಾನಂದಾತ್ಮಾ ಉತ್ತುಂಗ – ।
ವ್ಯಾಪ್ತಾ ಗೋಪ್ತಾ ಪ್ರಾಪ್ತಾ ಸಂತೃಪ್ತಾ ।
ತಪ್ಕಾಂಚನಗಾತ್ರಾ ನಿರ್ಜರಾಪ್ತಾ ।
ಚಿತ್ರವಿಚಿತ್ರ ಕರ್ಮ ವಿಜಯ ವಿಠ್ಠಲರೇಯಾ ।
ದತ್ತಾವತಾರ ಭಗದತ್ತಾಯುಧಧಾರಿ ॥೧॥

**ಮಟ್ಟ ತಾಳ**

ದತ್ತ ಜ್ಞಾನದತ್ತಾ ದತ್ತ ಭಕುತಿದತ್ತಾ ।
ದತ್ತ ಶ್ರವಣದತ್ತಾ ದತ್ತ ಮನನದತ್ತಾ ।
ದತ್ತ ದಾನದತ್ತಾ ದತ್ತಾ ಸಾಧನದತ್ತಾ ।
ದತ್ತ ಚಿತ್ತದತ್ತಾ ದತ್ತವಿರಕ್ತಿದತ್ತಾ ।
ದತ್ತ ಮಾರ್ಗದತ್ತಾ ದತ್ತಾದತ್ತಾ ಇಷ್ಟದತ್ತಾ ।
ದತ್ತ ಸರ್ವದತ್ತಾ ದತ್ತ ಭೋಗದತ್ತಾ ।
ದತ್ತಾನಂದದತ್ತಾ ದತ್ತ ತನ್ನನೆದತ್ತಾ । ದತ್ತಾತ್ರೇಯ
ದತ್ತ ಮೂರುತಿ ನಮ್ಮ ವಿಜಯವಿಠ್ಠಲರೇಯಾ ।
ದತ್ತನೆಂದವನಿಗೆ ದತ್ತಮಗನಾಹಾ ॥೨॥

**ತ್ರಿವಿಡಿ ತಾಳ**

ಎಣಿಸಿ ಪೇಳುವನಾರು ನಿನ್ನ ಸ್ವಭಾವವಾ ।
ಅನಸೂಯ ವರಸೂನು ಕರ್ದಮ ದೌಹಿತ್ರ ।
ಗುಣಿಸಿಕೊಂಡಾಡಿದ ಜನರಿಗೆ ಭೀತಿ ಕರ್ಮಾ ।
ಜನಿಸುವ ಬಗೆಯಿಲ್ಲ ಇಳಿಯೊಳಗೆ ।
ನೆನೆಸಿದವರ ಮಸ್ತಕದಲ್ಲಿ ಸುಳಿವ ।
ಮನಸಿಜ ಜನಕ ಜಗನ್ಮೋಹನಾ ।
ಕನಸಿನೊಳಾದರೂ ಕಳವಳಿಕಿಯಿಂದಾಡೆ ।
ಮನ ಸೂರೆಗೊಡುವಾನು ಮಂದಹಾಸಾ ।
ಅನುಸರಿಸಿ ತಿರುಗುವ ಭಕ್ತರೊಡನೆ ದತ್ತಾ ।
ಘನ ಶುದ್ಧಾತ್ಮನು ಕಾಣೊ ಗೌರವರ್ಣಾ ।
ಉಣಿಸುವ ತನ್ನಯ ನಾಮಾಮೃತವ ವ–।
ಕಣಿಸುವಂತೆ ನಿತ್ಯ ಪ್ರೇರಿಸುವಾ ।
ಜನ ಸುಮ್ಮನಿರದಲೆ ಜಪಿಸಿ ಈತನನಾಮಾ ।

ಮಣಿ ಸಾರಿಸಾರಿಗೆಲಿ ಎಣಿಕೆ ಗೈಯೊ ।
ಗುಣ ಸಾರಾತರ ನಮ್ಮ ವಿಜಯ ವಿಠ್ಠಲರೇಯಾ ।
ಮನಸಿನೊಳಗೆ ನಿಲುವಾ ನಂಬಿದವಗೆ ದತ್ತಾ ॥೩॥

### ಅಟ್ಟ ತಾಳ

ಯೋಗಾಸನ ಅಕ್ಷಮಾಲಾ ಜ್ಞಾನಮುದ್ರ ।
ಯೋಗಶಾಸ್ತ್ರಕರ್ತ ವರ್ತಮಾನಕಾಲ ।
ಭೂಗೋಲ ಚರಿಸುವ ಬ್ರಹ್ಮಚರ್ಯಧಾರ್ಯಾ ।
ಶ್ರೀಗುರು ಅಜಗುರು ಸರ್ವಜಗದ್ಗುರು ।
ಭಾಗೀರಥಿ ತೀರ ಬದರಿನಿವಾಸ ಅ-।
ಯೋಗ ಕರ್ಮಹಾರಿ ದತ್ತ ದಾನವರಿಗೆ ।
ಭೋಗಶಾಯಿ ಮುಕ್ತಾಭೋಗ ಭಾಗಾಧೇಯಾ ।
ಭಾಗ ತ್ರಯಗುಣ ನಾಶ ಗುಣಾಂಬುಧಿ ।
ರಾಗವಿದೂರ ಸರಾಗಮಣಿ ನಖಾ ।
ಪೂಗರ್ಭನೆನಿಸುವ ಈ ತನ್ನ ತಾತನ್ನ ।
ಅಗಸದಲಿ ನೋಡಿ ತಾತನ್ನ ಐಶ್ವರ್ಯ ।
ಯಾಗಾ ತೀರ್ಥಯಾತ್ರಿ ನಾನಾಪುಣ್ಯ ಸಂ-।
ಯೋಗ ದಿಂದಧಿಕ ದತ್ತನ ಸ್ಮರಣೆ ಒಮ್ಮೆ ।
ಜಾಗುಮಾಡದೆ ಮಾಡೆ ಮುದದಿ ಬಂದೊದಗೋದು ।
ಜಗರತನದಿಂದ ಮಹಾಪುಣ್ಯ ಪ್ರತಿದಿನ ।
ಸಾಗರ ಮಂದಿರ ವಿಜಯ ವಿಠ್ಠಲ ಭವ-।
ರೋಗದ ವೈದ್ಯ ವೈಲಕ್ಷಣ್ಯ ॥೪॥

### ಆದಿ ತಾಳ

ಜಯ ಜಯವೆಂದು ದತ್ತಮಂತ್ರವ ।
ನಯಮತಿಯಿಂದ ಜಪಿಸಲು ।
ತ್ರಯ ಪರಿಚ್ಛೇದಕ ಛೇದನಾ ।
ಭಯಪರ್ವತ ವಿಭೇದನಾ ।
ಅಯುತದುರಿತ ರೋದನಾ ।
ಕ್ಷಯರಹಿತ ಸನ್ಮೋದನಾ ।
ಜಯಜಯವೆಂದು ದತ್ತಾ ಮಂತ್ರಾ ।
ಪ್ರಿಯವಾಗಿಪ್ಪದು ಗತಿಲಬ್ಧಾ ।
ಲಯವಾಗುವದು ಪ್ರಾರಬ್ಧಾ ।

ಜಯ ಜಯವೆನ್ನನೊ ಬಲುಲಬ್ಧಾ ।
ತ್ರಯ ಜಗದೊಳವನೆ ತಬ್ಧಾ ।
ಸುಯತಿಗಳು ನುಡಿದ ಶಬ್ಧಾ ।
ಪಯಳಾಯಂತಿದೆ ನೋಡಬ್ಧಾ ।
ದಯಪೂರ್ಣನಮಗೆ ವಿಜಯ ವಿಠ್ಠಲ ದತ್ತ ।
ಬಯಕೆ ಕೊಡುವದು ವೊಲಿದು ಬಿಡಬ್ಧ ಅಬ್ಧಾ ॥೫॥

**ಜತೆ**

ದತ್ತಪ್ರಧಾನ ವಿದ್ಯಾ ಸಪ್ರದಾತಾ ಪಾರ–।
ತಂತ್ರರಹಿತ ವಿಜಯ ವಿಠ್ಠಲ ಪ್ರಜ್ಞಾ ॥೬॥

* * *



## ಶ್ರೀ ಕಪಿಲಾವತಾರ ಸ್ತೋತ್ರ



**ಅಜ್ಞಾನವೆಂಬ ಕತ್ತಲೆಯನ್ನು ಕಳೆದು ಸುಜ್ಞಾನದ ಬೆಳಗು ತೋರುತ್ತ ಜೀವನದಲ್ಲಿ ಸದಾ ಗೆಲುವನ್ನೀಯುವ ಶ್ರೀಕಪಿಲನಾಮಕನೇ,**

**ಸಾಧನ ಮಾರ್ಗವನ್ನು ತೋರಿ ನನ್ನನ್ನು ಸಂಸಾರದ ವನಧಿಯಿಂದ ದಾಟಿಸು ಮಂಗಳ ಖಣಿಯೇ,**

**ತುಲಸೀ ಪ್ರಿಯನಾದ, ಪ್ರಣವ ಮೂರುತಿಯೇ ನಿನ್ನ ಮಹಿಮೆಯನ್ನು ಯೋಗ್ಯತಾನುಸಾರವಾಗಿ ಅರಿತು ಸ್ತುತಿಸುವುದೇ ಪ್ರಾತಃಕಾಲ. ಕರ್ಮಬಂಧವನ್ನು ಪರಿಹರಿಸು ನಿರಾಕುಲ ಕಪಿಲಾ.**

### ಸುಳಾದಿ – ೧೪

#### ರಾಗ–ತೋಡಿ–ಧ್ರುವತಾಳ

ಉಪಜೀವ್ಯ ನಿಜಾನಂದ ಉದಧಿಶಯನ ಸರ್ವೇಶ ।
ಸಪುತ ಸಪುತಲೋಕ ಪಾಲಕ ಕಾಮೇಶ ।
ಉಪಜೀವ್ಯ ತಪೋಧನ ಪಾನಿಷ್ಟ ಪಾಪಾವನ ಪಾವಕ ।
ಜಪಶೀಲ ಸಿದ್ಧಮೂರ್ತಿ ಸಾಕಾರ ಸರ್ವಕಾರ ।
ಉಪದೇಶವ ತುಂಬರಾದಿ ನಾರದವಂದಿತ ಪಾದಾ – ।
ನುಪಮೇಯ ರಮೆಯರಸಯೋಗಿ ಜಟಿ ವಲ್ಕಲವಾಸಾ ।
ತ್ರಪುತ ತ್ರಿಗುಣಾತೀತ ತ್ರಿಕಾಲ ಕಾಲಿನಾಮಕ ।
ವಿಪುಲ ಮಧ್ಯ ಯೋಗಶಾಸ್ತ್ರ ರಚನೆಗೈಸಿದ ಗತಿಪ್ರದ ।
ಕುಪಿತರಹಿತ ನಿರುತ ಅಪಾರ ಅನಾದಿ ಅಪ್ರತಿಹತ ದೇವಾ ॥

ಚಪಲನಯನ ಅಪರಿಚ್ಛಿನ್ನವ್ಯಾಪ್ತ ಬೊಮ್ಮಾಂಡ ಕಾರಣ ।
ಉಪಜೀವ್ಯ ತ್ರಿಕೋಟಿ ಕಪಿಗಳಯ್ಯಾ ಕನಕವರ್ಣ
ಕಪಿಲ ವೃಷಾಕಪಿಪತಿ ಅಪರ ಬುದ್ಧನ ನೋಡು ಎ–।
ನ್ನಪರಾಧ ಕ್ಷಮೆಮಾಡಯ್ಯಾ ಕೃಪಣವತ್ಸಲ ।
ಉಪಹತಿಗಳನ್ನು ಬಿಡಿಸಯ್ಯಾ ।
ಉಪಜೀವ್ಯ ದೀಪುತ ವಿಜಯ ವಿಠ್ಠಲ ।
ಕಪಿಲಾವತಾರ ಲಾವಣ್ಯಾ ॥೧॥

### ಮಟ್ಟ ತಾಳ

ಪದ್ಮಸಂಭವ ತನ್ನ ಛಾಯದಿಂದಲಿ ಪುಟ್ಟಿದ ।
ಕರ್ದಮ ಮುನಿ ದೇವಹೂತಿಯಲ್ಲಿ ಬಂದು ।
ಉದ್ಭವವಾದ ಶುಕ್ಲ ಶೋಣಿತರಹಿತ ।
ಈದ್ಧರೆಯೊಳಗೆ ನಿನ್ನ ನಂಬಿದಮಾನವಗೆ ।
ಹೃದ್ರೋಗವೇ ಇಲ್ಲ ಸುಹೃತ ಸುಪ್ರಭ ಪ್ರಭಾಮೂರುತಿ ।
ಶುದ್ಧ ವಿಜಯ ವಿಠ್ಠಲ ಕಪಿಲಾತ್ಮಕ ।
ಉದ್ಧರಿಸುವ ಎನ್ನ ಮನದೊಳಗೆ ನಿಂದು ॥೨॥

### ತ್ರಿವಿಡಿ ತಾಳ

ಮುನಿವರೇಣ್ಯ ಸ್ವಾಮಿ ಸ್ವತಂತ್ರ ಕರ್ತ ಸ–।
ಜ್ಜನ ಮನೋಭೀಷ್ಟ ಭಯನಾಶಕ ಶಕ್ತ ।
ಜನನಿಗೆ ಜ್ಞಾನೋಪದೇಶವ ಪೇಳಿ ಸಾ–।
ಧನಮಾರ್ಗತೋರಿ ಸಂಸಾರವೆಂಬೋ ।
ವನಧಿಯ ದಾಟಿಸಿ ಸ್ನೇಹ ಭಾವದಿಂದ ।
ನಿನಗೆ ನೀನೆ ಪೊಳೆದ ಭಕುತವಶನೇ ।
ವನಜ ಭವಾದಿಗಳು ನಿನ್ನ ಲೀಲೆಯನೋಡಿ ।
ಗುಣಿಸಿ ಎಣಿಸಿ ಮೈಮರದರದಕೋ ।
ಎಣೆಗಾಣೆನೋ ಸ್ವೇಚ್ಛಾಕ್ರೀಡೆಗೆ ಮಂಗಳ ।
ಖಣಿಯೆ ತುಳಸೀಪ್ರಿಯ ಅತುಳ ಕೀರ್ತಿ ।
ಪ್ರಣವ ಮೂರುತಿ ನಮ್ಮ ವಿಜಯ ವಿಠ್ಠಲರೇಯಾ ।
ಮಣಿದು ನಮೋ ಎಂಬೆ ಸಾರಹೃದಯಬದ್ಧ ॥೩॥

**ಅಟ್ಟ ತಾಳ**

ಆದಿಮನುವಿನ ಕಾಲದಲ್ಲಿ ಪುಟ್ಟಿ ।
ಭೇದಾರ್ಥ ಜ್ಞಾನವ ಶಿಷ್ಯರಿಗೆ ಪೇಳಿ ।
ವೇದ ವೇದಾಂತವ ತಿಳುಪಿ ಅಜ್ಞಾನವ ।
ಭೇದಿಸಿಬಿಟ್ಟ ಬಿಸಿಜದಳಾಂಬಕ ।
ಸಾಧು ಸಾಧು ಸಚ್ಚಿದಾನಂದಾತ್ಮಾ ವಿ-।
ನೋದ ಮನುಜ ಕಾಯ ನಾರಾಯಣ ವರ-।
ಭೋಧ ಮುದ್ರ ಹಸ್ತ ಶಶಿವರ್ಣ ಸಂಕಾಶ ।
ಆದಿತ್ಯವಂದಿತ ವಿಜಯ ವಿಠಲರೇಯಾ ।
ವೈಧಾತೃ ಸೇವ್ಯ ನಿರಾಕುಲ ಕಪಿಲಾ ॥೪॥

**ಆದಿ ತಾಳ**

ಅರುಣೋದಯದಲೆದ್ದು ಕರಣ ಶುದ್ಧಿಯಿಂದ ।
ಗುರು ಕಪಿಲ ಕಪಿಲನೆಂದು ಸ್ಮರಿಸಿದ ಮಾನವಗೆ ।
ನಿರುತಮಾಡಿದ ಮಹತ್ತರ ಕರ್ಮಬಂಧ ।
ಪರಿಹಾರವಾಗಿ ಪೋಗುವದು ಪರಮ ಜ್ಞಾನಿಯಾಹ ।
ಪರಿಮಾಣಕ್ಕೆ ತನ್ನ ಕುರುಹು ।
ತೋರಿಸಿ ಯಮನ ಬಾಧೆ ತಪ್ಪಿಸುವನು ।
ನಿರಯವಿದೂರ ಮನುಪಾತ್ರ ವಿಜಯ ವಿಠ್ಠಲ ।
ಪೊರೆವ ಪ್ರಸನ್ನ ಜನರ ಹೃದಯದೊಳಗೆ ನಿಂದು ॥೫॥

**ಜತೆ**

ಕಪಿಲ ಕಪಿಲ ದೇವ ದೇಶ ಕಾಲತಃ ಪೂರ್ಣ ।
ದ್ರುಪದ ನಂದನ ವರದ ವಿಜಯ ವಿಠ್ಠಲ ಮೂರ್ತಿ ॥೬॥

* * *

## ಶ್ರೀ ವೃಷಾಕಪಿ ಪ್ರಿಯ ಕಪಿಲಾಯ ನಮಃ

**ಬೆಳಗಿನ ಜಾವದಲ್ಲಿ ಕಪಿಲನ ನಾಮ ಜಪಿಸಿದವರಿಗೆ ಅಪಜಯವೇ ಮೊದಲಾದ ಕ್ಲೇಶಗಳಿಲ್ಲ. ಅಪರಿಮಿತವಾದ ಸೌಖ್ಯವಾಗುವುದಲ್ಲದೇ ಅವನ ಕುಲಕೋಟಿಯೇ ಉದ್ಧಾರವಾಗುತ್ತದೆ ಎಂದು ದಾಸವರ್ಯರ ಆಪ್ತವಾಕ್ಯ.**

**ಶುದ್ಧಾತ್ಮ ಸುಗುಣಸಾಂದ್ರ ಸುಖವಾರಿಧಿಯಾದ, ಭಕುತರ ಮನೋಹರ ಮಾಧವ ಕಪಿಲನೇ, ಸದಾ ನಿನ್ನನ್ನು ಸ್ಮರಿಸುವರ ಸಹವಾಸದಲ್ಲಿಟ್ಟು ತಮ ಪರಿಚ್ಛೇದವನ್ನು ಕಳೆದು, ಹೃತ್ಕಮಲದಲ್ಲಿ ನಿನ್ನ ಚರಣಾಬ್ಜಗಳ ದರ್ಶನಕೊಟ್ಟು ಕಾಪಾಡು.**

### ಸುಳಾದಿ – ೧೫

### ರಾಗ–ತೋಡಿ–ಧ್ರುವ ತಾಳ

ಸಿದ್ಧಿದಾಯಕ ಶಿಷ್ಯಜನ ಪರಿಪಾಲ ಪರಮ–।
ಶುದ್ಧಾಥ್ಮ ಸುಗುಣಸಾಂದ್ರ ಸಉುಖವಾರಿಧಿ ।
ನಿದ್ರಾರಹಿತ ನಿದ್ರಾರಮಣ ನಿರ್ವಿಕಾರ ।
ಚಿದ್ದೇಹಿ ಸರ್ವಕಾಲ ಸುಂದರಸಾರ ।
ಪದ್ಮಸಂಭವ ಬಲಿ ಪ್ರಕ್ಷಾಲಿತ ಪಾದ ಮಹಾ ।
ಹೃದ್ರೋಗನಾಶ ವೈಕುಂಠವಾಸ ।
ವಿದ್ಯಾತೀತ ವಿಶ್ವನಾಟಕ ನಾರಾಯಣ ।
ವಿದ್ಯುಉದ್ದಾರಕ ಉದಧಿಸದನಾ ।
ಸಿದ್ಧಾದಿವಿನುತ ಸಂತತ ಪಾತಾಳವಾಸಿ ।
ಬುದ್ಧಿ ವಿಶಾಲ ಮಹಿಮ ಪಾದಹಾರಿ ।
ಖದ್ಯೋತ ವರ್ಣ ಸಕಲ ವ್ಯಾಪ್ತ ಆಕಾಶ ಅಮಿತ ।
ಬದ್ಧ ವಿಚ್ಛೇದ ನಾನಾರೂಪಾತ್ಮಕಾ ।
ಅದ್ವೈತಕಾಯಾ ಮಾಯಾರಮಣ ರಾಜೀವನೇತ್ರಾ ।
ಅದ್ವಯ ಅನಾದಿ ಪುರುಷ ಚಿತ್ರ ।
ಕರ್ದಮ ಮುನಿಸೂನು ವಿಜಯ ವಿಠ್ಠಲ ಕಪಿಲ ।
ನಿರ್ದೋಷ ಕರುಣಾಬ್ಧಿ ಸರ್ವಾಧಾರಿ ॥೧॥

### ಮಟ್ಟ ತಾಳ

ಆದಿ ಮನ್ವಂತರದಿ ಜನಿಸಿದ ಮಹದ್ದೈವ ।
ಆದಿ ಪರಬೊಮ್ಮ ಬೊಮ್ಮನಯ್ಯಾ ಜೀಯಾ ।

ಸಾಧುಜನ ಪ್ರೀಯಾ ಸಂತತ ಮುನಿತಿಲಕಾ ।
ಬೋಧಶರೀರ ಭಕತರ ಮನೋಹರ ಹರಿ ।
ಮಾಧವ ಸಿರಿ ವಿಜಯ ವಿಠ್ಠಲ ವಿಮಲೇಶ ।
ಮೋದಮತಿ ಕೊಡುವ ಕಪಿಲ ಭಗವನ್ಮೂರ್ತಿ ॥೨॥

**ತ್ರಿವಿಡಿ ತಾಳ**

ಘನ ಮಹಿಮಾ ಗೌಣಾಂಡದೊಳಗೆ ಲೀಲೆಯಿಂದ ।
ಜನಿಸಿ ಮೆರೆದೆ ಬಿಂದುಸರೋವರದಲ್ಲಿ ।
ಮಿನುಗುವ ದ್ವಯ ಹಸ್ತ ಅಪ್ರಾಕೃತಕಾಯ ।
ಇನನಂತೆ ಒಪ್ಪುವ ಶಿರೊರುಹವೊ ।
ಕನಕ ಪುತ್ಥಳಿಯಂತೆ ಕಾಂತಿ ತ್ರಿಭುವನಕ್ಕೆ ।
ಅನವರತ ತುಂಬಿ ಸೂಸುತಲಿದಕೊ ।
ಜನನಿ ದೇವಹೂತಿಗೆ ಉಪದೇಶವನು ಮಾಡಿ ।
ಗುಣ ಮೊದಲಾದ ತತ್ವವ ತಿಳಿಸಿದೆ ।
ತನುವಿನೊಳಗೆ ನೀನೆ ತಿಳಿದು ತಿಳಿದೆ ನಿತ್ಯ ।
ಜನರನ್ನು ಪಾಲಿಸುವ ಕಪಿಲಾಖ್ಯನೆ ।
ಅನುದಿನ ನಿನ್ನಧ್ಯಾನವ ಮಾಡಿ ಮಣಿಯಿಂದ ।
ಎಣಿಸುವ ಸುಜನಕ್ಕೆ ಜ್ಞಾನ ಕೊಡುವೆ ।
ಎಣೆಗಾಣೆ ನಿನ್ನಾಲಚನದ ಶಕ್ತಿಗೆ ಸಗರ ।
ಜನಪ ನಂದನರನ್ನು ಭುಗಿಸಿದೆ ।
ಅನುಮಾನವಿದಕಿಲ್ಲ ನಿನ್ನ ನಂಬಿದ ಮೂಢ ।
ಮನುಜನಿಗೆ ಮಹಪದವಿ ಬರುವದಯ್ಯಾ ।
ಮುನಿಕುಲೋತ್ತಮ ಕಪಿಲ ವಿಜಯವಿಠಲರೇಯ ।
ಎನಗೆ ಯೋಗ ಮಾರ್ಗವ ತೋರು ತವಕದಿಂದ ॥೩॥

**ಅಟ್ಟ ತಾಳ**

ಕಪಿಲ ಕಪಿಲಯೆಂದು ಪ್ರಾತಃಕಾಲದಲೆದ್ದು ।
ಸಪುತ ಸಾರಿಗೆಲಿ ನುಡಿದ ಮಾನವನಿಗೆ ।
ಅಪಜಯ ಮೊದಲಾದ ಕ್ಲೇಶಗಳೊಂದಿಲ್ಲಾ
ಅಪರಿಮಿತ ಸೌಖ್ಯ ಅವನ ಕುಲಕೋಟಿಗೆ ।
ಗುಪುತ ನಾಮವಿದು ಮನದೊಳಗಿಡುವದು ।
ಕಪಟಜೀವರು ಈತನು ಒಬ್ಬ ಋಷಿ ಎಂದು ।
ತಪಿಸುವರು ಕಾಣೊ ನಿತ್ಯ ನರಕದಲ್ಲಿ ।

ಕೃಪಣವತ್ಸಲ ನಮ್ಮ ವಿಜಯ ವಿಠಲರೇಯಾ ।
ಕಪಿಲಾವತಾರನು ಬಲ್ಲವಗೆ ಬಲು ಸುಲಭ ॥೪॥

**ಆದಿ ತಾಳ**

ಬಲಹಸ್ತದಲ್ಲಿ ಯಜ್ಞಶಾಲೆಯಲ್ಲಿ ಕಂ–।
ಗಳ ಕಪ್ಪಿನಲ್ಲಿ ಹೃದಯಸ್ಥಾನ ನಾಭಿಯಲ್ಲಿ ।
ಜಲಧಿ ಗಂಗಾ ಸಂಗಮದಲ್ಲಿ ಗಮನದಲ್ಲಿ ।
ತುಲಸೀ ಪತ್ರದಲ್ಲಿ ತುರಗ ತುರುವಿನಲ್ಲಿ ।
ಮಲಗುವ ಮನೆಯಲ್ಲಿ ನೈವೇದ್ಯ ಸಮಯದಲ್ಲಿ ।
ಬಲುಕರ್ಮಬಂಧಗಳು ಮೋಚಕವಾಗುವಲ್ಲಿ ।
ಚಲುವನಾದವನಲ್ಲಿ ವಿದ್ಯೆಪೇಳುವನಲ್ಲಿ ।
ಫಲದಲ್ಲಿ ಪ್ರತಿಕೂಲ ಇಲ್ಲದ ಸ್ಥಳದಲ್ಲಿ ।
ಬೆಳೆದ ಗರ್ಭಗಳಲ್ಲಿ ಅಗ್ನಿಯಲ್ಲಿ ಹರುವ –।
ಜಲದಲ್ಲಿ ಜಾಂಬುದ ನದಿಯಲ್ಲಿ ಶ್ಲೋಕದಲ್ಲಿ ।
ವಲಿಮುಖ ಬಳಗದಲ್ಲಿ ಆಚಾರಶೀಲನಲ್ಲಿ ।
ಘಳಿಗೆ ಆರಂಭದಲ್ಲಿ ಪಶ್ಚಿಮ ಭಾಗದಲ್ಲಿ ।
ಪೊಳೆವ ಮಿಂಚಿನಲ್ಲಿ ಬಂಗಾರದಲ್ಲಿ ಇನಿತು ।
ಕಾಲ ಅಕಾಲಕ್ಕೆ ಬಿಡದೆ ಸ್ಮರಿಸು ಕಪಿಲ ಪರಮಾತ್ಮನ್ನ ।
ಗೆಲುವುಂಟು ನಿನಗೆಲವೋ ಸಂಸಾರದಿಂದ ವೇಗ ।
ಕಲಿಯುಗದೊಳಗಿದೆ ಕೊಂಡಾಡಿದವರಿಗೆ ।
ಖಳರ ಅಂಜಿಕೆಯಿಲ್ಲ ನಿಂದಲ್ಲಿ ಶುಭಯೋಗ ।
ಬಲವೈರಿನುತ ನಮ್ಮ ವಿಜಯ ವಿಠ್ಠಲರೇಯಾ ।
ಇಳೆಯೊಳಗೆ ಕಪಿಲಾವತಾರನಾಗಿ ನಮ್ಮ ಭಾರವೊಹಿಸಿದಾ ॥೫॥

**ಜತೆ**

ತಮಪರಿಚ್ಛೇದ ಈತನ ಸ್ಮರಣೆ, ನೋಡು ಹೃ–।
ತ್ಕಮಲದೊಳಗೆ ವಿಜಯವಿಠ್ಠಲನ್ನ ಚರಣಾಬ್ಜ ॥೬॥

* * *

# ಶ್ರೀ ವೇದವ್ಯಾಸಾವತಾರ ಸ್ತೋತ್ರ



**ಯೋಗಾಸನದಲ್ಲಿ ಆರೂಢನಾದ ಅಜಭವಾದಿಗಳಿಗೆ ವಿಜ್ಞಾನದಾಯಕನಾದ, ಜ್ಞಾನಾನಂದಾದಿಗಳೇ ಸ್ವರೂಪಭೂತವಾದ ದೇಹವುಳ್ಳವನಾದ ಅಭೇದ್ಯ ಅದಿಮಧ್ಯಾಂತರಹಿತ ಸೃಷ್ಟ್ಯಾದ್ಯಷ್ಟಕರ್ತೃ ಸಜ್ಜನಪಾಲಕನಾದ ಮಧ್ವಾಂತರ್ಗತ ಶ್ರೀವೇದ ವ್ಯಾಸನೇ ನಿನಗೆ ಅನಂತಾನಂತ ನಮನಗಳು.**

**ಜ್ಞಾನಮಯ ತೇಜನಾದ ಬಾದರಾಯಣನೇ ತಮ ಸಂಬಂಧವ ಕಳೆದು ವಿಮಲ ಸುಜ್ಞಾನವನ್ನಿತ್ತು ಸದಾ ನನ್ನನ್ನು ಪಾಲಿಸು.**

## ಸುಳಾದಿ – ೧೬

### ರಾಗ–ತೋಡಿ–ಧ್ರುವತಾಳ

ಯತಿಗಳ ಶಿರೋರತುನಾ ಸತಿಯ ಅವಿಯೋಗಿ ।
ರತಿಪತಿಜನಕಾ ಸ್ವರತ ಸ್ವಪ್ರಕಾಶ ।
ಅತಿತಾದ್ಭುತ ಮಹಿಮ ಪತಿತಪಾವನ ನಾಮಾ ।
ನತಜನ ಸುರಧೇನು ದಿತಿಜ ತಿಮಿರಭಾನು ।
ಅತಿದೂರ ದೂರ ಸಂತತ ದಯಾಪರ ।
ಚತುರ ನಾನಾಸುರತತಿ ಕರಕಮಲಾ–।
ರ್ಚಿತಪಾದ ಸುಂದರ ದೀನಮಂದಾರ ।
ಪ್ರತರ್ದನನಾಮ ನಮ್ಮ ವಿಜಯ ವಿಠಲ ಸತ್ಯ–।
ವತಿಸೂನು ಜಗದೊಳು ಪ್ರತಿಯಿಲ್ಲದೆ ದಾತಾ ॥೧॥

### ಮಟ್ಟ ತಾಳ

ಜ್ಞಾನಮಯಾಕಾರ ಜ್ಞಾನಮಯಾನಂದಾ ।
ಜ್ಞಾನಮಯ್ಯೈಶ್ವರ್ಯ ಜ್ಞಾನಮಯವರ್ನ ।
ಜ್ಞಾನಮಯತೇಜಾ ಜ್ಞಾನಮಯಶಕ್ತಿ ।
ಜ್ಞಾನಮಯಾಂಬುಧಿ ಜ್ಞಾನವಿಲೋಲ ನಾ-।
ಮಾನಿ ವಿಜಯ ವಿಠ್ಠಲನೆ ನಿನಗೆ ಸಮಾ ।
ಮೌನಿವೃತ ಧೃತನೆ ಜ್ಞಾನಸುಖಸಾಂದ್ರಾ ॥೨॥

### ತ್ರಿವಿಡಿ ತಾಳ

ಕಲಿಯ ವ್ಯಾಪಾರ ವೆಗ್ಗಳವಾಗಿ ವ್ಯಾಪಿಸಿ ।
ಸಲೆ ಧರ್ಮಾವಳಿಗಳು ಅಳಿದು ಪೋಗಿರಲಾಗಿ ।
ಸುಲಭ ಜ್ಞಾನವೆಲ್ಲ ಮಲಿನದಿಂದಲಿ ಕೆಟ್ಟು ।
ಇಳೆಯೊಳು ಉತ್ತಮ ಸಂಪ್ರದಾಯಕ ದಾ ।
ಸುಳುವು ಕಾಣದೆಪೋಗಿ ಅಳಲಿಗೀರ್ವಾಣರು ।
ಜಲಜಸಂಭವನು ಒಂದಾಗಿನಿಂದೂ ।
ತಲೆವಾಗಿ ಉಸಿರಲು ಬಲವಾಗಿ ವಶಿಷ್ಟ-।
ಕುಲದಲ್ಲಿ ಜನಿಸೀದ ಬಲುದೈವವೇ ।
ನಳಿನಾಕ್ಷಮಹ ಸಿರಿ ವಿಜಯವಿಠ್ಠಲ ಬದರಿ ।
ನಿಲಯ ನಿನ್ನ ಲೀಲೆಗೆ ನೆಲೆಯಾವದೋ ಜೀಯಾ ॥೩॥

### ಅಟ್ಟ ತಾಳ

ಪರಾಶರನ ಉದರದಲ್ಲಿ ಬಂದು ।
ಮೂರಾರು ಪುರಾಣವಿರಚಿಸಿ ಅದರೊಳು ।
ಆರುಸತ್ವ ಆರುರಾಜಸ ತರುವಾಯ ।
ಆರುತಾಮಸ ಇನಿತಷ್ಟದಶವೆಂದು ।
ಧಾರುಣಿ ತುಂಬಲು ಕರುಣದಿಂದ ।
ಸೂರಿ ಮುಕ್ತರಿಗೆ ನಿತ್ಯ ಸಂಸಾರಿಗೆ ।
ಘೋರ ತಮಸಿಗೀ ಮೂರು ಪರಿಮಾಡಿ ।
ಕಾರಣವೆನಿಸಿ ಪ್ರತಿಷ್ಠಿಸಿ ಕಲಿಯ ನಿ-।
ವಾರಣವನು ಮಾಡಿದ ಭಾರತಕರ್ತನೆ ಸುಜ-।
ನರಿಗೆ ಜ್ಞಾನವಬೋಧಿಸಿ ಸುಕೃತದ ।
ದಾರಿಯತೋರಿದ ದ್ವಯಪಾಯನಮುನಿ ।
ಈರೇಳು ಭುವನದೊಳಾರು ನಿನಗೆ ಎಣೆ ।

ಕಾರುಣ್ಯನಿಧಿ ಪುಣ್ಯ ವಿಜಯವಿಠ್ಠಲಮುನಿ-।
ವರೇಣ್ಯಾ ಸುರರಗ್ರಣ್ಯ ನಿರ್ವಿಣ್ಣಾ ॥೪॥

**ಆದಿ ತಾಳ**

ತಮಸಂಬಂಧವ ಕಳೆದು ವಿಮಲಜ್ಞಾನವನ್ನು ।
ಅಮರರಿಗೆ ಪಾಲಿಸಿದೆ ಅಮಿತತೇಜಸದಿಂದ ।
ಕಮಂಡಲು ದಂಡಕಾಷ್ಟ ಸಮೀಚೀನವಾದ ಕರ-।
ಕಮಲದಲ್ಲಿ ಧರಿಸಿದಮಲಕಾಷಾಯಾಂಬರಾ-।
ಗಮದರ್ಥ ಶಿಷ್ಯರಿಗೆ ಪ್ರಮೇಯಗಳ ಪೇಳುತ ।
ಕ್ರಮ ನೂರಾರು ಮಾಡಿದ ಕುಮತಿಯ ಪರಿಹರಿಸಿ ।
ದಮಯತೆನಾಮಯತಿ ವಿಜಯ ವಿಠ್ಠಲನನು-।
ಪಮ ರಾಜ್ಯವನು ಕ್ರಮಿಯಿಂದ ಆಳಿಸಿದ ॥೫॥

**ಜತೆ**

ಬಾದರಾಯಣ ಸುಖಕಾರಣ ಭಕುತರಿಗೆ:
ವೇದವ್ಯಾಸನೆ ವಿಷ್ಣು ವಿಜಯವಿಠ್ಠಲವ್ಯಾಸ ॥೬॥

* * *



## ಶ್ರೀ ಕೃಷ್ಣಾವತಾರ ಸ್ತೋತ್ರ



**ಶ್ರೀ ಕೃಷ್ಣಾವತಾರವು ಪರಮಾತ್ಮನ ಅವತಾರಗಳಲ್ಲಿ ಒಂದು. ಆದರೂ ಇದು ಅತಂತ್ಯ ವಿಸ್ತೃತವಾದದ್ದರಿಂದ ನಾನಾ ಮುಖಗಳಲ್ಲಿ ಬೆಳೆದುಬಂದಿವೆ.**

**ಕೃಷ್ಣನ ಬಾಲಲೀಲೆ, ಗೋಪಿಕಾ ಸ್ತ್ರೀಯರೊಂದಿಗೆ ಶೃಂಗಾರಭಾವ, ಯೋಗೀಶ್ವರ ಕೃಷ್ಣನ ನಡೆನುಡಿಗಳು – ಹೀಗೆ ಕೃಷ್ಣಾವತಾರ ಕಥೆಯಲ್ಲಿ ಕಾಣುವ ವೈವಿಧ್ಯತೆಯನ್ನು ಈ ಭಾಗದ ಸುಳಾದಿಗಳಲ್ಲಿ ನೋಡಬಹುದಾಗಿದೆ.**

### ಸುಳಾದಿ – ೧೭

ದಶಮಸ್ಕಂದ ಭಾಗವತದಲ್ಲಿ ವರ್ಣಿತವಾದ ಶ್ರೀಕೃಷ್ಣನ ಮಹಿಮಾ ಸ್ತೋತ್ರವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.

ಅಜನ ಬಿನ್ನಪದಂತೆ ವಸುದೇವ ದೇವಕಿಯರಲ್ಲಿ ಕೃಷ್ಣ ರೂಪದಿಂದ ಅವತರಿಸಿದಿ ಸರ್ವೋತ್ಕೃಷ್ಟನೇ ಕಂಸಾದಿಗಳನ್ನು ಸಂಹರಿಸಿ ಭೂಭಾರವಿಳುಹಿದೆ ಪಾಂಡವರನ್ನು ಗೋವಿಪ್ರರನ್ನೂ ಸಂರಕ್ಷಿಸಿ ಸದ್ಧರ್ಮವನ್ನು ಸ್ಥಾಪಿಸಿದೆ.

ಶುದ್ಧಭಕ್ತರ ಹೃದ್ವನಜದಲ್ಲಿ ವಿರಾಜಮಾನನಾದ ಮುದ್ದು ಕೃಷ್ಣನೇ ನನ್ನನ್ನುದ್ಧರಿಸು.

ಹೇ, ಶ್ರೀಕೃಷ್ಣನೇ ನನ್ನ ಇಂದ್ರಿಯಗಳಲ್ಲಿ ಆ ಕೃಷ್ಣವಾದ ದೋಷಗಳನ್ನು ಕಳೆದು ಕಾಪಾಡು.

ಷೋಡಶ ಕಳಾಯುಕ್ತವಾದ ಲಿಂಗದೇಹವನ್ನು ಭಂಗಗೊಳಿಸಿ ಸ್ವರೂಪ ಸುಖ ಕೊಡು.

**ರಾಗ–ಸಾರಂಗ–ಧ್ರುವ ತಾಳ**

ಕೃಷ್ಣಾ ಕಮಲನಾಭಾ ಕ್ರೀಡಾವಿನೋದ ಸರ್ವೋ–।
ತ್ಕೃಷ್ಟ ಉದಾರ ಮನುಜವಿಗ್ರಹ ಲೀಲಾ ।
ಕೃಷ್ಣ ಬಾಂಧವ ಗೋಪಾ ಖಗವಾಹನ ದೇವಾ ।
ಅಷ್ಟ ಮಹಿಷಿ ರಮಣಾ ಶಾಮವರ್ನಾ ।
ಸೃಷ್ಟಿ ಸಂಹಾರ ಕರ್ತಾ ನಿರ್ದೋಷ ಗುಣವಾರಿಧಿ ।
ಶ್ರೇಷ್ಟಜನಕ ಸ್ವಾತಂತ್ರ ಪುರುಷಾ ।
ದುಷ್ಟಾದಾನವ ಹರಣಾ ದುಃಖನಿವಾರಣಾ ।
ಇಷ್ಟಾರ್ಥಪಾಲಿಸುವ ವಿಶ್ವಾ ಮನೋ–।
ಭೀಷ್ಟವೇ ಭುಜಗಶಯ್ಯಾ ಸಕಲರಿಗೆ ಬ–।
ಲಿಷ್ಟನೇ ಭವದೂರ ಅನಂತಕಾಲ ಧ–।
ರ್ಮಿಷ್ಟನೇ ವೈಕುಂಠರಮಣ ಗೋಪಾಲನಾಥ ।
ನಿಷ್ಟಜನರ ಪಾತ್ರ ಮಿತ್ರಕೋಟಿ ತೇಜ ।
ತೃಪ್ತ ಸಂತತ ಸಾರ್ವಭೌಮಾ ಬಲು ಪ್ರ–।
ತಿಷ್ಟ ಉಂಟಾದ ದೈವ ಸರ್ವರೊಳಗೆ ಪ್ರ–।
ವಿಷ್ಟನಾಗಿ ನಾನಾಚರಿತೆ ನಡಿಸುವ ಮಾಯಾ ।
ಕಷ್ಟ ದಾರಿದ್ರರಹಿತಾ ಕರುಣಿ ದಾನಿಗಳರಸ ।
ವಿಷ್ಣು ವಿಶ್ವರೂಪ ಲೋಕವಿಲಕ್ಷಣ–।
ವೃಷ್ಣಿಕುಲೋದ್ಭವ ವಿಜಯ ವಿಠ್ಠಲ ಎನ್ನಾ–।
ರಿಷ್ಟ ಪೋಗಾಡು ದಿವ್ಯದೃಷ್ಟಿಯಿಂದಲಿ ನೋಡು ॥೧॥

**ಮಟ್ಟ ತಾಳ**

ಧರಣಿಯೊಳಗೆ ಮಹಾದುರುಳರು ಉದುಭವಿಸಿ ।
ನಿರುತ ಧರ್ಮಕೆ ಕೇಡುತರತಿರಲಾಗಿ ನಿ–।
ರ್ಜರ ಸಮುದಾಯವು ನೆರೆದು ಯೋಚಿಸಿ ತಾ–।
ಮರಸ ಸುತನ ಬಳಿಗೆ ಹರಿದುಪೋಗಲು ನಿನಗೆ ।
ಅರುಹಲು ಕೇಳುತ್ತಲೇ ಕರುಣದಿಂದಲಿ ಆದರಿಸಿ ।
ಸುರರಿಗೆಲ್ಲಾ ಧರಣಿಯೊಳಗೆ ಅವತರಿಸಿ ಮುಂದಾಗಿ ಸಂ–।
ಚರಿಸುತ್ತಲಿರು ಎಂದು ಪರಮಾನುಗ್ರಹಮಾಡಿ ।
ಪೊರೆದಾ ಪ್ರೀತಿದೈವಾ ನರಲೀಲೆ ತೋರಿ ವಿಜಯವಿಠ್ಠಲ ।
ನರಹರಿ ರೂಪವಧರಿಸಿದ ಪರಮ ಮಂಗಳ ಮೂರ್ತಿ ॥೨॥

**ರೂಪಕ ತಾಳ**

ಅಸುರ ಕಂಸನು ತಾಮಸಬುದ್ಧಿಯಲ್ಲಿ ವ್ಯ–।
ಖ್ಯಸನಾಗಿ ರೋಷದಲ್ಲಿ ವಸುದೇವ ದೇವಕಿಯ–।
ಮಸದು ಮತ್ಸರಿಸಿ ಇಡಿಸಿದ ನಿಗಳವ ಬಂ–।
ಧಿಸಿ ಶೆರೆಮನೆಯಲ್ಲಿ ಅಸುಯವ ಬಡುತಲೆ ।
ಕುಸುಮನಾಭನೇ ಜನಿಸುವೆನೆಂದು ಮೌ–।
ನಿಸ ವೇಷವನು ತಾಳಿ ಕುಶಲದಿಂದಲಿ ಅ–।
ವಸುದೇವ ದೇವಕಿ ಬಸುರಿಲಿ ಉದುಭವಿಸಿ ಚಕ್ರಾಬ್ಜಗದಾ ।
ಬಿಸಿಜ ಚನ್ನಾಗಿ ಧರಿಸಿದ ಚತುರಹಸ್ತಾ ।
ದಿಶೆಗೆ ರವಿಯಂತೆ ರಂಜಿಸುವ ಸ್ವಪ್ರಕಾಶ ।
ಹಸುಳೆಯಾಗಿ ತೋರಿದ ಪರಂಜ್ಯೋತಿ ।
ವಸುಧಿ ಭಾರಹರಣ ವಿಜಯ ವಿಠ್ಠಲ ನೀನೇ ।
ಶಿಶುವಾಗಿ ಕಣ್ಣಿಗೆ ಕಾಣಿಸಿಕೊಂಡೆ ಈರ್ವರಿಗೆ ॥೩॥

**ಝಂಪೆ ತಾಳ**

ಮಧುರಾ ಪುರದಲಿ ಜನಿಸಿ ವೇಗದಿ ಯಮುನಾ–।
ನದಿದಾಟುವಾಗ ಉರಗನು ಸೇವೆಯನುಮಾಡೆ ।
ಒದಗಿ ತಂದುನಿನ್ನ ಯಶೋದಾದೇವಿಯ ।
ಬದಿಯಲ್ಲಿ ಇಟ್ಟು ದುರ್ಗಾದೇವಿಯ ವೈಯೇ ।
ಆದರಿಂದ ಕಂಸಗೆ ಖೇದವೆಗ್ಗಳಿಸೆ ಕ ।
ರದು ಪೂತನಿಯಟ್ಟೇ ಅವಳ ಅಸುಹೀರಿದೆ ।
ಒದದೆ ಶಕಟನ ವನಕ್ಕೆ ಪೋದಲ್ಲಿ ಕಾಲಿಲೀ ।
ಮುದದಿಂದಲಿ ಬಲುಜಾರ ಚೋರನೆನಿಸಿದೆ ।
ಮದುವೆ ಇಲ್ಲದೆ ಬಹು ಮಕ್ಕಳನ್ನು ಪಡೆದೇ ।
ಗದೆ ಬಿಲ್ಲು ಗಜುಗು ಚಂಡಾಟದಲಿ ಮೆರೆದೇ ।
ಎದುರಾದ ಹಯ ವೃಷಭ ಬಕಧೇನುಕವತ್ಸ–।
ಮೊದಲಾದ ಖಳರಮರ್ದಿಸಿ ಯಮುಳಾರ್ಜುನರ ।
ಪದದಲ್ಲಿ ಶಾಪವನು ಕಳೆದು ಕಿಚ್ಚನೇನುಂಗಿ ।
ಹೃದಯದೊಳಗೆ ಇದ್ದ ಕಾಳಿಂಗನ ತುಳಿದು ಕಾಯ್ದು ।
ಸದರವಿಲ್ಲದೆ ಗಿರಿಗೆ ಹಾಕಿದನ್ನವನ್ನುಂಡು ।
ತುದಿಬೆರಳಲಿಂದೇಳು ದಿವಸ ಗಿರಿಯಧರಿಸಿ ।
ತ್ರಿದಶನಾಯಕನ ಭಂಗಿಸಿದೆ ಆ ಕ್ಷಣದಲೀ ।
ಕ್ಷುಧಿಗೆ ಅಂಬಲಿಕುಡಿದು ಗೋವಳರನಟ್ಟಿಯಾ–।

ಗದ ಅನ್ನಸತಿಯರಿಂದಲಿ ತರಿಸಿ ಭುಂಜಿಸಿದೆ ।
ಪದಮಗರ್ಭಗೆ ಬೆಡಗುತೋರಿದ ಮಹದ್ದೈವ ।
ಪದುಮಲೋಚನ ನಮ್ಮ ವಿಜಯವಿಠ್ಠಲರೇಯಾ ।
ಮದನಾಟದಲ್ಲಿ ಗೋಪಿಯರಕೂಡ ನಲಿದಾ ॥೪॥

### ತ್ರಿವಿಡಿ ತಾಳ

ಕರೆಯಬಂದಕ್ರೂರ ಭಕುತನ್ನ ಮನ್ನಿಸಿ ।
ಮರಳೆ ನಾರಿಯರ ವೊಡಂಬಡಿಸಿ ।
ಬರುತ ಉದಕದೊಳು ರೂಪವತೋರಿ ।
ಕರಿಯ ಸೀಳಿದೆ ರಜಕನಸಹಿತ ।
ಶರಾಸನಮುರಿದು ಗೋಮಕ್ಕಳೊಡನುಂಡೆ ।
ಹರುಷದಿಂದಲಿ ಮಾಲೆಕೊಡಲು ಧರಿಸಿಕೊಂಡೆ ।
ಕುರೂಪಿಯ ತಿದ್ದಿ ದಿವ್ಯಾಂಗನಿಯಮಾಡಿ ।
ತರುಳನಾಗಿ ಪೋಗಿ ಸೊಕ್ಕಿದಾನಿಯಕೊಂದೆ ।
ವರಿಸಿದೆ ಮಲ್ಲರ ಕಾಳಗದೊಳಗೆ ನಿಂದು ।
ಹರಿದು ಕಂಸನಪಿಡಿದು ಅವನ ಈಡಾಡಿ ।
ಉದರಮೇಲೆ ಕುಣಿದು ಅವನ ಮರ್ದಿಸಿದೆ ಮುಂದೆ-।
ಸೆರೆಬಿದ್ದ ಜನನಿ ಜನಕರ ಬಿಡಿಸಿದೆ ।
ಮೆರೆದ ಬಾಲನಾಗಿ ಸೋಜಿಗವತೋರಿ ।
ಪರಮಜ್ಞಾನಿ ನೀನೆ ಸಾಂದೀಪನಲಿ ಓದೀ ।
ಗುರುಪುತ್ರ ಮೃತವಾಗಿರಲು ತಂದಿತ್ತೇ ।
ಸಿರಿರುಗ್ಮಿಣಿ ಸತ್ಯಭಾಮೆಯರ ಮಿಕ್ಕಾದಷ್ಟ ।
ತರುಣಿಯರ ಮದುವ್ಯಾದಿ ಚರಿತ ತೋರೀ ।
ಭರದಿಂದ ಜರಾಸಂಧ ಕಾಲಯಮ ಶಿಶುಪಾಲ ।
ನರಕಹಂಸಡಿಬಿಕ ಸಾಲ್ವಪೌಂಡ್ರಿಕ ।
ದುರುಳಾ ಶ್ರೀಗಳ ದಂತವಕ್ತ್ರ ಬಲುದೈತ್ಯರ ।
ಒರಿಸಿದ ಅವರವರ ದುರುಳಾತೆಯನು ನೋಡಿ ।
ಕರುಣದಿಂದಲಿ ಮುಚುಕುಂದನ್ನ ಪಾಲಿಸೀ ।
ಪರಿಪರಿಬಗೆಯಿಂದ ಶರಧಿಯೊಳಗೆ ನಲಿದೆ ।
ಹರನಲ್ಲಿ ಸಂತಾನಬೇಡಿ ತಪವಮಾಡಿದೆ ।
ಹಿರಿದೋ ನಿನ್ನ ಮಹಿಮೆ ಪೊಗಳಾಲಳವೇ ।
ಅರಸು ಉಗ್ರಸೇನೆಗೆ ವೊಲಿದ ವಿಜಯವಿಠ್ಠಲ ।
ಸರಿಸರಿಬಂದಂತೆ ಲೀಲೆ ಮಾಡಿದ ದೇವ ॥೫॥

## ಅಟ್ಟ ತಾಳ

ದ್ವಾರಕಾಪುರದಲ್ಲಿ ನಾರಿಯರಕೂಡ ।
ವಾರವಾರಕೆ ವಿಹಾರಮಾಡಿದ ದೈವಾ ।
ನಾರದನುವೊಂದು ಪಾರಿಜಾತವುತರೇ ।
ಕಾರುಣ್ಯದಲಿ ಪೋಗಿ ನಾರಿಯಸಂಗಡ ।
ಪಾರಿಜಾತವೃಕ್ಷ ಬೇರರಸಿ ತಂದೆ ।
ದಾರಿದ್ರತನದಲ್ಲಿ ಧಾರುಣಿಸುರ ನಿನ್ನ ।
ಸಾರಲು ಭಾಗ್ಯ ಅಪಾರವಾಗಿಯಿತ್ತೇ ।
ಆರು ಹತ್ತುಸಾವಿರ ಸತಿಯರಲ್ಲಿ
ಈರೈದುಸುತರು ಕುಮಾರಿ ಒಬ್ಬಳ ವಿ-।
ಸ್ತಾರದಿಂದಲಿ ಪೆತ್ತ ಮೀರಿದಾ ದೈವವೇ ।
ವಾರಿಧಿಯೊಳು ಪೋಗಿ ಕಿರೀಟಿಗೋಸುಗ ।
ಧಾರುಣಿಸುರನ ಕುಮಾರನ ಕರೆದಿತ್ತೇ ।
ಭೂರಿ ದಕ್ಷಿಣದಿಂದಾ ಧ್ವರವ ಮಾಡಿದೆ ।
ಕೋರಿದವರ ಮನಸಾರ ವರವನೀವಾ ।
ವಾರಿಜಧರ ನಮ್ಮ ವಿಜಯವಿಠ್ಠಲರೇಯಾ ।
ತೋರಿದೆ ಸುರಮುನಿ ನಾರದಗೆ ಬೆಡಗು ॥೬॥

## ಆದಿ ತಾಳ

ಏಕಮೇವ ನೀನು ಲೋಕದೊಳಗೆ ಬಲು ।
ಪ್ರಾಕೃತ ಚರಿತೆ ಅನೇಕ ಬಗೆಯಲಿ ತೋರಿ ।
ಆ ಕಂದರ್ಪಜ ಪಿನಾಕಿಯ ಬಕುತನ್ನ ।
ಸೂಕುಮಾರಿಗೆ ಸೋತು ತಾಕಿ ಸೆರೆಬಿದ್ದಿರಲು ।
ಪಾಕಶಾಸನ ಸುಧಾಕಲಶ ತಂದವನ್ನ ।
ನೀ ಕರುಣದಿಂದಲೇರಿ ರಾಕಾಬ್ಜನಂತೆ ಪೊಳೆವ ।
ನಾಕ ಜನರ ನೋಡಿ ಶ್ರೀಕಂಠನ ಹಿಂದುಮಾಡಿ ।
ಭೂಕಂಪಿಸುವ ಬಲೀಕುಮಾರನ ಕರಗ-।
ಳಾ ಕಡಿದು ಮೊಮ್ಮಗನ ಜೋಕೆಯಿಂದಲಿ ಬಿಡಿಸಿ ।
ಲೋಕ ಮೂರರೊಳಗೆ ಸಾಕಾರನೆನಿಸಿದೆ ।
ಸಾಕುಮಾಡಿದ ಯದುಕುಲವನ್ನು ವ-।
ನೀಕೆ ನೆವದಿಂದ ಲೋಕೇಶ ತಲೆದೂಗೆ ।
ಸಾಕಿದೆ ಭೂಮಿಯ ತೂಕಾ ಇಳುಹಿ ವೇಗ ।

ವಾಕು ಉದ್ಧವಗೆ ವಿವೇಕಮಾರ್ಗವ ಪೇಳಿ ।
ಈ ಕೃಷ್ಣಾವತಾರ ಸಾಕುಮಾಡಿ ವಂ-।
ದು ಕಳೇವರ ಇಟ್ಟು ಈ ಕುಂಭಿಣಿಗೆ ತೋರಿ ।
ದಾ ಕಪಟನಾಟಕ ಶ್ರೀಕಾಂತ ತಾ-।
ಳಂಕ ತಮ್ಮ ವಿಜಯವಿಠ್ಠಲಾ ।
ಸೋಂಕಿದಾಕ್ಷನ ತೊಂಡೆ ಭೂಕಾಂತವಾಗಿದೆ ॥೭॥

**ಜತೆ**

ಪಾರ್ಥಸಾರಥಿ ಕುರುವಂಶ ಘಾತಕನೆ ಮು-।
ಕ್ತಾರ್ಥ ಎನ್ನ ದೊರೆ ವಿಜಯವಿಠ್ಠಲರೇಯಾ ॥೮॥

* * *



## ಸುಳಾದಿ-೧೮

ಭಾಗವತ ತಾತ್ಪರ್ಯ ನಿರ್ಣಯದಲ್ಲಿ ವರ್ಣಿತವಾದ ಶ್ರೀಕೃಷ್ಣಾವತಾರ ಮಹಿಮೆಯನ್ನು ಶ್ರೀದಾಸರಾಯರು ಸಂಗ್ರಹವಾಗಿ ಈ ಸುಳಾದಿಯಲ್ಲಿ ಸ್ತುತಿಸಿದ್ದಾರೆ.

ಬೊಮ್ಮಾದಿಗಳ ಪೆತ್ತ ರಮ್ಮೆಯರಸನೇ, ಸತಿಯರ ಭೋಗಿಸಿ ಸುತರ ಪಡೆದನೆಂಬ ಗುಟ್ಟೇನು ? ಗತಿಪ್ರದಾಯಕನಾಗಿ ಮೆರೆವ ನೀನು ಗತಿಯಾಗಬೇಕೆಂದು ಸುತರಿಗಾಗಿ ಕೈಯೊಡ್ಡಿದಿ. ಅಮಿತ ಭೋಜನನೆಂದು ಕರೆಸಿಕೊಂಡು ಕ್ಷಿತಿಯೊಳಗೆ ಭಕ್ತರಿತ್ತ ಸ್ವಲ್ಪಕ್ಕೆ ತೇಗುವದೇನು ? ಅಪ್ರಾಕೃತ ಶರೀರನಾದ ನೀನು ಮಾನವರೂಪ ತಾಳಿದಾಗ ಕಾಯಬಿಟ್ಟನು ಎಂಬುದರ ಮರ್ಮವೇನು ?

ನಿನ್ನ ಲೀಲೆಯಿಂದ ಜ್ಞಾನಿಗಳು ಸಂತೋಷಿಸುತ್ತಾರೆ. ಸುವಿರುದ್ಧಗಳನ್ನು ತೋರುವ ಪರಬ್ರಹ್ಮನೇ, ಮಹಾಭವರೋಗಕ್ಕೆ ನೀನೇ ವೈದ್ಯನೆಂದು ಸ್ತುತಿಸಿ ತಲೆಬಾಗುವೆ.

### ರಾಗ-ಭೈರವಿ-ಧ್ರುವತಾಳ

ಸತತ ಬ್ರಹ್ಮಚಾರಿ ಎನಿಸಿಕೊಂಡು ಪರಿ-।
ಕ್ಷಿತನ ಪ್ರಾಣವನ್ನು ಉಳಹಿದ ದೈವವೆ ।
ರತಿಪತಿ ವ್ಯಾಪಾರದಲ್ಲಿ ಶ್ರೇಷ್ಟನೆನಿಸಿ ಅನ್ಯ-।
ಸತಿಯರ ಭೋಗಿಸಿ ಸುತರ ಪಡೆದದೇನೋ ।
ಚತುರಮೊಗಾದಿಗಳ ಪೆತ್ತ ಪರಮಪುರುಷ ।
ಗತಿಪ್ರದಾಯಕನಾಗಿ ಮೆರೆದೆ ಕಮಲನಾಭಾ ।
ಗತಿಯಾಗಬೇಕೆಂದು ಸುತನಗೋಸುಗ ಪೋಗಿ ।
ಕೃತವಿರೋಧಿಯವೊಲಿಸಿ ವರವಕೈಕೊಂಡದ್ದೇನೊ ।
ನುತಿಸಿದ ಜನರಿಗೆ ಅನುದಿನತಪ್ಪದಲೇ ।
ಹಿತವಾಗಿರಾವುತ್ತಿಪ್ಪ ಭಕ್ತವತ್ಸಲದೇವ ।
ಶಿತವಾಹನಗೊಲಿದು ರಣದೊಳು ಸುಧನ್ವನ್ನ ।
ಹತಮಾಡಿಸಿದ್ದು ಆವದೋ ಕರುಣತನವೋ ।
ತುತಿಸುತಿಪ್ಪರು ನಿನ್ನ ನಿತ್ಯ ತೃಪ್ತನೆಂದು ।
ಕೃತಭೂಜರೊಂದಾಗಿ ಗಣಣೆಕಾಣದೆ ಎಣಿಸಿ ।
ಕ್ಷಿತಿಯೊಳು ಭಕ್ತರಿತ್ತ ಸ್ವಲ್ಪಕ್ಕೆ ತೇಗುವೆ ।
ಅಮಿತಭೋಜನನೆಂದು ಕರಿಸಿಕೊಂಬುವದೇನೋ ।
ಪತಿತಪಾವನ ರಂಗಾ ವಿಜಯ ವಿಠಲ ನಿನ್ನ ।
ಕೃತಕಾರ್ಯಂಗಳಿಗೆ ನಾನೇನೆಂಬೆ ತಲೆದೂಗಿ ॥೧॥

**ಮಟ್ಟ ತಾಳ**

ಬಲುರವಿ ಪ್ರಕಾಶನೆಂದು ನಿನ್ನನ್ನು ।
ಕಲಕಾಲಾ ಬಿಡದೆ ಪೊಗಳುವ ಬಗೆ ನೋಡು ।
ಇಳಿಯೊಳಗೆಯಿದ್ದ ಮನುಜರ ಕಣ್ಣಿಗೆ ।
ಬೆಳಗುತೋರಿ ಪ್ರೀತಿಮಾಡಿದ ಪರಿಯೇನೋ ।
ಹಲವು ಬಗೆಯಿಂದ ಶುದ್ಧಾತ್ಮನೆಂದು ।
ವೊಲಿಸಿ ವೇದಂಗಳು ಬೆರಗಾಗುತಲಿರೇ ।
ಗಲಭೆಮಾಡದೆ ಪೋಗಿ ಗೊಲ್ಲತಿಯರ ಮನೆ ।
ಒಳಪೊಕ್ಕು ಪಾಲು ಮೊಸರು ಬೆಣ್ಣೆಯ ಕದ್ದೆ ।
ಜಲಜಜಾಂಡದಕಿಂತ ಭಾರವುಳ್ಳನವನೆಂದು ।
ನೆಲೆಗಾಣೆನು ನಿನ್ನ ಕೀತಿಗೆ ಎಣೆಯುಂಟೇ ।
ಕುಲಸತಿ ನಾರದಗೆ ಮಾರಿದ ಸಮಯದಲಿ ।
ತುಲಸಿದಳಕ್ಕಿಂತ ಕಡಿಮೆಯಾದದುಯೇನೋ ।
ಕಲಿಭಂಜನ ನಮ್ಮ ವಿಜಯ ವಿಠ್ಠಲ ನಿನ್ನ ।
ಸುಲಭತನಕೆ ಎಲ್ಲಿ ಸರಿಗಾಣೆ ನೋಡಿದರು ॥೨॥

**ತ್ರಿವಿಡಿ ತಾಳ**

ನೀನೇ ಅಪ್ರಾಕೃತಶರೀರವೆನಿಸಿಕೊಂಡು ।
ಅನಂತಕಲ್ಪಕ್ಕೆ ಬಾಳುವ ಭವದೂರಾ ।
ಮಾನವರೂಪವ ಬಂದಾಗ ಕಾಯುವ ।
ಕ್ಷೋಣಿಯೊಳಗೆ ಬಿಟ್ಟುಪೋದ ನೆನಿಸುವುದೇನೊ ।
ಆನಂದಮಯನಾಗಿ ಸುಖಿಸುವ ಸರ್ವೇಶ ।
ಮಾನದರ್ಭಕನಂತೆ ಅಳುವ ಲೀಲಗಳ್ಯಾಕೆ ।
ಜ್ಞಾನಪೂರ್ಣನಾಗಿ ಜಗದೊಳಗಿಪ್ಪನೆ ।
ಏನೆಂಬೆ ನಿನ್ನ ವಿಚಿತ್ರ ಮಹಿಮೆಗಾನು ।
ಕ್ಷೋಣಿ ವಿಬುಧನಾದ ಸಾಂದೀಪನ ಬಳಿಯ ।
ದೀನವಂತನಾಗಿ ವಿದ್ಯೆ ಓದಿದುದೇನೂ ।
ಶ್ರೀನಾಥ ನೀನಹುದೋ ನಿನ್ನ ಸೌಭಾಗ್ಯಕ್ಕೆ ।
ಪ್ರಾಣಾದಿಗಳು ಎಣಿಸಿ ನೀಚನಾದುಗ್ರ ।
ಸೇನೆಗೆ ಪರಾಕು ಪೇಳುವರಾ ।
ಮೌನಿಗಳರಸ ಶ್ರೀ ವಿಜಯ ವಿಠ್ಠಲರೇಯಾ ।
ನೀನಾಡುವ ಲೀಲೆ ಜ್ಞಾನಿಗಳಿಗೆ ಬಲುಹರುಷ ॥೩॥

### ಅಟ್ಟ ತಾಳ

ನಿಜ ಸಂಕಲ್ಪ ನೀನೆಂದು ಪೇಳುವರು ಗಂ–
ಗಜಗೆ ಮಾತನು ಕೊಟ್ಟು ಚಕ್ರಪಿಡಿದದೇನೊ ।
ಕುಜನ ಮಧನನೆಂದು ನಿನ್ನ ಬಿರಿದು । ಅಂ–
ಗಜನ ದೈತ್ಯನುವಯ್ಯೋ ಸುಮ್ಮನಿದ್ದದ್ದೇನೋ ।
ತ್ರಿಜಗದೊಳಗೆ ನೀನೆ ನಿಬಿಡಿಯಾಗಿರಲಾಗಿ ।
ರುಜುವಾಗಿ ಸಕಲರು ಚರಿಸುವ ಬಗೆಯೆಂತು ।
ಸುಜನರ ಮನೋಹರ ವಿಜಯವಿಠ್ಠಲರೇಯಾ ।
ಭಜನಿ ಮಾಡಿದವರ ಭಾಗ್ಯವು ಬಹುವರ್ನಾ ॥೪॥

### ಆದಿ ತಾಳ

ವಿದ್ಯಾತೀತನೆಂದು ನಿನ್ನ ಚರಿತೆಯೇನೋ ।
ಅಧ್ವರ ಮೊದಲಾದ ಕರ್ಮಮಾಡಿದದೇನೋ ।
ವೈದ್ಯ ನೀನಹುದೋ ಮಹಾ ಭವರೋಗಕ್ಕೆ ।
ಈದ್ದರೆಯಲ್ಲಿ ಸಾಂಬನನು ಸ್ತುತಿಸಿದೆ ಸು–।
ಯಿದ್ದಲ್ಲಿ ಸರ್ವವೂ ಉಂಟಾಗಿರಲಿಕ್ಕೆ ।
ಉದ್ಯುಕ್ತನಾದೆ ಮಕ್ಕಳ ತರಬೇಕೆಂದು ।
ಮುದ್ದು ಮೊಗದ ರಾಯ ವಿಜಯವಿಠ್ಠಲ ಸರ್ವ–।
ಸುದ್ದಿಬಲ್ಲ ಪ್ರತಾಪ ಅನ್ಯರನ ಕೇಳುವರೆ ॥೫॥

### ಜತೆ

ಸುವಿರುದ್ಧ ಕರ್ಮಗಳು ತೋರುವ ಪರಬೊಮ್ಮ ।
ಅವಿಕಾರ ಮೂರುತಿ ವಿಜಯವಿಠ್ಠಲರೇಯಾ ॥೬॥

* * *

## ಸುಳಾದಿ – ೧೯



ಭಾರತದ ಕಥೆಯನ್ನೇ ಈ ಸುಳಾದಿಯಲ್ಲಿ ಸಂಗ್ರಹವಾಗಿ ಹೇಳುತ್ತಾರೆ.

ಭಾರತಾಖ್ಯ ಕಥಾಶ್ರವಣದಿಂದ ಇದರಲ್ಲಿಯ ನಿಗೂಢವಾದ ಪ್ರಮೇಯವನ್ನರಿತು, ಅಪ್ರಮೇಯನನ್ನು ಮೊರೆಹೊಕ್ಕಾಗ, ಜ್ಞಾನ, ಭಕ್ತಿ, ವೈರಾಗ್ಯಗಳು ಫಲಿಸಿ, ಸಂಸಾರ ದುಃಖ ಕೊನೆಗೊಳ್ಳುತ್ತದೆ ಎಂಬ ಹಿತನುಡಿಯನ್ನು ದಾಸರಾಯರು ಇಲ್ಲಿ ವಾಚ್ಯವಾಗಿಯೇ ಹೇಳಿದ್ದಾರೆ.

ಶ್ರೀಕೃಷ್ಣನು ಪಾಂಡವರನ್ನು ರಕ್ಷಿಸಿದೆನು (ಸಜ್ಜನರನ್ನು ಸದಾ ರಕ್ಷಿಸುವನು) ಅಂದರೆ ಪಂಚಜ್ಞಾನೇಂದ್ರಿಯಗಳು ಅನುಕೂಲವಾದರೆ ಪರಮಾತ್ಮನ ಸ್ಮರಣೆಯಾಗುತ್ತದೆ. ದೇಹಗತ ಕೃಷ್ಣ ಅಂದರೆ ಪಾಪ ಕರ್ಷ್ಣಶೀಲನು.

ಕಾರಣ ಸ್ವಾಮೀ, ವಿಷಯದಲ್ಲಿ ಮನಸ್ಸು ಹೋಗದಂತೆ ಕಣ್ಣುಗಳು ಸದಾ ನಿನ್ನನ್ನು ನೋಡುತ್ತಿರಲಿ, ನನ್ನ ಮನಸ್ಸು ಎಲ್ಲಿ ಎರಗುವುದೋ ಅಲ್ಲಲ್ಲಿ ನಿನ್ನ ತಿಳಿಯುವ ಭಾವ ತಿಳಿಯಾಗಿ ಉಳಿಯಲಿ ಎಂದು ಬಿನ್ನಹ.

॥ ರಾಗ–ಭೈರವಿ–ಧ್ರುವ ತಾಳ ॥

ಭಾರತಾಖ್ಯದ ಕಥೆ ಭೂರಿಜನರು ಕೇಳಿ ।
ಸಾರಲು ನಿತ್ಯ ಸಂಸಾರದಿಂದಲಿ ಬಲು ।
ದೂರನಾಗಿ ದುಃಖ ನಿವಾರನದಲ್ಲಿ ಗತಿಗೆ ।
ದಾರಿಯಾಗುವದು ವಿಸ್ತಾರವಾದ ಸುಂ–।
ದಾರ ಜ್ಞಾನ ಭಕುತಿ ವೈರಾಗ್ಯ ಫಲಿಸಿ ಉ–।
ತ್ತರಿಸುವದು ಮತಿಯಾ ದಾರಾಪುತ್ರಾದ್ಯರಿಂದ ।
ನಾರಾಯಣನು ಭೂಭಾರ ಇಳುಹುವೆನೆಂದು ।

ಕಾರುಣ್ಯದಲ್ಲಿ ಸುರವರ ಮಿಕ್ಕಾದವರಿಗೆ ।
ನಿರೂಪಿಸಿದ ಕರ್ಮ ಧಾರುಣಿಯೊಳಗವ ।
ತಾರವ ಮಾಡಿರೆಂದು ಸಾರಿ ಬೀಳ್ಕೊಟ್ಟು ತಾನೆ ।
ಶೂರರಾಯನ ಕುಮಾರಗೊಲಿದು ಅವ–।
ತಾರಮಾಡಿ ಯಶೋದಾಗರದಲ್ಲಿ ಬೆಳೆದು ।
ಜಾರ ಚೋರನೆನಿಸಿ ನಾರಿಯರ ಸಂಗಡ ।
ಪಾರ್‍ಯಾಡಿ ಗೋಕುಲ ಉದ್ಧಾರಗೈಸಿದ ದೇವ ।
ಕ್ರೂರ ದೈತ್ಯರ ಸಂಹಾರವಮಾಡಿ ವೇಗ ।
ನೀರ ನಿಧಿಯೊಳಗೆ ದ್ವಾರಕಾಪುರ ಬಿಗಿದು ।
ಸಾರಿಸಾರಿಗೆ ಹದಿನಾರುಸಾವಿರ ಸತಿಯರ ಕೂಡಲಿ ಸಾ–।
ಕಾರದಿಂದಲಿ ನೆರೆದೆ ವಾರಿಜಗಲ್ಲದ ಚಾರುವಂಶಕ್ಕೆ ಅಂದು ।
ಕೌರವ ಪಾಂಡವರು ಬ್ಯಾರೆ ಬೆಳೆದರಯ್ಯಾ ।
ವೈರಾವೆಪೆಚ್ಚಿ ಮತ್ಸರದಲ್ಲಿ ಮಸಗಿ ।
ವಾರ ವಾರಕೆ ಬಿಡದೆ ವಾರಣಾವತಿಯಲ್ಲಿ ।
ಕ್ರೂರರು ಸಜ್ಜನರು ಈ ರೀತಿಯಲ್ಲಿ ಇದ್ದಾ–।
ಪಾರಪಾಗಿ ಸಂಚಾರ ಮಾಡಿದರವರು ।
ಶ್ರೀರುಕ್ಮಿಣಿಯರಸ ವಿಜಯ ವಿಠ್ಠಲರೇಯಾ ।
ಪರಾಶರನ ಕುಮಾರ ಮನ್ನಿಸಲಾಗಿ ॥೧॥

**ಮಟ್ಟ ತಾಳ**

ಕುರುವಂಶದವರು ಹರುಷದಿಂದಲಿ ಬೆಳೆದು ।
ಗುರುದ್ರೋಣನಲ್ಲಿ ಶರಧನುಸಿನ ವಿದ್ಯಾ ।
ಅರಿತರು ಐವರು ಎರಡೈವತ್ತು ಜನರು ಸಹವಾಗಿ ।
ಪರಿಪರಿ ಬಗೆಯಿಂದ ಕುರುಪಿತಾಮಹನ ।
ಕರುಣದಿಂದಲಿ ಎಲ್ಲಾ ಸರಿಸರಿಬಂದಂತೆ ।
ಇರುತಿರೆ ಸರ್ವದಾ ಭರತಕುಲದವರು ।
ಅರಿತನ ಬಳಸುತ ಬಳಸುತ್ತಾ ।
ಮರಳೆ ಕುಂತಿಸುತರ ಸುರಪನಪ್ರಸ್ತದಲಿ ।
ಅರಗಿನ ಮನೆಯೊಳಗೆ ಇರಿಸಿ ಕಿಚ್ಚನೆಹಚ್ಚೆ ।
ಪರಿಘ ಪರಿಹರಿಸಿ ವೃಕೋದರನು ವನದೊಳು ।
ಸುರವೈರಿಯ ಕೊಂದು ವರಕುವರನ ಪೆತ್ತಾ ।
ಬರುತ ಏಕ ಚಕ್ರನಗರದಲ್ಲಿ ।
ತಿರಿದುಂಡು ಮಹಾದುರುಳ ಬಕಾಸುರನ ।

ವರಿಸಿ ಭೂಸರನಿಗೆ ಹರುಷವ ತೋರಿ ಆ-।
ಪುರವ ಪಾಲಿಸಿ ಐವರು ಅಲ್ಲಿಂದಲಿ ।
ತೆರಳಿ ಬರುತಲಿದ್ದು ಸರಿತೇಲಿ ಅಂಗಾರಾ - ।
ನರಮನ ಭಂಗಿಸಿ ಧರಣಿ ಸುರರವೇಷ-।
ಧರಿಸಿ ಪಾಂಚಾಲನಪುರಕೆ ನಡೆತಂದು ।
ಅರಸರುಗಳು ಬಂದಿರಲು ಸ್ವಯಂವರಕೆ ।
ಶಿರವ ತೂಗಿ ನೋಡಿ ಪರಿಹಾಸ್ಯಮಾಡಿದರು ಮನದೊಳಗೆ ।
ಹರಿಪಾದಾಂಗಳ ಸ್ಮರಿಸುತ್ತ ಗುಪ್ತದಲ್ಲಿ ।
ಅರೆರೆ ಇತ್ತಲು ಮಹಾ ಶರಾಸನವನು ಎತ್ತಿ ।
ಸರಿಯಾದ ಹೊಡೆದು ತೀವರ ಗೆಲುವೆಂದು ।
ಪರಿಕ್ರಮದಲಿ ಶಲ್ಯ ತರಣಿ ತನಯಕರ್ನ ।
ಬಿರಿದಿನ ನಾನಾ ಅರಸುಗಳು ಎತ್ತಿ ತರಹರಿಸಿಕೊಳ-।
ಲರಿಯದೆ ಧರುಣಿಗೆ ಹೊರಳಿ ಲಜ್ಜಿತರಾಗಿ ।
ತಿರುಗಿ ಪೋಗಲು ಇತ್ತ ನರನು ಭೀಮನ ಅಜ್ಜ-।
ದರಿಸಿ ಬಿಂಕವ ತಾಳಿ ಭರದಿಂದಲಿ ಎದ್ದು ।
ನಿರಿಕ್ಷಿಸಿ ಚಾಪವ ಕರದಲ್ಲಿ ಪಿಡಿದು । ಸರಸದಿಂದಲಿ ನಗುತ ।
ಪರಮಸಖನಾದ ವಿಜಯ ವಿಠ್ಠಲನ್ನ ।
ಸ್ಮರಿಸಿದ ಮರಿಯಾದೆ ಕರಣ ಶುದ್ಧನಾಗೀ ॥೨॥

**ರೂಪಕ ತಾಳ**

ಬಿಲ್ಲು ಏರಿಸಿ ಹೊಡೆದು ನಿಲ್ಲಲೀಯದೆ ಸ್ವಾಹಾ-।
ವಲ್ಲಬಾ ಉದ್ದವಳಾ ಸೊಲ್ಲಿಲಿ ಮೆಚ್ಚಿಸಿ ।
ಎಲ್ಲೆ ಕೌತುಕವೆಂದು ಶಲ್ಯಾದಿಗಳು ಬರಲು ।
ಜೊಳ್ಳು ತೂರಿದಂತೆ ಎಲ್ಲರ ಓಡಿಸಿ ।
ಅಲ್ಲಿಂದ ಜನನಿಯ ಸೊಲ್ಲನೆಲಾಲಿಸಿ ।
ಬಲ್ಲಿದರು ತಾವು ಬಲ್ಲದೇ ಕೈಕೊಂಡು ।
ಉಲ್ಲಾಸದಲಿ ಬದರಿಯಲ್ಲಿಯಿಪ್ಪನ ದಯ-।
ದಲ್ಲಿ ಕೃಷ್ಣೇಕರಪಲ್ಲವ ಪಿಡಿದರು ।
ಎಲ್ಲ ಲೋಕಂಗಳು ತಲ್ಲಣಿಸುವಂತೆ ।
ಸಲ್ಲಲಿತ ವಾದ್ಯದಲ್ಲಿ ಧ್ವನಿತುಂಬೆ ।
ಬಳ್ಳಿತಾದ ಒಂದು ಹಲ್ಲಿನ ಗಜವಿಂಡು ।
ಹಲ್ಲಣಿಸಿದ ವಾಜಿ ಬೆಳ್ಳಿ ಹೇಮ ರತುನಾ ।
ಪಲ್ಲಕ್ಕಿ ಪೊಂಬಟ್ಟಿಮಲ್ಲರು ಕಾಲಾಳು ।

ಸೊಲ್ಲುಪೇಳುವ ಭಟರು ಚಲ್ಲಕಂಗಳ ಚಲುವ ।
ಯಿಲ್ಲದಾಯುಧ ನಾನಾ ಉಳ್ಳ ದ್ರವ್ಯ ಒಳಗ–।
ದಲ್ಲಿ ದ್ರುಪದರಾಯಾ ನಿಲ್ಲಾದೆ ಐವರಿಗೆ ।
ಸಲ್ಲಿಸಿ ಬೀಳ್ಕೊಡಲು ನಲ್ಲಳಕೂಡಿಕೊಂ–।
ಡಲ್ಲಿಂದ ಗಜಪುರದಲ್ಲಿ ಬಂದು ತಾ–।
ವೆಲ್ಲರು ಸುಖಬಡೆ ಮಲ್ಲರ ಬಲರೆದೆ – ।
ದಲ್ಲಣ ವಿಜಯವಿಠ್ಠಲ ದಯದಿಂದ । ಎಳ್ಳನೀತಳಕದೆ ॥೩॥

**ಝಂಪೆ ತಾಳ**

ದುರುಳರು ಪಾಂಡವರ ಪರಮಸೌಖ್ಯದ ನೋಡಿ ।
ಧರಿಸಲಾರದೆ ಕುಹಕ ಚರಿತೆಯನು ನೆನೆದು ಸೊ–।
ದರ ಮಾವ ಶಕುನಿಯಿಂದ ಬೆರೆಸಿ ಯಮತನುಜನ್ನ ।
ಕರಿಸಿ ಪಣವನು ಮಾಡಿ ಸರಸರನೆ ಪಗಡಿಯನು ।
ಹಿರಿದಾಗಿ ವಂಚಿಸಿ ದುರ್ಯೋಧನನು ಹಿಂದೆ ।
ಅರಸುಯಾಗದಾ ಭಂಗ ಸ್ಮರಿಸಿಕೊಳ್ಳುತ ಲೆತ್ತ ।
ವಿರಚಿಸಿ ಹಾಕಿ ನಿಂದಿರದೆ ಸೋಲಿಸಿ ಯುಧಿ–।
ಷ್ಟರನ ಹರಿಗೊಂಡವರಾ ತುರಗಾದಿ ಸಂಪತ್ತು ।
ಭರದಿಂದ ಶೆಲೆದೆಗದು ಪರಾಭವ ಐದಿಸಿ ।
ತರಿಸಿ ದ್ರುಪದಿಯ ಎಳೆತರಿಸಿ ಸಭೆಯೊಳಗೆ ಅಂ ।
ಬರವನ್ನು ಸುಲಿಯಲೀ ಹರಿಯೇ ದ್ವಾರಕಾಪುರದ – ।
ಅರಸೇ ಪಾಲಿಪದೆಂದು ಮೊರೆಯಿಡಲು ಅಕ್ಷಯ ।
ಕರುಣದಿಂದಲಿ ಈಯೇ ಪರಿಪರಿ ವಸನಗಳು ।
ಧರೆಮೇಲೆ ಸುಮೇರುಗಿರಿಯಂತೆ ಕಾಣಿಸಲು ।
ಅರಿದಾಗಿ ಸಕಲ ಸುಜನರಪೊಗಳಿ ಮೈಮುರಿಯೆ ।
ಕುರುಹು ಇಡುವನಾರು ಸಿರಿಪತಿಯ ಲೀಲೆಗೆ ।
ವರವೃಕೋದರರು ಅಬ್ಬರಿಸೀ ಬೊಬ್ಬರಿದರೀ ।
ಕುರುಪತಿ ಮಿಕ್ಕಾದಾ ಅರಸುಗಳನಾ ರಣದಲಿ ।
ಒರಸದಲೆ ಬಿಡೆವೆಂದು ಗರಗರನೆ ಪಲ್ಲಡಿಯೆ ।
ತರಹರಿಸಲಾರದೆ ಕರೆದು ಪಾಂಚಾಲಿಯ ।
ತೆರೆದು ತೊಡೆಗಳಲ್ಲಿ ಕುಳ್ಳಿರುಬಾ ಎಂದು ಮೂರ್ಖ ।
ಬಿರಿದು ನುಡಿಯಿಂದ ಉತ್ತರವಾಡಲಾಕ್ಷಣ ।
ಉರುಗಾದಿಗಳಿಗೆಲ್ಲ ಪಿರಿಯಳೆನಿಸಿದ ದೇವಿ ।
ಕೆರಳಿದಳು ಎಲೋ, ನಿನ್ನ ಮರಣ ತೊಡಗಳಿಂದ – ।

ಬರಲೆಂದು ಶಾಪಿಸಿ ಮೊಗದಿರುಹಿ ಘುಡಿಘುಡಿಸಿದಳು ।
ತರುವಾಯ ಪಾಂಡವರು ತೆರಳಿದರು ಕಾನನಕೆ ।
ಪರಿಜನರಾಗ ಸಹಿತ ನಿಂದರು ಒಂದುಸ್ಥಳದಲ್ಲಿ ।
ಪರಮ ಋಷಿಗಳು ತಮ್ಮ ಪುರೋಹಿತರೊಡನೆ ನಿತ್ಯ ।
ವರ ಅಕ್ಷಯಪಾತ್ರಿ ಹರಿಯಿತ್ತದಾರಿಂದ ।
ತರಿಸಿ ನಿರ್ಮಳ ಭೂಮಿಸುರರಿಗೆ ಉಣಿಸುತ್ತ ।
ಸುರಲೋಕಕ್ಕಿಂತಧಿಕ ಧರಿಗೆ ತೋರಿಸಿದರು ।
ಪರಿಣಾಮವೇನೀವಾ ವಿಜಯ ವಿಠ್ಠಲರೇಯನ ।
ನೆರೆನಂಬಿ ಹನ್ನೆರಡು ವರುಷ ವೃತವಧರಿಸಿದರು ॥೪॥

**ತ್ರಿವಿಡಿ ತಾಳ**

ಗ್ರಾಸಗೋಸುಗ ಅತ್ರಿ ಋಷಿಯ ನಂದನ ದೂ-।
ರ್ವಾಸ ಶಿಷ್ಯರ ಸಹಿತ ಬಂದು ಬೇಡೆ ।
ಆ ಸಮಯದಲಿ ಚಿಂತಿಸಿ ಪಾಂಡವರ ಸತಿ ।
ವಾಸುದೇವನೆ ಗತಿ ಎಂದು ಕರಿಯೇ ।
ಲೇಶವಾದರು ತಡಿಯದೇಬಂದು ಆ ಕ್ಷಣ ।
ಭಾಸಾದಿಂದೊಪ್ಪುವ ಪಾತ್ರಿಯೊಳಗೇ ।
ಮೀಸಲ ಒಂದುಶಾಕದಳ ಕಲ್ಪಿಸಿ ।
ತಾ ಸವಿದು ಮುನಿಗೆ ತೃಪ್ತಿಯ ಬಡಿಸೀ ।
ಲೇಸುಮಾಡಿ ರಂಗಾ ಭಕ್ತರಿಗೆ ವರವಿತ್ತು ।
ವಾಸಕ್ಕೆ ಪೋಗಲು ಇತ್ತಲಾದ ಚರಿತೆ ।
ಈಶನೊಡನೆ ಕಾದಿ ಪಾರ್ಥ ಭಕ್ತಿಲಿ ವೊಲಿಸಿ ।
ಪಾಶುಪತಾಸ್ತ್ರವ ಪಡೆದು ಸ್ವರ್ಗಕ್ಕೆ ಪೋಗಿ ।
ಕ್ಲೇಶ ಬಡಿಸುವ ನಿವಾತಕವಚರಸದದು ।
ದೋಷವ ತೋರಿ ಊರ್ವಶಿಯ ಗೆದ್ದು ।
ದೇಶದೇಶಗಳ ತೀರ್ಥಯಾತ್ರಿಯ ಚರಿಸಿ ।
ವಾಸವಾಗಿ ಹಿಂದೆ ದ್ವಾರಿಕೆಯಲ್ಲಿ ಯತಿ -।
ವೇಷದಿಂದ ಪಾರ್ಥಾ ನಾಲ್ಕುಮಾಸಾ ।
ಮೋಸಮಾಡಿ ಸುಭದ್ರೆಯ ತಂದಾ ತಾ-।
ಸಾಸಿರಾಕ್ಷನ ಸುತಾ ಅಗ್ರಜರಬಲಗೊಂಡಾ ।
ದೋಷಾ ಸೈಂಧವನನ್ನು ಪಿಡಿದು ರಥಕೆ ಕಟ್ಟಿ ।
ಪಾಶವ ದ್ರೌಪದಿ ಪದದಿಂದ ಬಿಡಿಸಿ ನಗುತ ।
ಘಾಸಿಯಾಗಿ ಚಿತ್ರರಥನ ಕೈಸೇರಿದಾ ।

ಆ ಸುಯೋಧನ ಕರ್ನಾದಿಗಳ ಕಾಯದೂ ।
ವಾಸಿಯಿಂದಲಿ ಧರ್ಮನಂದನ ತಿರಿಗಿದ ।
ಕಾಶಿ ರಾಮೇಶ್ವರ ಮಿಕ್ಕ ಯಾತ್ರೀ ।
ಏಸೇಸು ಬಗೆಯಿಂದ ಮಾಡಿ ಮುನಿಗಳ ಕೂಡ ।
ರಾಸಿ ಪುಣ್ಯವನು ಗಳಿಸಿಕೊಂಡೂ ।
ದೋಷ ತಟ್ಟಿದ ನಹುಷನೃಪನ ಶಾಪವಕಳೆದು ।
ದ್ವೇಷ ತಾಳಿದ ವಿಹಂಗಮನ ಒಡಂಬಡಿಸಿ ।
ರೋಷದಿಂದಲಿ ಭೀಮ ಮಣಿಮಂತನ ಕೊಂದು ।
ಸುಸೌಗಂಧಿ ಪುಷ್ಪ ಸತಿಗೆಯಿತ್ತಾ ।
ಈಸುಬಗೆ ಧರ್ಮಾವೃತ ವೃತಂಗಳು ವೇದ-।
ವ್ಯಾಸನಿಂದಲಿ ತಿಳಿದು ರಹಸ್ಯದಲ್ಲಿ ।
ಶ್ರೀಶನ ಕೃಪೆಯಿಂದ ಸೈರೇಂಧ್ರಿ ಸಹಿತ ಮ-।
ತ್ಸ್ಯೇಶನ ಪುರದಲ್ಲಿ ಕಾಲ ಕಳೆದೂ ।
ಭೀಷಣನಾಗಿದ್ದ ಕೀಚಕನ್ನ ನೆಲಕೆ-।
ಬೀಸಿ ಬಿಸುಟು ಭೀಮಾ ಮೆರೆದ ಕೀರ್ತಿಯನ್ನು ।
ದ್ವೇಷವ ತಾಳಿ ದುರ್ಯೋಧನ ಕರ್ನಾ ।
ದುಃಶಾಸನ ಒಂದಾಗಿ ಬಲವೇರಿಸೀ ।
ಭಾಷೆಗಳಾಡಿ ಗೋವಿಂಡು ತಿರುಹಲಾಗಿ ।
ಸುಶರ್ಮನ ಪಿಡಿದು ಮತ್ಸ್ಯನ್ನ ಬಿಡಿಸಿದರು ।
ವಾಸವಸುತ ಪೋಗಿ ಒಂದೇ ರಥದಲ್ಲಿ ।
ಭೀಷ್ಮ ದ್ರೋಣ ಕರ್ಣಾದ್ಯರ ವಂಚಿಸಿ ।
ಭೂಷಣವೆಬ್ಬಿಸಿ ಗೋಗ್ರಾಹಣದಲ್ಲಿ ವೀರ-।
ವೇಷವತೊಟ್ಟು ತಡಮಾಡದೇ ।
ಘೋಶ್ದ ಆಕಾಶದಲ್ಲಿ ಪುಟ್ಟಿ ಆಕಳ ಶರೆ ।
ಹಾಸ ಮೊಗದಲ್ಲಿ ಪಾರ್ಥಾ ಬಿಡಿಸಿ ತಂದೂ ।
ದೇಶದೊಳಗೆ ಪ್ರಗಟರಾಗಿ ರಾಯ ಸಿಂ-।
ಹಾಶನ ಹತ್ತಿದ ಸುತ್ತಾವಾಲ್ಗೈಸಲು ।
ಅಸೌಭದ್ರಂಗೆ ವಿರಾಟನ್ನ ತನುಜೆಯಾ ।
ಶಾಶಿದಳಿದರು ಶುಭಮುಹೂರ್ತ ನೋಡಿ ।
ಕೋಶ ತುರಗ ಗಜ ಮುಂತಾದ ಭಾಗ್ಯದಲ್ಲಿ ।
ಶಾಶ್ವಿತ ಮತಿಯಲ್ಲಿ ಮೆರಿಯೆ ವಾದ್ಯ-।
ಘೋಷಣಪೆಚ್ಚಿ ಸತ್ಕೀರ್ತಿ ತುಂಬಿತು ನಾನಾ-।
ದೇಶದೊಳಗೆ ಅಂದು ಧರ್ಮಜರಿಗೆ ।

ಭೂಸುರರು ಬಂದು ಜಯವಾಗಲಿಯೆಂದು ।
ಆಶೀರ್ವಾದವು ಮಾಡಿ ಮಂತ್ರಪೇಳೆ ।
ಕೇಶವ ಮುರಹರ ವಿಜಯವಿಠ್ಠಲ ತನ್ನ ।
ದಾಸರ ಪಾಲಿಪ ಬಳಿಯಲ್ಲಿ ಇದ್ದೂ ॥೫॥

**ಧ್ರುವ ತಾಳ**

ಮಂದರಧರ ಕುಂತಿ ನಂದನರ ವನವಾಸ ।
ಹಿಂದುಗಳೆವೆನೆಂದು ಅಂಧು ನೆನೆದು ಅವ-।
ರಿಂದ ಮನೋಧರ್ಮವ ಒಂದೊಂದು ತಿಳಿದು ಅ-।
ನಂದಮಯನು ನಡೆತಂದ ಅಲ್ಲಿಂದ ಮುನಿ-।
ವೃಂದಗಳೊಡಗೂಡಿ ಶ್ಯಂದನವೇರಿ ನವು-।
ವಿಂದ ಹಸ್ತಿನಾವತಿಗೆ ಸಂಧಿಗೋಸುಗ ತೆರಳಿ ।
ಬಂದು ಶ್ರೀಹರಿ ದಾಸಿನಂದನನ ಮನೆಯಲ್ಲಿ ।
ಒಂದುಕುಡತೆ ಪಾಲಿನಿಂದ ಹಸಿವೆ ಕಳೆದು ।
ಬಿಂದ ನೋಡಲು ಮಹಾಸಿಂಧು ಮಾಡಿ ತೋರಿದೆ ।
ಅಂಥ ನೃಪನ ನಿಜಕಂದನ್ನ ಉಪಚಾರ ।
ಒಂದೂ ಕೈಕೊಳ್ಳದಲೆ ಕುಂದುಗಳೆಣಿಸಿದೆ ।
ಅಂದಂದಿದಲ್ಲಿ ಕಂತಿ ಮಂದಿರದಲಿ ಪೋಗಿ ।
ವಂದಿಸಿ ಬಲುಬಗೆಯಿಂದ ಮೋಹಕ ಪೇಳಿ ।
ಮುಂದೀಗ ಕೌರವ ಚಂದದಿಂದಲಿ ಸರ್ವ ।
ಸಂದೋಹ ಸಹಿತ ತಾನಂದು ಸಭಾಮಂಡಿಸಿ ।
ಸಂಧಾನಕ್ಕೆ ಪರರಿಂದ ಬಂದ ದೂತನು ಬಂದರೆ ನೀವೆಲ್ಲ ।
ನಿಂದಿರಲಾಗದು ಎಂದು ಶಿಕ್ಷೆಯಮಾಡಿ ।
ಅಂದು ಕರಿಸಿ ಗೋವಿಂಧಗೆ ದೂತರಟ್ಟಿ ।
ಒಂದು ಈ ಕ್ಷಣದಲ್ಲಿ ಬಂದುಪೋಗುವದೆನೆ ।
ಮಂದಹಾಶ ವದನ ಇಂದಿರಾವಲ್ಲಭ ।
ನಿಂದಿರದಲೆ ಬರಲೆಂಢ್ಹೇಳದಿರೆ ಬಲು ।
ಮಂದಮತಿಗಳ ಮಾರಂದವನೋಡಿದಾ ।
ಸುಂದರ ಮುಗುಟದಲಿಂದ ಉರುಳಿ ಕುರು -।
ವೃಂದ ರಂಗನ್ನ ಪಾದದ್ವಂದ್ವದಲ್ಲಿ ಹೊರಳೆ ।
ನಿಂದಕ ಖಳನೆ ಏಳೆಂದು ಎಬ್ಬಿಸಿ ಮು-।
ಕುಂದ ಸಭಾಮಧ್ಯ ಇಂದುವಿನಂತೆ ಒಪ್ಪೆ ।
ಇಂದ್ರಪ್ರಸ್ತ ಮಿಕ್ಕಾದ ಒಂದೂ ಗ್ರಾಮ ಕೊಡೆನೇ ।

ಸಂಧಿ ಎನಗಾದದು ಎಂದು ದುರುಳನುಡಿದು ।
ಮಂದಿರದೊಳು ರಾಧಾನಂದನ ಶಕುನಿ ಗ-।
ಳಿಂದ ಯೋಚಿಸಿ ಕೃಷ್ಣನ ಬಂಧಿಸಲು ಪಾಂಡವ ।
ನಂದನರ ಪ್ರತಾಪ ಕುಂದುವುದೆಂದು ದಾಮ-।
ತಂದು ಕಟ್ಟಲು ಸ್ವಾಮಿ ಒಂದಕನಂವಾದ ।
ಅಂಧಕ ಧೃತರಾಷ್ಟ್ರ ಕಣ್ದೆರೆದು ನೋಡುವಾ – ।
ನಂದಾ ದೃಷ್ಟಿಯ ನೀಯೇ ಗಾಂದಾರಿ ಬೆರಗಾಗೆ ।
ಬೆಂದು ಪೋದನು ಕೌರವೇಂದ್ರ ಕುಲಸಹಿತಾ ।
ಸಂದೇಹವಿಲ್ಲ ಇದಕೆಂದು ಸರ್ವರು ನುಡಿಯೇ ।
ಕಂದರ್ಪಪಿತ ನಮ್ಮ ವಿಜಯ ವಿಠ್ಠಲರೇಯಾ ।
ಅಂದು ಕರ್ನನ ವಂಚಿಸಿ ಬಂದ ಭಕ್ತರಲ್ಲಿಗೆ ॥೬॥

## ಝುಂಪೆ ತಾಳ

ತ್ರಿದಶ, ಗಂಗೆಯ ಸೂನು, ಕಳಸ ಸಂಭವ, ಶಕುನಿ ।
ಅಧಟಕರ್ನನ ಸುಬಲಾ ಕರ್ನತನಯಾ ।
ಮದಗರ್ವ ದುಃಶಾಸನಾ ಗೌತಮ ಅಶ್ವತ್ಥಾಮಾ ।
ಕದನಕರ್ಕಶ ಶಲ್ಯಾ ಕೃತವರ್ಮ ಜಯದ್ರಥಾ ।
ಚದುರ ಭೂರಿಶ್ರವನು ಭೂಮಿಜ ತನುಜಾ ।
ಯದು ಕುಲರು ಶಿಶುಪಾಲ ರುಕುಮ ನಂದನರು ।
ಹದುಳ ಬಯಸುವ ಲಕ್ಷಣಾದಿ ನೃಪಕುವರರು ।
ಒದಗಿ ಕಾಂಭೋಜ ವಿಕರ್ನ ಶ್ರುತಾಯುಧಾ ।
ಮುದದಿಂದ ಸಮಸಪ್ತಕರು ಸುಕರ್ಮನು ಕಾಲಾ-।
ಕೆದರುವಂಥ ಕ್ಷೇಮ ಧೂರ್ತ ದೇವದತ್ತಾ ।
ವಿಧುದತ್ತ ಬಾಲ್ಹೀಕ ಬರ್ಬರ ಪ್ರಚಂಡ ।
ಅಧಮದುರ್ಯೋದನನ ಅವನ ಪೊಡಹುಟ್ಟಿದ ।
ಮದಡ ಜನರು ನಾನಾ ದೇಶದೇಶದಲಿಂದ ।
ಅಧಿಪತಿಗಳು ನೆರೆದಾಗಲೇ ಬಂದೂ ।
ಯದರವಡಿ ನಿಂದದು ಪ್ರತಿಭಟರು ಒಂದಾಗಿ ।
ಯುಧಿಷ್ಠಿರ ಭೀಮ ಪಲ್ಗುಣ ನಕುಲಸಹದೇವ ।
ಎದೆ ಶೂಲ ರಿಪುಗಳಿಗೆ ಅಭಿಮಾನ್ಯ ದ್ರುಪದಸುತ ।
ತ್ರಿದಶರಿಪು ಘಟೋತ್ಕಚ ಶ್ರುತಂಜಯನು ಸಾತ್ಯಕಿ ।
ಮೊದಲಾದ ಅರಸುಗಳು ಕೂಡಿದರು ಎರಡು ಬಲ ।
ಹದಿನೆಂಟು ಅಕ್ಷೋಣಿ ಕುರುಕ್ಷೇತ್ರದಲಿ ಮೆರಿಯೇ ।

ಅದರೊಳಗೆ ಕೃಷ್ಣ ಸಾರಥಿಯಾದ ಫಲ್ಗುಣಿಗೆ ।
ವಿದುರ ಸಂಜಯರು ಹಸ್ತಿನಾಪುರದಲ್ಲಿ ನಿಲ್ಲೆ ।
ಮದನಾರಿಪಿತ ನಮ್ಮ ವಿಜಯವಿಠ್ಠಲ ಹಲಾ –।
ಯುಧನ ಯಾತ್ರೆಗೆ ಕಳುಹಿದಾ ಕಪಟಧಾರಿ ॥೭॥

**ಮಟ್ಟ ತಾಳ**

ಶೃಂಗಾರವಾದ ಕುರುಜಾಂಗುಲಿ ಶೋಧಿಸೆ ।
ಗಂಗಜಗೆ ಸಮರಂಗದ ಅಭಿಷೇ ।
ಕಂಗಳು ಮಾಡೆ ಅರಸುಗಳು ತಂದುರತು ।
ನಂಗಳು ಇಟ್ಟು ಹಸ್ತಂಗಳು ಮುಗಿದು ಪಾ–।
ದಂಗಳಿಗೆರಗಿ ಸ್ತೋತ್ರಂಗಳು ಗೈಯಲೂ ।
ಅಂಗಜಾಸ್ತ್ರವ ಬಲು ಭಂಗ ಮಾಡಿದ ಶೂರ–।
ಸಂಗರದೊಳು ಶ್ರೀರಂಗನ್ನ ಕೈಯ್ಯ ರ–।
ಥಾಂಗ ಪಿಡಿಪೆನೆಂಬ ಅಂಗ ದುತ್ಯಹದಲ್ಲಿ ।
ಹಿಂಗದೆ ಪಾಂಡವರ ಕೆಂಗೆಡಿಸಿದೆ ಮಾ–।
ತಂಗ ತುರಂಗ ತೇರುಗಳ ಮಹರಥಿ ।
ಕಂಗಳ ಭಟರ ದಿಕ್ಕಂಗಳ ಪೋಗಿಸಿ ಪ್ಲ–।
ವಂಗ ಧ್ವಜನ ಶೌರ್ಯ ಭಂಗಬಡಿಸಿ ಗಗ–।
ನಂಗ ಣಾಲಿಪ್ಪವರ ಕಂಗಳಿಗೆ ಬೆಡಗಂಗಳಾ ।
ಕೆಂಗೋಲಿನಲಿ ಮಂಗಳಾಂಗನ್ನ ಫಣೆಗೆ ಬಾ–।
ಣಂಗಳ ಜೋಡಿಸಿ ಸಂಗಡಲೇ ಎಚಿಯೇ ।
ಸಿಂಗ ನರಿಯ ಪೆಟ್ಟಿಂಗೆ ಸುಮ್ಮನಿದ್ದಂತೆ ।
ರಂಗಾ ಭಕ್ತನ ಛಲಂಗಳ ಗೆಲಬಿಟ್ಟೊ ।
ಇಂಗಿತಜ್ಞಾನು ರಥಾಂಗ ತುಡಿಕಿದಾ ಜ–।
ನಂಗಳಿಗೆ ಪ್ರತಿಜ್ಞೆ ಭಂಗವಾಯಿತೆಂಬಂತೆ ।
ಜಂಗಮ ಸ್ಥಾಣು ಸ್ಥಾವಂಗಳೊಡಿಯನು ।
ಗಂಗಾಭವನ ಬಲಭಂಗ ಮಾಡುವೆನೆಂದು ।
ಸಂಗರದಲಿ ಎದುರಿಂಗೆ ಮಾಡುವೆನೆಂದು ।
ಮುಂಗುಡಿಯಲಿ ನೆರವಿಂಗೆ ತಂದುನಿಲಿಸಿ ।
ಬಂಗಾರಂಬರ ನಮ್ಮ ವಿಜಯವಿಠ್ಠಲರೇಯಾ ।
ತಿಂಗಳ ಕುಲೋದ್ಭವರ ಅಂಗನೆನಿಸಿ ಕಾವಾ ॥೮॥

**ತ್ರಿವಿಡಿ ತಾಳ**

ಹತ್ತು ದಿವಸ ಕಾದಿ ಸರಳತಲ್ಪದ ಮೇಲೆ ।
ಮುತ್ತ್ಯಾಮಲಗಿಕೊಳಲು ಕುರುಪತಿ ಚಿಂತಿಸಿ ।
ಇತ್ತ ಕುಂಭಸಂಭವಗೆ ದಳನಾಯಕತನ-।
ಇತ್ತು ಸಂಗ್ರಾಮಕ್ಕೆ ಒಡಂಬಡಿಸೆ ।
ಚಿತ್ತದಲ್ಲಿ ತಿಳಿದು ಪರರಾಯನ ನಿನಗೆ-।
ಇತ್ತಿಪೆನೆಂದು ದ್ರೋಣನು ಭಾಷ್ಯವ ತೊಟ್ಟು ।
ಮತ್ತೆ ಚಕ್ರ ಬಿಂಹ್ವರಚಿಸಿ ಪಾರ್ಥನ ಸುತ-।
ಅತ್ತಲಟ್ಟಿದರು ಜನಕನ ಬಿಡಿಸೀ ।
ಮತ್ತೆ ಜಗವ ಏರಿ ಭಗದತ್ತ ಉರಳೀದಾ ।
ಕತ್ತಲೆಯೊಳು ಶೇನನ ಗೆದ್ದ ಹೈಡಂಬಿಯಾ ।
ಪುತ್ರನ ನೆವದಿಂದ ದ್ರೋಣ ಕಾಯುವ ಬಿಡೆ ।
ಕತ್ತರಿಸಿದ ದ್ರುಪದ ನಂದನ ರಣದಲ್ಲಿ ।
ಸತ್ತ ತಂದೆಯ ನೋಡಿ ಘುಡಿಘುಡಿಸಿ ಅಶ್ವತ್ಥಾಮ ।
ತುತ್ತು ಮಾಡುವೆನೆಂದು ನಾರಾಯಣಾಸ್ತ್ರವ ।
ಕಿತ್ತಿ ಹೊಡೆಯಲಾಗಿ ಭೀಮ ನಂಜದಿರಲು ।
ಚಿತ್ತಜಪಿತಬಾಣ ತಗ್ಗಿಸಿ ಕಾಯ್ದಾ ।
ನೆತ್ತಿ ಬಾಗಿಸಿಕೊಂಡು ಗುರುತುತ ತಿರುಗಲು ।
ಹತ್ತರ್ಧ ದಿವಸ ಕಾಳಗವಾಯಿತು ।
ಮಿತ್ರನಂದನಿಗೆ ಕುರುರಾಯ ಪಟ್ಟವಕಟ್ಟಿ ।
ಹತ್ತಿತು ಬವರಾ ಪಾಂಡವರ ಸೈನಿಕದಲ್ಲಿ ।
ಸುತ್ತಲವರ ಹೊಡೆದು ಧರ್ಮಜನ ದೇಹಕ್ಕೆ ।
ಮೆತ್ತಿಸಿದನು ಕರ್ನ ಬಾಣಾ ಬೆಂಬಿಡದಲೆ ।
ತೆತ್ತಿಗರ ಕೂಡಾ ರಾಯಾ ತಿರುಗಿ ಪೋಗೆ ।
ಮತ್ತೆ ಫಲ್ಗುಣ ಬಂದು ಉಪಚರಿಸೆ ।
(ಈ ಸುಳಾದಿಯು ಅಪೂರ್ಣವಾಗಿ ದೊರಕಿದೆ)

– *ಸಂಪಾದಕ*

* * *

# ಶ್ರೀಕೃಷ್ಣನ ಬಾಲಲೀಲಾ ಸ್ತೋತ್ರ

## ಸುಳಾದಿ ೨೦

**ಮಲಗಿದವರಂತೆ ನಟಿಸಿ ಪೀತಾಂಬರವನ್ನುಟ್ಟ ಕೃಷ್ಣ ಬೆಳಗಿನ ಜಾವದಲ್ಲಿ ಏಳುತ್ತಾನೆ. ಗೆಳೆಯರೊಂದಿಗೆ ಕೂಡಿಕೊಂಡು, ಮೆಲ್ಲನೆ ಹೆಜ್ಜೆಯನ್ನಿಡುತ್ತ ಪಾಲ್ಬೆಣ್ಣೆ ಮೆಲಲು ಗೋಪಿಯರ ಮನೆಯಲ್ಲಿ ಪ್ರವೇಶಿಸುತ್ತಾನೆ. ಮಲಗಿದ ತರುಣಿಯರ ಮೈ ತಟ್ಟುತ್ತಾನೆ. ಹಾಲು ಮೊಸರನ್ನೆಲ್ಲ ಚೆಲ್ಲಿ ಓಕುಳಿಯಾಡುತ್ತಾನೆ.**

**ಗೋಕುಲದಲ್ಲಿ ಬಾಲಗೋಪಾಲನು ಆಡಿದ ಗುಲಗಂಜಿ ಮುಂತಾದ ಆಟಗಳ ಒಂದು ಪಟ್ಟಿಯನ್ನೇ ದಾಸರು ಇಲ್ಲಿ ಕೊಡುತ್ತಾರೆ.**

**ಲೀಲಾ ವಿನೋದನ ಈ ಬಾಲಲೀಲೆಯನ್ನು ಕಂಡು ಜಲಜಲೋಚನೆ ಲಕ್ಷ್ಮಿಯೂ ಕರ ಮುಗಿಯುತ್ತಾಳೆ. ಬೊಮ್ಮಾದಿಗಳು ಬೆರಗುಗಣ್ಣಿನಿಂದ ನೋಡುತ್ತ ತಲೆದೂಗುತ್ತಾರೆ. "ಚಿಕ್ಕಮಕ್ಕಳೊಡನಾಡಿ ನಲಿದು ನಲಿಸಿದ, ಚೊಕ್ಕ ಹೃದಯದ ಗೋಪಾಲ ಸದಾ ನನ್ನ ರಕ್ಷಣೆಯ ಭಾರ ನಿನ್ನದು ಎಂಬ ಸ್ಮೃತಿ ನನಗಿರಲಿ"**

**॥ ರಾಗ-ಭೂಪಾಳಿ-ಧ್ರುವ ತಾಳ ॥**

ಬೆಳಗಪ್ಪಾ ಝಾವದಲಿ ಮಲಗಿ ಮಲಗದಂತೆ ।
ಪೊಳಲು ಪೊರಮಟ್ಟು ಪೊರೆನ್ಯರ ಪೋರರಾ ।
ಬಳಗವ ಒಡಗೊಂಡು ಬಳಿವಿಡಿದು ಉಟ್ಟ ।
ತಳಲ್ಲರಿ ಪೊಂಬಟ್ಟೆ ಧಟ್ಟಿ ಬಿಗಿದು ।
ಗೆಳೆಯರ ಕೂಡಿ ಕೂಗದೆ ಮೆಲ್ಲಮೆಲ್ಲನೆ ।
ಝಳಿಲೆಂದು ಹೆಜ್ಜೆಯ ಇಡದೆ ಸಾಗುತ್ತಾ ।
ಕಳವು ಮಾಡುವದಕ್ಕೆ ಕದವುನೂಕಿ ಗೋಪ-।
ಬಾಲಿಯರು ಮಲಗಿರೆ ಕುಚವತಟ್ಟೀ ।
ಕಳಲು ಮಜ್ಜಿಗೆ ಹಾಲುಮೊಸರು ಬೆಣ್ಣೆತುಪ್ಪ ।
ನೆಲವಿಗೆ ಹಾಕಿದ ಬಲಿಯ ಹರಿದೂ ।
ನೆಳಲು ಬೀಳದಂತೆ ಸುಳಿಸುಳಿದಾಡಿ ಕೈ-।
ತಳದಿಂದ ಸುರಿದು ವಲ್ಲವರಿಗಿತ್ತು ।
ಕೆಲವು ಚಲ್ಲಿ ಕೆಲವು ಹಾರಿಸಿ ಕೆಲವು ಓ-।
ಕಳಿಯಾಡಿ ಕೆಲವು ಉಳಿಹಿ ಉಗಳೀ
ಒಳಮೂಲೇ ಹೊರಂಗಣ ಏಕಾಕಾರವಾಗಿ ।
ಕಲೆಸಿದ ಕೆಸರಂತೆ ಒಪ್ಪುತಿರೇ ।
ತುಳಿದು ಇಂತು ಗಲಭೆಮಾಡಲು ಗೊಲ್ಲ-।
ಲಲನೇರು ಎಚ್ಚೆತ್ತು ಕಳವಳಿಸೇ ।

ಮಲದೂರ ವಿಜಯ ವಿಠ್ಠಲರೇಯನ ಲೀಲೆ ।
ಹೊಲಬುಗೊಂಡವನಾರು ಸುರರು ತೊಳಲುತಿರೆ ॥೧॥

### ಮಟ್ಟ ತಾಳ

ಬೆಳಕು ಮರೆಯಲ್ಲಿಟ್ಟು ಕಿಲಕಿಲನೆ ಗೋ-।
ಕುಲನಾಥ ನಗುತ ಚಲವಗಂಗಳ ಹೆಂ-।
ಗಳಿಯರ ನೋಡಿ ಚಪ್ಪಾಳಿಯನ್ನೆ ಹೊಯ್ದು ।
ಹಲಬರ ಮೇಲೆ ತೊಂಬಲ ರಸವನೇ ಉಗಳಿ ।
ಹಲಬರ ವಸನಗಳ ಸೆಳೆದು ಬೀದಿಗೆ ಬಿಸುಟು ।
ಹಲಬರನ ಬಳಿಗೆ ಎಳೆದು ಚುಂಬನ ಕೊಟ್ಟು ।
ನಳಿ ತೋಳಿಲಿ ಅಪ್ಪಿ ಕಲೆಗಳ ಸಂತೈಸೀ ।
ಕಲಕಲವೆಬ್ಬಿಸಿ ಬಾಗಿಲ ಪೊರಟ ಚೋರ ।
ಕಲಿಭಂಜನ ನಮ್ಮ ವಿಜಯವಿಠ್ಠಲರೇಯಾ ।
ಕೆಲದಾಡಿದನು ಗೋವಳೆಯರ ಕೂಡ ॥೨॥

### ತ್ರಿವಿಡಿ ತಾಳ

ಗುಲಗುಂಜಿ ಗುಪ್ಪೆಂದೆ ಬಿಲ್ಲೈ ಹರಳು ಬಿಲ್ಲು ।
ಜಿಲಿಬಿಲ್ಲಿ ಜಿಂಕೆ ಭೋಗರಿ ಚಂಡು ಚಕ್ರಾ ।
ಸುಳಿದಾಟ ಚಿಣಿಕೋಲು ಕುಣಿಗಾಳು ತುರಗಾಟ ।
ಶಳೆಗೋಲು ಜತೆಲಗ್ಗೆ ಕೊಂಬು ತುತ್ತೂರಿ ನಾದಾ ।
ಮಳಲುಕುಪ್ಪೆ ಗುಬ್ಬಿಮನೆ ಕಣ್ಣುಮುಚ್ಚಣಿಕೆ ।
ಬೆಳದಿಂಗಳ ಕುಪ್ಪೆ ಉಯ್ಯಾಲೆ ಜೋಜೋ ।
ಅಳವಾಳ ಗೊಟ್ಟಿಗೆ ಅಟ್ಟಿಗೆ ಮುಟ್ಟಿಗೆ ಚ-।
ಕ್ಕಳ ಗುಕ್ಕಳು ಗೋಲಿ ತೇವು ಅಪ್ಪಚ್ಚಿಯು ।
ತಲೆಡಿಕ್ಕಿ ಆನೆ ಏಕಾಂತ ವಗೆವ ಕಲ್ಲು ।
ಹುಲಿಕಟ್ಟು ಹುಡುಗಾಟ ಗೊಟ್ಟಗುಣಿ ಹರಿಕಳ್ಳ ।
ಬೆಳಸುರಾಸಿ ಅರಸು ಪ್ರಧಾನಿ ಪರಿವಾರ ।
ಫಲ ಸರಕುಮಾರುವ ಬೀದಿ ಅಂಗಡಿ ಸಾಲು ।
ಹೊಲ ಮರಿಯಾದ ಮಾತುಗಳು ಮುನಸು ನಾನಾ ।
ಮಲಗಿ ಏಳುವ ಲೀಲೆ ಗಂಡಹೆಂಡಿರ ನೀತಿ ।
ಬಲುಪರಿ ಒಂದೊಂದು ಬಾಲಾಟದಲಿ ನಲಿದು ।
ಒಲುಮೆಯಿಂದಲಿ ನೋಡಬಂದ ಯೌವನಸ್ತ್ರೀಯರ ।
ನಿಲಿಯಬಿಡಿಸಿ ಭಂಡುಭೂತ ಮಾಡೀ ।

ಬಳಿಯಯಿಡುವೆನೆಂದು ಕೈಪಿದು ಹಿಸಿಕೀ ।
ಮೊಲೆಗೆ ಕರಚಾಚುವ ಮುಖತಗ್ಗಿಸೀ ।
ಎಲೋ ಕೃಷ್ಣ ಎಂದರೆ ಬೆದರಿ ಓಡಿಪೋಗಿ ।
ಪಲ್ಲುದೆರದು ಅಣಿಕಿಸುವ ಅಟ್ಲಾಡಿಸೀ ।
ತಲುವರಿತನದಿಂದ ಕ್ರೀಡೆಯಾಡುತಲಿರೆ ।
ಒಲವೈರಿ ಸುತರೆಲ್ಲ ಅಹೋಎನುತಾ ।
ತಲೆದೂಗಿ ತಮ್ಮಿಂದ ಬಣ್ಣಿಸಲದರಿದೆಂದು ।
ಪುಲಿದೊಗಲಾ ಬ್ರಹ್ಮನು ಬೆಸಸಿದರು ।
ನೆಲೆಗಾಣೆವು ಎಂದು ಅವರು ಮೌನವಾಗೆ ।
ಜಲಜಲೋಚನೆ ಲಕುಮಿ ಹಸ್ತಮುಗಿಯೇ ।
ಕುಲದೈವ ವಿಜಯ ವಿಠ್ಠಲರೇಯಾ ನಂದ ಗೋ-।
ಕುಲದಲ್ಲಿ ಜನಿಸಿ ಗೋಪಿಯ ಮನೆಯಲ್ಲ್ಯಾಡಿದಾ ॥೩॥

**ಅಟ್ಟ ತಾಳ**

ಚಿಕ್ಕದಲ್ಲಕ್ಕಿದ ಬುತ್ತಿ ಪೆಗಲಲ್ಲಿ ।
ಪಕ್ಕೆಯೊಳಗೆ ಕೋಲು ಕರಗದಲ್ಲಿ ತಳಿಹಗ್ಗಾ ।
ಚಿಕ್ಕಗೋಮಕ್ಕಳ ಸಂಗಡ ತುರುವಿಂಡು ।
ಅಕ್ಕೋ ಇಕ್ಕೋ ಎಂದು ತೋರುತ ಪೊರಡಿಸಿ ।
ಅಕ್ಕರದಿಂದ ಸಂಗವಕಲೆವ ಸಮಯಕ್ಕೆ ।
ಬುಕ್ಕುತ ಮುಕ್ಕುತ ಉಡಿಯಗುಗ್ಗರಿ ಹೆಜ್ಜೆ-।
ಇಕ್ಕುತ ಸಾಗಲು ಭೂಮಿ ನಮೋ ಎನ್ನೆ ।
ಪಕ್ಕೆಯಗರಿ ನವಿಲ ಪಿಂಚಾಕುಂಚಿಗೆ ।
ಸಿಕ್ಕಿಸಿದಾ ಎಲೆಬಳ್ಳಿ ಕುಸಾಮ ನಾನಾಜಾತಿ ।
ಚೊಕ್ಕಾಟ ಗುಲಗಂಜಿ ದಂಡೆ ಬರಹ ಮಣ್ಣಾ-।
ಚುಕ್ಕಿ ದೇಹದಲ್ಲಿ ಎಳೆದುಳಸಿ ದಾಮಾ ।
ಚಕ್ಕಂದವಾಡುತ್ತ ಗೋಪಾಲರ ಮಧ್ಯ ।
ತಕ್ಕಥೈ ಥೈ ಎಂದು ಕುಣಿದಾಡಿ ಹಾರಾಡಿ ।
ಕಕ್ಕಸ ಗುಂಪಿಲೀ ವಿಮಾನವೇರಿ ದೇ-।
ವಕ್ಕಳು ಈಲೀಲೆ ಒಬ್ಬಿಣಿಸುತಿರೇ ।
ನಕ್ಕು ನಕ್ಕು ತಮ್ಮೊಳು ತಾವೆ ತಲೆದೂಗಿ ।
ಅಕ್ಕಟ ಹೆದ್ದೈವ ಹುಡುಗಾಟನೆಸಗಿದೆ ।
ತಕ್ಕದು ನೋಡೆಂದು ಮುಕ್ತಿ ಪ್ರದಾತನೋ ।
ಪೊಕ್ಕಳ ಹೂವಿನ ವಿಜಯ ವಿಠ್ಠಲ ಕೃಷ್ಣ ।
ಸಿಕ್ಕಿದ ಬಗೆನೋಡು ಧನ್ಯ ಗೋಕುಲ ಗೋಪಿ ॥೪॥

**ಆದಿ ತಾಳ**

ಕೊಳಲು ಗೋಪಾಲ ನಸುನಗುತ ಕೈ-।
ಕೊಳಲು ಒಂದೇ ಸ್ವರ ಗೈಯೇ ।
ಪೊಳಲು ಪೊರಟು ಗೋಪೇರು ।
ಬಳಲುತ ವಿರಹತಾಪದೀ ।
ಕಳಲು ತ್ವರದಿ ಕದಡುತ್ತ ।
ತಳಲ ತಾಪಕೆ ಬಾಡಿದಂತೇ ।
ಮಳಲು ತುಳಿಯುತ್ತ ತೊಳಲುತ್ತ ।
ಘಳಿಲು ಶಬ್ದದಿ ಬರುತಿರೇ ।
ನೆಳಲು ನೆಮ್ಮಿಕೃಷ್ಣಯ್ಯಾ ।
ತಿಳಿಲು ಮಾತಿಲಿ ಬಳಿಗರೆದು ।
ಹೆಳಲು ಪಿಡಿದು ತಕ್ಕೈಸೀ ।
ಬಳಲುವ ತಾಪಾತೀರಿಸಿ ।
ಅಳಿ ಕುಂತಳಗೋವ ವಿಜಯವಿಠ್ಠಲ ।
ಪೊಳಲಿಗೆ ಬಂದ ರಜನಿಮುಖ ಕಾಲಾ ॥೫॥

**ಜತೆ**

ಚಿಕ್ಕಮಕ್ಕಳ ಕೂಡ ನಲಿದಾಡಿದ ಸ್ವಾಮಿ ।
ಲಕ್ಕುಮಿರಮಣಾ ವಿಜಯವಿಠ್ಠಲ ಕೃಷ್ಣ ॥೬॥

* * *

## ಸುಳಾದಿ – ೨೧



**ಇಂದಿರಾಪತಿ ಬಂದು ಮುಂದೆ ನಿಂತ, ಅಂದಿಗೆ ಕಿರಿಗೆಜ್ಜೆ ಒಂದಾಗಿ ನುಡಿಸುತ್ತ ಧಿಂಧಿಮಿಕೆಂದು ಕುಣಿದು ಕೈಯಲ್ಲಿ ಪೊಂಗೊಳಲನ್ನು ಹಿಡಿದು ತುಂಬಿದ ರಾಗದಲ್ಲಿ ನುಡಿಸಿದಾಗ ಎಳೆಗರುಗಳು ಮೊಲೆಯುಂಬುವ ಹಂಬಲದೊರೆದು ಬಳಿಗೆ ಸಾರಿದವು.**

**ಚುಂಚುಗೂದಲು, ಕಸ್ತೂರಿ ತಿಲಕ, ಮಿಂಚುಗಲ್ಲದಲ್ಲಿ ಮಾಗಾಯಿ ಬೆಳಕು, ಚಂಚಲಗಣ್ಣು, ಗೊಂಚಲು ತುರುಬಿನ ತುಂಗವಿಕ್ರಮತರಂಗ ಮೊದಲ ಹೆಜ್ಜೆಯಲ್ಲಿಯೇ ಸಿಗದೆ ಸುತ್ತಿಸುವ.**

**"ಸಂಚಿತಗಾಮಿ ಕಡಿಮೆಮಾಡುವ ವಿರಿಂಚಿ ಜನಕನೇ, ಅನಿಮಿತ್ತ ಬಂಧು, ನಿನಗೆ ನಿನ್ನ ಚರಿತೆಗೆ ನಮೋಯೆಂಬೆ"**

**॥ ರಾಗ–ಮಾರವಿ–ಧ್ರುವ ತಾಳ ॥**

ಇಂದಿರಾಪತಿ ಬಂದಾ ಎನ್ನ ಮುಂದೆ ನಿಂದಾ ।
ಇಂದು ಕುಣಿದಾ ಧಿಂಧಿಂಧಿಮಿಯೆಂದು ।
ಧಂಧಂ ಧಳಾಯಂದು ಅಂದಂದಂದವಾಗಿ ।
ಅಂದಿಗೆ ಕಿರಿಗೆಜ್ಜೆ ಒಂದಾಗಿ ನುಡಿಯೇ ।
ಇಂದಿರಾಪತಿ ವೃಂದಾರಕ ವೃಂದ ।
ಒಂದಾಗಿ ಸ್ತುತಿಸಲು ದುಂದುಭಿವಾದ್ಯ ।
ಸಂದಣಿ ಎಸಿಯೆ ಒಂದುಪಾದವನೆತ್ತಿ ।
ಒಂದು ಪಾದದಿ ವಸುಂಧರಮೆಟ್ಟಿ ಸುಂದರ ವಿಗ್ರಹ ।
ಇಂದಿರಾಪತಿ ಎಂದೆಂದಿಗಿಲ್ಲದಾ ನಂದವೆ ಪೊಸತೆನೆ ।
ಪೊಂದಿಪನಯ್ಯಾ ತನ್ನಂದವರಲ್ಲಿ ಗುಣ–।
ಸಿಂಧು ಚಂದಿರಮೊಗ ಇಂದಿರಾಪತಿ ಬಂದಾ ।
ನಂದ ನಂದನ ಗೋಪಿಕಂದ ವಿಜಯವಿಠ್ಠ ।
ಲಂದು ಮನದಿ ಸಂಬಂಧಿಗನೆಂದೆನೆ ॥೧॥

**ಮಟ್ಟ ತಾಳ**

ಮುರು ಬೆರಳವನಿಗೇ ಮುಟ್ಟಿ ಮುಟ್ಟಾದಿರೆ ।
ಕಂಬುಗೊರಳ ಕೃಷ್ಣ ಕೈಯಲಿ ಪೊಂಗೊಳಲು ।
ತುಂಬಿದ ರಾಗದಲಿ ತುತ್ತು ತುತುರಿಯನೇ ।
ಭೋಂ ಭೋಂ ಭೊಂ ಭೋಂ ಬೆಂಬ ಊದುವ್ವರಕೆ ।
ಅಂಬುಬಂಬೆಗಳ ಎಳೆಕರು ಮೊಲೆ ।
ಉಂಬುವ ಹಂಬಲ ಉತ್ಸಾಹದಿ ಮರೆದೂ ।
ಬೆಂಬಿಡದಲೆ ಸಾಲ ವಿಡಿದು ಓಡುತಬರಲು ।
ರಂಬಿಸಿ ಕರೆಯುತಿರೆ ಬೆರಳೊಳಗೆ ತಿದ್ದಿ ।
ಕೊಂಬುಬಾಗಿಸಿ ಕೆಲವು ತಮ್ಮ ಮೊಗವನ್ನು ।
ಅಂಬರಕೆ ಎತ್ತಿ ಅತಿ ತವರಿತದಲ್ಲೀ ।

ಮುಂಬಲಿ ನಿಲ್ಲೆ ವಿಜಯವಿಠ್ಠಲ ನೀ ।
ಲಾಂಬರನಕೂಡ ಬಾಲಾಟದಲ್ಲಿಪ್ಪಾ ॥೨॥

**ತ್ರಿವಿಡಿ ತಾಳ**

ಚುಂಚುಗೂದಲು ಮೃಗಲಾಂಛನದಂತೆ ತಿಲಕಾ ।
ಮಿಂಚುವ ಗಲ್ಲದಲ್ಲಿ ಮಾಗಾಯಿಯ ಬೆಳಕು ।
ಚಂಚಲಗಣ್ಣು ಮುಡಿಯ ಮುಕುಟ ಪೂವು-।
ಗೊಂಚಲು ತುರುಬಿನ ತುಂಗ ವಿಕ್ರಮ ರಂಗ-।
ಚಿಂಚ ಬಿಳಪು ಮಾಸಾ ಹಂಡಾ ಬೂದಗಪ್ಪು ।
ಕೆಂಚಾವುಗಳ ಒಂದೆಶೆಯಲ್ಲಿ ಕರೆವುತಾ ।
ಹಂಚಿಕೆ ಮಾಡಿದಾ ಗೋಮಕ್ಕಳ ಕೂಡ ।
ತ್ವಂಚ ಹಂಚಾವೆಂದು ಹರಿದಾಡಿ ಜಿಗಿವುತಾ ।
ಕೊಂಚಾ ಬಲಿಷ್ಠನಂತೆ ಗೋಮಕ್ಕಳಿಂದ ಸೋತು ।
ವಂಚಕನಾಗಿ ಅಡಗಿ ಓಡ್ಯಾಡಿದಾ ।
ಕುಂಚಿಕೆ ಎಂತೆ ಮಾಡಿ ರತ್ನಗಂಬಳಿ ಪೊದ್ದು ।
ಲಂಚಾ ಕೊಡುವ ತನ್ನ ಕಂಡ ಗೋವಳರಿಗೇ ।
ಸಂಚಾರ ಮಾಡುವ ಗೆಳೆಯರೊಳಗೆ ಸುಳಿದ ।
ಮುಂಚಡಿಯೊಳಗೆ ಸಿಕ್ಕದಲೆ ಸ್ತುತಿಸುವ ।
ಸಂಚಿತಾಗಾಮಿ ಕಡಿಮೆ ಮಾಡುವಾ ವಿ ।
ರಿಂಚಿ ಜನಕನೀತಾ ವಿಜಯವಿಠ್ಠಲರೇಯಾ ।
ಕಾಂಚಮಯದಂತೆ ಥಳಥಳಿಸುತ ಸುಳಿದಾ ॥೩॥

**ಅಟ್ಟ ತಾಳ**

ಚಪ್ಪಾಳೆ ಹಾಕುತ ಗೋಪಾಲಾ ।
ಕುಪ್ಪಳಿಸಿ ನೋಡಿ ಹಾರಾಗುಪ್ಪಿಯ ಹಾರುವಾ ತಿರಗಿ ।
ಸರ್ಪಾಕಾರದ ಗೆರಿಯಾ । ರೆಪ್ಪಿಯ ಇಡದೆ ದಾಟುವಾ ।
ತಪ್ಪದೇ ಗಂಗ ಹೊಡುವಾ । ಬಪ್ಪಾ ಕಂದುಕವ ತಟ್ಟುವ ।
ಅಪ್ಪಪ್ಪಾ ಈತನೇ ಬಲುದೈವ । ತಪ್ಪು ಹೊರಿಸಿ ವಾರಿಗೆವರ ।
ತಪ್ಪಾರದಂಡಾ ವಾಡಿಸುವ । ಅಪ್ಪಾರ ಮಹಿಮ ಇಷ್ಟರೊಳು ।
ಗೋಪಳ್ಳಿಯೊಳಗೆ ದಟ್ಟಡಿ । ಸಪ್ಪಳಿಲ್ಲದಂತೆ ಮನಿಮನಿಯ ।
ತುಪ್ಪ ಬೆಣ್ಣೆಪಾಲು ಮೊಸರು । ಚಪ್ಪರಿಸಿ ಮೆದ್ದು ಚಟ್ಟಿಗೆ ।
ದೊಪ್ಪನೆ ನೆಲಕೆ ಬಿಸುಟಾ । ಗಪ್ಪಚುಪ್ಪಾಗಿ ಪೊರಡುವಾ ।
ಅಪಥದೊಳು ನಾರೇರ । ಕುಪ್ಪಸಕ್ಕೆ ಕೈ ಹಾಕುವ ।

ಅಪ್ಪಿಕೊಂಡು ಮುದ್ದಾಡುವ । ತಪ್ಪಿಸಿಕೊಂಡು ಗೋಪಿಯ ಬಳಿಯ ।
ಇಪ್ಪನು ಬಲುಬಗೆ ತೋರುತ । ಇಪ್ಪಗೆ ಲೀಲೆಯ ವಾರಿಜ ಸಂಭವ ।
ಸರ್ಪಭೂಷಣ ಇಂದ್ರಾದಿಗಳು । ಅಪ್ರತಿ ಎನುತ ತಲೆವಾಗಿ ತುತಿಸಿ ।
ಅಪ್ರಮೆಯನ್ನ ಪೊಗಳಿದರು ।
ವಪ್ಪಿಡಿ ಅವಲಿಗೆ ಮೆಚ್ಚಿದ ವಿಜಯವಿಠ್ಠಲ ಸುಲಭಾ ।
ಅಪ್ಪಾ ನೌವಾರಪ್ಪಾ ಚಪ್ಪಾಳೆ ಹಾಕುತ ಗೋಪಾಲಾ ॥೪॥

### ಆದಿ ತಾಳ

ಮುನಿ ಮನುಗಳ ತಮ್ಮ ಮನಸಿಲಿ ।
ಎಣಿಸಿ ಗುಣಿಸಿ ಕಾಣರ ।
ಎಣೆಗಾಣೆನು ನಿನ್ನ ಬಾಲತ್ವಾತನದ ಕ್ರೀಡೆಗೆ ನಾನೆಲ್ಲಿ-।
ಮಣಿಗಣ ಮಿಕ್ಕಾದ ವೇದಿಕಾ । ಅನುದಿನ ಯಾಗದ ಶಾಲೇಲಿ ।
ಅನುವಾಗಿ ಇರಲು ಅದರಲ್ಲಿ । ಕೊನೆ ಬೆರಳಾದರು ಇಡದೇ ।
ಗಣನೆ ಮಾಡದಲಿಪ್ಪೆ ಇತ್ತಲು ।
ಮನುಜ ವಿಗ್ರಹನಾಗಿ ಗೋವಳಾ ।
ವನಂತೇರ ಮುನಿಯ ಅಂಗಣಾ ।
ಅನುಚಿತವಾಗಿರೇ ನೀನೊಲಿದು ।
ಇನಿತಾದರೆ ಪೋಗದಿರಹುದೆ ।
ದಿನದಿನ ಸಂಚಾರ ಮಾಡುವೆ ।
ಅನಿಮಿತ್ತ ಬಂಧು ವಿಜಯ ವಿಠ್ಠಲ ।
ನಿನಗೆ ನಮೋ ನಮೋ ನಿನ್ನ ಚರಿತಕೆ ನಮೊ ॥೫॥

### ಜತೆ

ಅಂದು ನಾರಂದ ಪುರಂದರ ದಾಸರಾ ।
ಮಂದಿರದೊಳು ಕುಣಿದಾ ವಿಜಯವಿಠ್ಠಲ ವೊಲಿದಾ ॥೬॥

* * *

## ಸುಳಾದಿ – ೨೨

ಮಗು ಹಸಿದಿದ್ದಾನೆಂದು ತಿಳಿದು ಮಮತೆಯಿಂದ ತಾಯಿಯು ಬಾಲ ಕೃಷ್ಣನಿಗೆ ಉಣಿಸುವ ಶಬ್ದಚಿತ್ರ ಇಲ್ಲಿ ಮನೋಹರವಾಗಿ ಮೂಡಿಬಂದಿದೆ.

ಪರಮಾತ್ಮನು ಸದಾ ಸನಿಹದಲ್ಲಿಯೇ ಇದ್ದು ತಾಯಿ ಮಗುವಿಗೆ ಉಣಿಸುವಂತೆ, ಜೀವರಿಗೆ ಅವರವರ ಯೋಗ್ಯತಾನುಸಾರವಾದ ಫಲವನ್ನು ಉಣಿಸುತ್ತಾನೆ. ಅವನಿತ್ತದ್ದನ್ನು ಉಣಲೇಬೇಕು.

**"ಸ್ವಾಮಿ, ನಿನ್ನ ಸರಿಬಂದಂತೆ ಉಣಿಸು. ಮನೋ ಇಂದ್ರಿಯಗಳೆಲ್ಲ ನಿನ್ನಾಧೀನ ನನಗೆ ಲೇಸಮಾತ್ರವೂ ಸ್ವಾತಂತ್ರ್ಯವಿಲ್ಲ. ಅಡಿಗಡಿಗೆ ಚಿಂತಿಸಿ ನಾನೇಕೆ ಬಡವಾಗಲಿ. ಪ್ರಭೂ ನೀನೇ ಗತಿಯೆಂದು ನಮಿಸುವೆ, ನುತಿಸುವೆ"**

**॥ರಾಗ–ಕಾಂಬೋಧಿ–ಧ್ರುವ ತಾಳ॥**

ಪೆತ್ತಾ ಸವಿತ್ರೀ ತನ್ನ ತನುಜಂಗೆ ಪ್ರೀತಿಯಿಂದ ।
ಎತ್ತಲು ಪೋಗಗೊಡದೆ ಹಸಿದಾನೆಂದು ।
ಉತ್ತಮನ್ನವಮಾಡಿ ಕುಳ್ಳಿರಿಸಿಕೊಂಡು ಬಿಡದೆ ।
ತುತ್ತುಗಳನ್ನು ಮಾಡಿ ಉಣಿಸುತ ತಾನು ।
ಹತ್ತಾದುಯೆಂದು ತಲೆದೂಗಿ ಎದ್ದು ಪೋಗಲು ।
ಮತ್ತೆ ಕರೆತಂದು ನ್ಯಾವರಿಸೀ ।
ಅತಿಶಯವಾಗಿ ರಂಬಿಸಿ ನಾಲ್ಕು ಕಡೆ ।
ಸುತ್ತಲು ತೋರಿ ತೋರಿ ಒಂದೊಂದು ತುತ್ತಾ ।
ತುತ್ತನೆ ಮಾಡಿ ಒಲ್ಲೆನೆಂದರೆ ಅವನ ।
ನೆತ್ತಿಯ ಪಿಡಿದು ಚಂಡಿಕೆ ನೆವದಿಂದ ।
ಇತ್ತ ಪೇಳಾಲದೆ ಕವಳಾ ಬಾಯಿಗೆ ನ–।
ಗುತ್ತ ಮೋಹದಲ್ಲಿ ಬೇಸರದೆ ।
ಚಿತ್ತಜನಯ್ಯಾ ನೀನೆ ಆವಾವಕಲ್ಪಕ್ಕೆ ।
ಹೆತ್ತ ತಾಯಿಯಂತೆ ಇಪ್ಪ ಮಹಿಮಾ ।
ಎತ್ತಣ ಪ್ರಯೋಜನವಿಲ್ಲಾ ಅದೃಷ್ಟವೆ ।
ರತ್ತುನವೇ ಪ್ರಾಪ್ತಿ ವಿಷ್ಣುರಹಸ್ಯದಿ ।
ಬಿತ್ತರಿಸಿ ನಿನ್ನ ಬಗೆಬಗೆಯಿಂದ ನಾನು ।
ತುತ್ತಿಸಿಕೊಂಡಾಡಿದೆ ಎನಗೆ ಇನಿತು ।
ವೃತ್ತಿಯ ಕಲ್ಪಸಿದ್ದು ಆಗದೆಂದು ಬಿನ್ನೈಸೆ ।
ಚಿತ್ತಕ್ಕೆ ತಾರದಿಪ್ಪ ಬಗೆ ಆವದೋ ।
ಹತ್ತಿಲಿಯಿದ್ದು ತಾಯಿಮಗನಿಗೆ ಉಣಿಸಿದಂತೆ ।
ನಿತ್ಯ ತೊಲಗಲೀಯದೆ ಉಣಿಪದೇವಾ ।
ತತ್ತಳಗೊಂಬಾದೇನು ಸರ್ವಕಾಲದಲಿ ನೀ–।
ನಿತ್ತದ್ದು ಉಂಡು ತೀರಿಸಲೇಬೇಕು ।
ಬತ್ತಿಯ ಚಾಚಿದಂತೆ ದಿನದಿನಕೆ ಏನ್ನಭಾರ–।
ಪೊತ್ತು ಅತ್ಯಂತ ಶಕ್ತ ಸರ್ವೋತ್ತಮಾ ।
ಭೃತ್ಯವತ್ಸಲ ನೀನಲ್ಲದೆ ಒಬ್ಬರಿಲ್ಲಾ ।
ಸತ್ಯವೆ ನುಡಿದೆ ನುಡಿದೆ ಇದು ಸಿದ್ಧಾಂತವೋ ।
ವಿತ್ತ ಗೋ ಧಾನ್ಯ ನಾನಾ ವಸ್ತುಗಳೆಲ್ಲ ಅಲ್ಲಾ–।

ವಿತ್ತರೆ ಬಾರವಯ್ಯಾ ಇದು ಸೋಜಿಗಾ ।
ಸುತ್ತುವಸುಳಿಗೆ ಕೊನೆ ಮೊದಲಾವದು ಕಾಣೆ ।
ಉತ್ತಮ ಶ್ಲೋಕ ನೀನು ಕೊಡುವದೆಂತೊ ।
ಚಿತ್ರವಾಗಿದೆ ಎನಗೆ ಎಂದೆಂದಿಗೆ ನೋಡೆ ।
ಚಿತ್ರಾ ಚಿತ್ರವೆಂದೆಂಬೆ ಬಲುವಿಚಿತ್ರಾ ।
ಕೀರ್ತಿ ಪುರುಷ ನಮ್ಮ ವಿಜಯ ವಿಠ್ಠಲ ನಿನ್ನ ।
ಕೀರ್ತನೆ ಮಾಡುವದು ಒಂದೇ ಮರವಾಗದಿರಲಿ ॥೧॥

**ಮಟ್ಟ ತಾಳ**

ಜನಕನ ಉದರದಲ್ಲಿ ತಂದಿಟ್ಟವನಾರು ।
ಜನನಿಯ ಗರ್ಭದಲ್ಲಿ ಪೊಗಸಿದವನಾರು ।
ದಿನದಿನಕೆ ಅಲ್ಲಿ ಅವಯವಗಳ ತಿದ್ದಿ ।
ತನುವ ಬೆಳಸಿ ಕಡಿಗೆ ಹಾಕಿದವನಾರು ।
ಕ್ಷಣಕ್ಷಣಕೆ ಸ್ನೇಹ ಪೆಚ್ಚಿಸಿ ಎನ್ನ ರ-।
ಕ್ಷಣೆಯನು ಮಾಡಿ ಸಲುಹಿದವನಾರು ।
ಮನೆ ಮನದಲಿಯಿದ್ದು ನಾನಾ ಬಗೆಯಿಂದ ।
ಇನಿತು ಪಾಲಿಸುವ ಮಹಾಮಹಿಮ ಭಕ್ತರಪ್ರಿಯ ।
ಕನಸು ಸುಷುಪ್ತಿಯಲಿ ಅನುಭವಗಳು ಸಾಕ್ಷಿ ।
ನಿನಗೆ ನೀನೆ ನಲಿವ ವಿಜಯ ವಿಠ್ಠಲರೇಯಾ ।
ಮನದಲಿ ನಿಂದು ಬಲು ಚರಿತೆ ಮಾಳ್ಪೆ ॥೨॥

**ತ್ರಿವಿಡಿ ತಾಳ**

ಏನು ಹೇಳಲಿ ಹರಿ ಈ ಪರಿ ಸೌಖ್ಯಗಳ ।
ನಾನೇ ಅನುಭವಿಸುವೆನೆ ತಿಳಿಯಾ ನೋಡು ।
ಕಾಣಬಂದ ಮಾತು ತೋರಿನುಡಿದೆ ಉದಾ-।
ಸೀನ ಮಾಡಿದಂತೆ ಸುಮ್ಮನಿದ್ದು ।
ನಾನಾಪರಿಯಲ್ಲಿ ಆಣೆಗಳಿಟ್ಟು ಸ-।
ನ್ಮಾನವಲ್ಲೆನೆಂದು ಚಾಲುವರಿಯೇ ।
ನೀನೇ ಈ ಪರಿಯಿಂದ ಎಲ್ಲೆಲ್ಲಿ ಇದ್ದು ಸೋ-।
ಪಾನವೇರಿದಂತೆ ವಿಷಯಂಗಳಾ ।
ಭಾನು ಉದಯ ಅಸ್ತಮಾನ ತೊಲಗಲೀಯದೆ ।
ನೀನುಣಿಸದು ನಿನಗೆ ಬಲುಧರ್ಮವೇ ।
ಅನಂತ ಕಾಲಕ್ಕೆ ಇದನೇ ನೇಮಿಸಿದರೆ ।

ಜ್ಞಾನ ಬರುವದೆಂತೊ ಜ್ಞಾನಾಂಬುಧಿ ।
ಮಾಣಿಸು ನಮಿಸುವೆ ಇನ್ನೊಂದು ವರವನ್ನು ।
ಮಾನಸದಲಿ ಬೇಡಿ ಕೊಂಡಾಡುವೆ ।
ಕಾಣಿ ಮೊದಲಾದ ಆಶಿಯ ಬಿಡಿಸಿ ನಿ-।
ದಾನದಲಿ ನಿನ್ನ ಚರಣಯಂಗಳ ।
ಧ್ಯಾನಮಾಡಿ ಏಕಾಂತದಲಿ ಇದ್ದು ।
ಮಾನವರಿಗೆ ಗೋಚರಿಸುವಂತೆ ।
ಆನಂದ ಕಾನನದೊಳಗಿದ್ದು ಪರಿಯನ್ನು ।
ಶ್ರೀನಿವಾಸನೆ ಮಾಡು ಅನಾಥ ಬಂಧು ।
ಶ್ವಾನನಂತೆ ನಾನು ಗಣಿ ಗಣಿಕಾ ಶೂದ್ರ ।
ಹೀನಾಳು ತವಕರಜ ವೈರಿಗಳು ।
ಯೋನಿ ವಿಕ್ರಯ ಶೂದ್ರ ಬ್ರಹ್ಮ ವಿಘಾತಕ ।
ನಾನಾ ದೋಷಿಗಳ ಮನೆ ಅನ್ನೋದಕ ।
ಕೇಣಿಗೋಲದೆ ತಿಂದೆ ದಶಮಿ ದ್ವಾದಶಿ ಅ-।
ಯನ ಪರ್ವಣಿ ಪುಣ್ಯಕಾಲದಲ್ಲಿ ।
ಈನುಡಿ ಕೇಳಯ್ಯಾ ಮುಣುಗಿದೇ ।
ಮುಣಗಿದೆ ಮೇಣು ಮುಣಗಿದೆ ಮತ್ತು ಮುಣುಗಿದೆನೊ ।
ನೀನುದ್ಧರಿಸದಿರೆ ಎನಗಾವನು ದಿಕ್ಕು ।
ಈ ನಾಡಿನೊಳಗೆ ಎಲ್ಲೆಲ್ಲಿ ನೋಡೇ ।
ನಾನೋತ ಫಲವಿಂತೊ ನಿನಗೆ ಕರುಣವಿಲ್ಲೊ ।
ಏನಯ್ಯಾ ಮೊರೆಯಿಡಲು ಸುಮ್ಮನಿಪ್ಪೆ ।
ಜ್ಞಾನಿಗಳರಸ ಶ್ರೀವಿಜಯವಿಠ್ಠಲ ನಿನ್ನ ।
ಧ್ಯಾನಗಾನ ಮಾಳ್ಪದಕೆ ಸತತ ಸಂಗತಿಯಾಗೋ ॥೩॥

### ಅಟ್ಟ ತಾಳ

ಉಣಿಸು ಉಣಿಸು ನಿನ್ನ ಸರಿಬಂದ ತೆರದಂತೆ ।
ಮನೋ ಇಂದ್ರಿಯಂಗಳು ಪ್ರಾಣ ನಿನ್ನಾಧೀನ ।
ಎನಗಾವ ಸ್ವಾತಂತ್ರ ಲೇಶಮಾತ್ರವು ಇಲ್ಲ ।
ವಣಗಿದ ವೃಕ್ಷ ಪಲ್ಲೈಸಿದ ಬಗೆಯಾಗಿ ।
ದಿನ ಪ್ರತಿದಿನದಲ್ಲಿ ಕಾಣಿಸುತಿಪ್ಪದು ।
ಜನುಮ ಜನುಮದಲ್ಲಿ ಬಾಹಿರಂತರ ದರು-।
ಶನ ಕೊಡುತಲಿ ಎನ್ನಸಾಕುವ ದಾತಾರ ।
ಘನ್ನ ಮೂರುತಿ ನಮ್ಮ ವಿಜಯವಿಠ್ಠಲರೇಯಾ ।
ಎಣೆಗಾಣೆ ನಿನ್ನಲೀಲೆಗೆ ನಮೋ ಅನಂತ ನಮೋ ॥೪॥

**ಆದಿ ತಾಳ**

ಆರ ಓದನ ಉಂಬೆ ಆರವಸ್ತ್ರವುಡುವೆ ತೊಡುವೆ ।
ಆರಿಂದ ಸುಖಬಡುವೆ ಆರಿಂದ ದೇಹತೆತ್ತು ಉದ್ಧಾರನಾಗುವೆ ।
ಆರಿಂದ ಬಾಳಿಬದುಕಿ ಕಾಲಕ್ರಮೇಣ ಮಾಡುವೆ ।
ಆರಾದರೂ ಉಂಟೇ ಈ ಜಗತ್ತಿನೊಳಗೇ ।
ಶ್ರೀರಮಣ ನೀನೆಯಲ್ಲವೆ ಅನ್ಯರೊಬ್ಬರ ಕಾಣೇ ।
ಸಾರಿ ಸಾರಿಗೆ ನಾನೇ ಅನುಭವಿಸುವ ಸೌಖ್ಯ ।
ಆರದಲ್ಲಾ ಆರದಲ್ಲಾ ನಿನ್ನದೇ ಸತ್ಯಸತ್ಯ ।
ಕ್ರೂರ ಜನರ ವೈರಿ ವಿಜಯವಿಠ್ಠಲ ನಿನ್ನ ।
ಕಾರುಣ್ಯವಿರಲಾಗಿ ಸರ್ವಾನುಕೂಲ ನಿತ್ಯಾ ॥೫॥

**ಜತೆ**

ಅಡಿಗಡಿಗೆ ಚಿಂತಿಸಿ ಬಡವಾಗುವದ್ಯಾಕೆ ।
ಒಡಿಯಾ ನೀನೆ ಗತಿಯೋ ವಿಜಯ ವಿಠ್ಠಲಸ್ವಾಮಿ ॥೬॥

* * *

# ಶ್ರೀಕೃಷ್ಣ ಮಹಿಮಾ ಸ್ತೋತ್ರ

## ಸುಳಾದಿ – ೨೩

**ಅಕಳಂಕನಾಗಿ ಗೋಕುಲದಲ್ಲಿ ಜನಿಸಿ ಗೋಪಾಲಕರಿಂದ ಬೈಸಿಕೊಂಡದ್ದೇಕೋ ಹೊಳೆಯದು, ತಿಳಿಯದು. ಮೀಸಲಾದ ಆಭರಣ ಭೂಷಣಗಳಿದ್ದರೂ, ಗೋವುಗಳನ್ನು ಕಾಯುತ್ತ ಚಿಗುರೆಲೆ, ಬಳ್ಳಿಗಳನ್ನು ತಲೆಗೆ ಸುತ್ತಿದ್ದೇಕೆ ? ನಿನ್ನ ಲೀಲೆಗಳನ್ನು ಎಷ್ಟು ದಿನವೆಣಿಸಿದರೂ ತಿಳಿಯದಾಗಿದೆ. ನಿನ್ನಾಟ ಬಹು ಸೋಜಿಗ.**

**ಅಪ್ರಾಕೃತನಾಗಿ ಪ್ರಾಕೃತದಲಿ ಮೆರೆದ ಅಪ್ರಮೇಯ, ನಿನ್ನ ವಿಗಟ ನಾಟಕಕ್ಕೆ ಕೈಮುಗಿದು ಶರಣೆಂಬೆ.**

**॥ ರಾಗ–ಭೈರವಿ ಝಂಪೆ ತಾಳ ॥**

ನವ ರತುನದಿಂದಲೆಸೆವ ಮುಕುಟದೊಳಗೊಂದು ।
ರವಿಯ ಹರಳಿನ ಕಾಂತಿ ಪೇಳಲಳವಲ್ಲ ।
ಭುವನ ಪಾತಾಳ ಗಗನವನು ಭೇದಿಸಿಕೊಂಡು ।
ಛವಿಕವಿದು ಮುಸುಕಿದುದು ಕವಿಗಳೆಣಿಸಲೋಶವೇ ।
ದಿವಿಜಜೇಷ್ಠನು ಪವನ ದಿವಿಜ ಪವನಾಶನ ।

ಶಿವ ವೃದ್ಧ ಶ್ರವನಗ್ನಿ ಜವನಸುರ ವೈಶವಣ ।
ದಿವಿಜ ರವಿಯಾದಿಗಳ ಅವಯವಾದಿಗಳಾಭರಣ ।
ಛವಿಗೆ ಅಪಾರಕ ಪ್ರತಿಛವಿ ಥಳಥಳಿಸೆ ।
ಯವೆದೆಗಿಯಾದತಿ ಸೋಜಿಗವನು ಪೊಂದಿನಿಂದರು ।
ಕವಿನಾಮ ವಿಜಯ ವಿಠ್ಠಲ ನಿನ್ನ ಸರಿಧೊರೆ ।
ಅವನಿಯೊಳಗಿಲ್ಲದಿರೆ ಈಪರಿ ರೂಪವನ್ನು ।
ತವಪಾದಕೆ ನಮೋ ನಮೋ ಮಾಯಾಲೀಲಾ ॥೧॥

**ಮಟ್ಟ ತಾಳ**

ಪ್ರಳಯಾಲಳವಿಲ್ಲಾ ಚಳಿಬಿಸಿಲು ಇಲ್ಲಾ ।
ಮಳೆಗಾಳಿ ಇಲ್ಲಾ ತಳಲಿದ ವನಗಳು ।
ಫಲಪುಷ್ಪದಲಿ ಮೀಸಲುಗುಂದದಲ್ಲೆವೆ ।
ಕಳೆಕಾಂತಿಗಳಿಂದ ಥಳಥಳ ಪೊಳೆವಂಥ ।
ಹೊಳಲಾದಾ ವೈಕುಂಠ ನೆಲೆಯವನು ತೊರೆದು ।
ಇಳೆಯೊಳು ಬಂದು ಗೋಕುಲದಲ್ಲಿ ಜನಿಸಿ ಗೋ-।
ವಳನಾದದೇನು ವಿಜಯ ವಿಠ್ಠಲ ನಿನ್ನ ।
ನೆಲೆ ತಿಳಿಯದೆಂದು ಬಳಲುವರು ಸುರರು ॥೨॥

**ತ್ರಿವಿಡಿ ತಾಳ**

ಮುಕುತಾವನದಲಿ ಮುಕುತ ಶುಕ ಹಂಸೆ ।
ಪಿಕ ಭೃಂಗ ನಾನಾಕಪಕ್ಷಿಗಳಾ ।
ನಿಕರ ಕಿಲಿಕಿಲಿ ಶಬ್ದ ಸದಾ ಮುಕುಳಿದ ನಗೆಯಲ್ಲಿ ।
ಕಕ ಕಕ ಕಾಯೆಂದು ಝೇಂಕರಿಸುತಿರೇ ।
ಮುಕುತಾಮುಕುತ ಬೊಮ್ಮರ ।
ಭಕುತಿರಸದಿಂದ ಹಸ್ತಕರಾಗಿ ನಿಂದು ಭ್ರಾ-।
ಮಕರಾಗಿ ತುತಿಸೆ ವಿಕಸಿತ ಕಮಲಾ-।
ಬಕದ ಕೊನೆಯಿಂದ ಮುಕುತಾ ।
ಮುಕುತರನ್ನು ನೋಡುವ ದೇವಾ ।
ಅಕಳಂಕನಾಗಿ ಇದೇ ಗೋಕುಲದಿ ಜನಿಸೀ
ಸಕಲ ಗೋಮಕ್ಕಳ ಕೈಯ್ಯ ಬೈಸಿಕೊಂಡದ್ದೇನೊ ।
ಅಖಿಳ ಜೀವಕ್ಕೆ ಭಿನ್ನ ಶಾಶ್ವತ ವಿಜಯವಿಠ್ಠಲ ।
ಸುಖಸಾಂದ್ರ ನಿನ್ನ ಮಕ್ಕಳಾಟಿಕೆ ಸೋಜಿಗವೋ ॥೩॥

**ಅಟ್ಟ ತಾಳ**

ಮೀಸಲಾಭರಣ ಭೂಷಣ ನಾನಾಕ ।
ಲೇಸಾದ ಪುಷ್ಪದ ಮಾಸದ ಮಾಲಿಕೆ ।
ಭಾಸಿತದಲಿ ಪೀತ ವಸನ ಶೋಭಿಸುತಿರೆ ।
ಏಸು ಶಿಂಗಾರ ಬಿಟ್ಟು ಗೋಸಂಕುಲ ಕಾಯ್ದು ।
ವೇಷಧಾರಕನಾಗಿ ಕೀಸಲಯದ ಬಳ್ಳಿ ।
ನೀಸುತ್ತಿ ಶಿರಕೆ ಮಾನೀಸನಾಗಿ ಜೀವ-।
ರಾಸಿ ಕೂಡಾಡಿದೆ ಕೇಶವ ವಿಜಯ ವಿಠ್ಠಲ ನಿನ್ನಲೀಲೆಯ ।
ಏಸೇಸು ದಿನಕೆ ಎಣಿಸಲು ಮಿತಿಯುಂಟೇ ॥೪॥

**ಆದಿ ತಾಳ**

ಜಗತ್ತಿನೊಳಗೆ ಇದ್ದ ಗುಣಕೆ ।
ಮಿಗಲಯ್ಯಾ ನಿನ್ನ ಗುಣಗಳು ।
ಅಗಣಿತ ರಾಶಿಗಳು ಬಗೆಬಗೆಯಿಂದ ಇರಲು ।
ಮಗುವಿಗೆ ಎಲ್ಲಾರೊಳು ಹಗಲಿರುಳು ನಗೆಯಿಂದ ।
ಹಗರಣವಾಆನೆಂಬೊ ಜಗದೊಳಗಾಶ್ಚರ್ಯವೇನೋ ?।
ಖಗಗಮನಾ ವಿಶ್ವಾತ್ಮ ವಿಜಯವಿಠ್ಠಲ ನಿನ್ನಾ ।
ವಿಗಡ ನಾಟಕಕ್ಕೆ ಕೈಮುಗಿದು ಶರಣೆಂಬೆ ॥೫॥

**ಜತೆ**

ಅಪ್ರಾಕೃತನಾಗಿ ಪ್ರಕಾರತದಲಿ ಮೆರದೆ ।
ಅಪ್ರಮೇಯ ನಾಮಾ ವಿಜಯವಿಠ್ಠಲ ಅನಾದಿ ॥೬॥

* * *

## ಸುಳಾದಿ – ೨೪

**ಮೋಕ್ಷದಾಯಕನಾದ, ಅಗಣಿತ ಬಲವಂತನಾದ, ಜಗನ್ಮೋಹನನೇ; ಮಗುವಾಗಿ ನಗುತ ಮಲಗಿದ ಅನಾದಿಗನೇ, ಗೋಪಿಗೆ ಹಗಲಿರುಳು ಬಗೆಬಗೆಯ ಲೀಲೆ ತೋರಿ, ವಿವಿಧ ಆಟಗಳನ್ನಾಡಿ ತಿರುಗಿ ವಗರುಮೆದ್ದವನೇ.**

**ಸ್ವರಮಣನಾದರೂ ಗೊಲ್ಲರಂಗನೆಯರ ರಮಿಸಿದ ರಹಸ್ಯವೇನು ?**

**ಮಾಯಾ ಲೀಲಾಗಾರನಾದ ಸ್ವಾಮಿ ಸುರರಿಗೆಲ್ಲ ಉಪದೇಶವಿತ್ತ ನೀನು ಸಾಂದೀಪರ ಬಳಿ ಓದಿದ ಔಚಿತ್ಯವೇನು ? ವಿಶ್ವ ನಾಟಕ, ಅತಿ ಸೋಜಿಗವನ್ನು ತೋರಿದ ಚತುರ ನೀನು.**

**ಶುಕ್ಲ ಶೋಣಿತ ರಹಿತನಾದ ನೀನು ದೇವಕಿಯ ಗರ್ಭದಿಂದ ಬಂದೆ ಎಂಬುದರ ಗುಟ್ಟೇನು ?**

**ನಿನ್ನ ಗುಣಗಳ ಸರ್ವಲಕ್ಷಣಗಳೂ ನಿತ್ಯನೂತನ. ಅನುಪಮಚರಿತನಾದ ಸುರಾಸುರರಿಗೆ ಸುಖದುಃಖಕ್ಕೆ ಕಾರಣನಾದ ನಿನಗೆ ಅನಂತಾನಂತ ಪ್ರಣಾಮಗಳು.**

**॥ ರಾಗ–ನಾಟಿ–ಧ್ರುವ ತಾಳ ॥**

ಸ್ವರ್ಗತಿ ನಿರ್ಗತಿ ಸಕಲ ನಿಗಮ ಮಸ್ತಕರನ್ನನೇ ।
ಅಗಣಿತ ಬಲನೇ ಜಗದಾ ಮೋಹನನೇ ।
ಸಗುಣ ನಿರ್ಗುಣದವನೇ ಸ್ವಗುರು ಸ್ವವಶನೇ ।
ಸ್ವಗಮನಾನೇ ಸ್ವಾಂಗ ಝಗಿಪ ಮುಕುಟನೇ ।
ಮಗುವಾಗಿ ನಗುತ ಮಲಗಿದ ಮಹಿಮನೇ ।
ಯುಗಯುಗದವತಾರ ಅನಾದಿಗನೇ ಜಗಕೆ ಸೊ–।
ಜಿಗ ತೋರಿದ ಮಗುವಾದವನೇ ।
ಹಗಲಿರುಳು ಗೋಪುಇಗೆ ಬಗೆ ತೋರಿದವನೇ ।
ಭೊಗರಿ ಚಂಡು ಚಿಣಿಕೋಲಾಡಿದವನೇ ।
ಜಿಗಿದು ಅಡವಿತಿರುಗಿ ವಗರುಮೆದ್ದವನೇ ।
ಹಗಲಿರುಳು ಪರರ ವಗೆತನನಳಿದವನೇ ।
ಬಗೆಬಗೆಯಿಂದಲಿ ಹಗರಣದವನೇ ।
ಜಗಕೆ ಚನ್ನಿಗ ಗುಪ್ತ ವಿಜಯವಿಠ್ಠಲನೇ ।
ವಿಗಡತನದ ವಿನೋದಿಗನೆ ಪಳ್ಳಿಗನೇ ॥೧॥

**ಮಟ್ಟ ತಾಳ**

ಸಾಗರವೆಲ್ಲಾ ಪೋಷಣೆಗೊಂಬೋ ।
ದಾಗಿದೆ ನಿನ್ನ ಕರತಳವಯ್ಯಾ ।
ವಾಗರ ಗಂಜಿ ಅಂಬಲಿ ಜೋರು ।
ನೀಗುಡುವೆ ಭೊಗಸಿಯನುವಡ್ಡಿ–।
ದಾಗಡಿ ಬಳ್ಳಿ ತಲೆಗೆಸುತ್ತಿ ಆಗರದೊಳಗೆ ಆಡುವದೇನೋ ।
ಸೋಗು ತೋರಿದ ವಿಚಿತ್ರಚರಿತಾ ಪ್ರ–।
ಜಾಗರ ಮೂರುತಿ ವಿಜಯ ವಿಠ್ಠಲ ।
ಹೀಗಲ್ಲದೆ ಮತ್ತಾರರ್ಚಿಸಾರೇ ॥೨॥

**ತ್ರಿವಿಡಿ ತಾಳ**

ಸುತನ ಕನ್ನಿಕೆ ಮಾಡಿ ನೆರವ ಸ್ವರಮಣನೇ ।
ಕ್ಷಿತಿಯೊಳು ಗೊಲ್ಲರಂಗನಿಯರ ರಮಿಸುವರೆ ।

ಸತಿಯಾಗಿ ಸುರರಿಗೆ ಅಮೃತವನೆರೆದವನೇ ।
ಸತಿಯರು ಬೇಕೇನೊ ಮಾಯಾಲೀಲಗಾರನೇ ।
ಹಿತವಾಗಿ ಸುರರಿಗುಪದೇಶ ವಿತ್ತವನೇ ।
ಕ್ಷಿತಿಸುರ ಸಾಂದೀಪನಲ್ಲಿ ಓದೀಗನೇ ।
ಯತಿಗಳ ಮನಸಿಗೆ ದೂರತರವಾಗುವನೇ ।
ರಥವನ್ನು ನಡಿಸಿದ ಬಂಡಿಓವಿಗನೇ ।
ಚತುರ ಶ್ರೀ ವಿಜಯವಿಠ್ಠಲ ವಿಶ್ವನಾಟಕ ।
ಅತಿ ಆಶ್ಚರ್ಯವ ತೋರಿದ ಸತತ ಚತುರಿಗನೆ ॥೩॥

**ಅಟ್ಟ ತಾಳ**

ಸ್ತಂಭ ಸಂಭವನಾಗಿ ಉದುಭವಿಸಿದ ಪರಿ ।
ಎಂಬಿನೆ ಶುಕ್ಲ ಶೋಣಿತ ವಿರಹಿತ ದೇವಾ ।
ಕುಂಭಿಣಿಯೊಳು ದೇವಕಿದೇವಿ ಗರ್ಭದ–।
ಲಿಂಬಿಟ್ಟು ಜನನವಾದ ಪರಿಆವದು ।
ತುಂಬರ ನಾರದ ಜಂಭಾರಿ ಶಂಭು ಸ್ವ–।
ಯಂಭು ಸುರಾದ್ಯರ ಕುಣಿಸುವ ದೇವ ।
ಕಂಬು ಕೊಳಲು ತುತ್ತೂರಿ
ಭೊಂಭೊಂ ಭೊಂ ಭೊಂ ಎಂದು ಊದುವ ಜಾಣಾ ।
ಕುಂಭದೊಳಗೆ ಜಲತುಂಬಿ ಅನೇಕರು ।
ಸಂಭ್ರಮದಿಂದಲಿ ಸಾಲಾಗಿ ನೋಡೆ ।
ಅಂಬಕಗಳಿ ಗಿಳಿಯಂಬಕ ಪೊಳೆವಂತೆ ।
ತುಂಬಿದ್ದ ಪರಿಪೂರ್ಣ ವಿಜಯವಿಠ್ಠಲರೇಯಾ ॥೪॥

**ಆದಿ ತಾಳ**

ಘನವಂಗುಟದಲಿನ್ನು ವನಜಜಾಂಡಗಳನ್ನು ।
ತೃಣದಂತೆ ವ್ಯಾಪಿಸಿ ದಿನವಾನಡಿಸುವ ದೈವಾ ।
ಮನುಜ ವೇಷವತಾಳಿ ಜನನಿಯ ಭೀತಿಗೆ ಬಾ–।
ಯನು ಮುಚ್ಚಿ ಬಾಲನಾಗಿ ಮನಿಯೊಳಗಿಪ್ಪ ದೇವ ।
ಅಣುಘನವೆರಡು ನಿನ್ನನಬಾರದು ನಿನ್ನ ।
ಗುಣಗಳ ಸರ್ವಲಕ್ಷಣಗಳು ನೂತನವು ।
ಅನಿಶ ನಾಮಕ ನಮ್ಮ ವಿಜಯವಿಠ್ಠಲರೇಯಾ ।
ಅನುಪಮ ಚರಿತ ಚೇತನಾಚೇತನ ಪ್ರಾಣಾ ॥೫॥

**ಜತೆ**

ಅಮರಾಸುರರಿಗೆ ಸೌಖ್ಯದುಃಖಕ್ಕೆ ಕಾರಣ ।
ನಮೋ ನಮೊ ಸೋಮ ವಿಜಯವಿಠ್ಠಲ ಗೋಪ ॥೬॥

* * *

## ಸುಳಾದಿ - ೨೫

ನಿಗಮಮಣಿಯಾದ ದೇವರ ದೇವ ನಿನ್ನನ್ನು ಯಾವ ಪರಿಯಿಂದ ಅರ್ಚಿಸಲಿ? ಎಂಬ ಪ್ರಶ್ನೆಯೊಂದಿಗೆ ಈ ಸುಳಾದಿ ಪ್ರಾರಂಭವಾಗುತ್ತದೆ.

ಪೂರ್ವದಲ್ಲಿ ಜೀವೋತ್ತಮರು ಜಪ, ತಪ, ವ್ರತ, ಯಜ್ಞ, ಯಾಗಾದಿಗಳನ್ನು ಬಹುಕಾಲ ಮಾಡಿದರೂ ನಿನ್ನ ಸುಳುಹು ಕಾಣದೆ ತೊಳಲಿದರು, ಬಳಲಿದರು. ಅಂದಮೇಲೆ ಈ ಸಂಸಾರ ಬಂಧನದಲ್ಲಿ ಶಿಲುಕಿ, ಮನಕಲಕಿ ಮಿಡುಕುವ ಜೀವಾಧಮನಾದ ನಾನು ನಿನ್ನ ಮೆಚ್ಚಿಸುವದೆಂತು !

ನಿತ್ಯ ತೃಪ್ತ, ನಿರ್ವಿಕಾರ, ಸತ್ಯ ಸಂಕಲ್ಪ, ಶುದ್ಧಾತ್ಮ, ಅಂತರಾತ್ಮಕ, ಅತ್ಯಾಶ್ಚರ್ಯ ತೋರುವ ಮಹಾಪುರುಷ ನೀನು. ಸತ್ಯಲೋಕವಾಸಿಗಳೂ ಸಂತರ್ಪಣೆ ಮಾಡಿ, ನಿನ್ನನ್ನು ಮೆಚ್ಚಿಸದಿರುವಾಗ, ಮರ್ತ್ಯಲೋಕದ ತೃಣಜೀವಿಯಾದ ನಾನು ನಿನ್ನನ್ನು ಏಕಾಗ್ರ ಮನದಲ್ಲಿ ಪೂಜಿಸಬಲ್ಲೆನೆ, ಅರ್ಚಿಸಲಾರೆ, ಮೆಚ್ಚಿಸಲಾರೆ. ಹಗಲಿರುಳು ಅರ್ಚಿಸಿ ನಿನ್ನುಗುರು ಕಾಣಲಳವೇ ಸ್ವಾಮಿ. ನಿನ್ನ ಕೃಪೆಯೇ ಮುಖ್ಯವೆಂದು ನಮಿಸುವೆ.

**॥ರಾಗ-ಭೈರವಿ-ಧ್ರುವ ತಾಳ॥**

ಆವಪರಿಯಿಂದ ನಿನ್ನರ್ಚಿಸುವೆ ನಿಗಮಮಣಿ ।
ದೇವ ಮಹೋತ್ತಮ ಮಹಾ ಮಹಿಮಾ ।
ಜೀವೋತ್ತಮರು ಪೂರ್ವದಲ್ಲಿ ಜಪಿತಪವ್ರತ ।
ಪಾವಕಾಹುತಿಯಿಂದಲಾರಾಧಿಸೇ ।
ಭಾವದಲಿ ಕಾಣರು ಬಹುಕಾಲ ತೊಳಲೆ ರಾ-।
ಜೀವ ವದನನೆಂದು ಅನಂತವಾನಂತವೇ ।
ದಾವಳಿಗಳು ಕೂಗಿ ಪೇಳುತಿವಕೋ ।
ಹ್ಯಾವರಿಕೆ ಸಂಸಾರ ಡಾವಣಿಯನಡುವೆ ಕೊರ-।
ಳಾವಲಿಗೆ ಸಿಗಬಿದ್ದು ಮಿಡುಕುತಿಪ್ಪ ।
ಜೀವಾಧಮನು ನಿನ್ನ ಮೆಚ್ಚಿಸಲಾಪನೆ ವಸು-।
ದೇವರ ನಂದನ ದ್ವಿಜಾಪತಿನಂದನಾ ।
ಪೂವಿಲ್ಲನಯ್ಯಾ ಅದೃಶ ವಿಜಯ ವಿಠ್ಠಲ ।
ಸೇವಿ ಆಗುವದೆಂತೊ ಮತಿ ವಿಭ್ರಮನಿಗೆ ॥೧॥

**ಅಟ್ಟ ತಾಳ**

ಅರ್ಚಿಸುವೆ ನಿನ್ನ ರ್ಚಿಸಲಾರೆನೋ ।
ಮೆಚ್ಚಿಸುವೆನೆ ನಿನ್ನ ಮೆಚ್ಚಿಸಲಾರೆನು ।
ನಿಚ್ಚ ಸಪುತವನಧಿ ಅಚ್ಚಲದೊಳಗುಳ್ಳ।
ಅಚ್ಚ ಕುಸುಮ ಪತ್ರಾ ನಿಚ್ಚಯಾದಿಗಳೆಲ್ಲ ।
ಅರ್ಚನೆ ಮಾಡಿದರು ಮೆಚ್ಚಾಗುವದೇನೋ ।
ಹೆಚ್ಚಿನ ದೈವವೇ ಮುಚಕುಂದ ವರದಾ ।
ಅಚಿಂತ್ಯನಾಮಕನೆ ವಿಜಯವಿಠ್ಠಲ ನೀನೆ ।
ಸಚ್ಚಿದಾನಂದ್ಯೆಕನೆ ನೆಚ್ಚಿನ ಕರುಣಾಳೆ ॥೨॥

**ತ್ರಿವಿಡಿ ತಾಳ**

ನಿತ್ಯ ತೃಪ್ತನು ನೀನು ನಿರ್ವಿಕಾರನು ನೀನು ।
ಸತ್ಯಸಂಕಲ್ಪ ಶುದ್ಧಾತ್ಮ ಅಂತರಾತ್ಮಕಾ ।
ಅತ್ಯಾಶ್ಚರ್ಯವ ತೋರುವ ಮಹಾಪುರುಷಾ-।
ದಿತ್ಯ ಸನ್ನಿಭ ಕೋಟಿ ನಿರ್ಮಲಾಂಗಾ ।
ಸತ್ಯಲೋಕದ ವಾಸಿ ಸಂತರ್ಪಣೆಮಾಡಿದರು ।
ಕೃತ್ಯವೇ ನಿನಗದರಲ್ಲಿ ಇಲ್ಲಾ ।
ಮರ್ತ್ಯಲೋಕದ ನೊರಜು ಏಕಾಗ್ರಮನದಲ್ಲಿ ।
ಅತ್ಯಂತವಾಗಿ ಪೂಜಿಸಬಲ್ಲನೇ ।
ಸತ್ಯಧರ್ಮ ನಾಮ ವಿಜಯವಿಠ್ಠಲ ನಿನಗೆ ।
ಭೃತ್ಯರಂಗಸಂಗಾ ನಲಿವದೇ ತೃಪ್ತಿ ॥೩॥

**ಅಟ್ಟ ತಾಳ**

ಸದನದೊಳಗೆ ಮಾಡುಳ್ಳ ಪದಾರ್ಥ ।
ಮುದದಿಂದಲಿ ನಿನ್ನ ಸಮ್ಮುಖದಲ್ಲಿ ಇಟ್ಟು ।
ಎದುರಲಿನಿಂದ ಮನಸ್ಸಿಗೆ ತೋರಿದ ಹಾಗೆ ।
ಪದುಮನಾಭ ನಿನ್ನ ಪದಕೆ ಸಮರ್ಪಿಸ-।
ಲದರೊಳಗೊಂದು ಸ್ವಲ್ಪ ಕಡಿಮೆಯಾ-।
ಗದು ನೋಡು ನಿನ್ನ ಮಹಿಮೆಗೆ ನಮೊನಮೋ ।
ಅದೆ ಮಹಾಪ್ರಸಾದ ಭಕುತರು ಭುಂಜಿಸಿ ।
ಪದವಿಯಲ್ಲಿ ಅಧಿಕವಾದ ಸುಖವ ಬಡುವರು ।
ಸುದರಶನನಾಮಾ ವಿಜಯ ವಿಠ್ಠಲರೇಯಾ ।
ಇದರಿಂದ ನೀ ಕೃಪಾ ಉದದಿ ಸದ್ಗುಣದೇವಾ ॥೪॥

**ಆದಿ ತಾಳ**

ಮಿಗಿಲಾದ ದೈವಗಳು ಯುಗಳ ಕರಗಳನು ।
ಮುಗಿದು ದೂರದಲಿ ನೀನುಗುಳುವ ಬಾಯಿ ತೊಂಬ–।
ಲಿಗೆ ಶಿರವಾಗಿ ತಮ್ಮ ಮೊಗವನು ನೋಡುತ್ತ ನ–।
ಮಗೆ ಕೊಡುವನೋ ನಿಮಗೆ ನೀವನೆನುತಲಿ।
ಜಗ ೪ ಪೋಗುವದೇ ಮನದೆಗಿಯದೆ ಸೋತಗಾರು ।
ಯುಗ ಯುಗಾಂತರಕೆ ಮರಗಿ ಮರುಳಾಗುವರು ।
ಯುಗವರ್ತಿನಾಮ ಚನ್ನ ವಿಜಯವಿಠ್ಠಲರನ್ನ ।
ಹಗಲಿರುಳು ಅರ್ಚಿಸಿ ನಿನ್ನುಗುರು ಕಾಣಲಳಮೇ ॥೫॥

**ಜತೆ**

ಯಾತರಿಂದಲಿ ನಿನ್ನ ಒಲಿಸಿಕೊಳ್ಳಬಲ್ಲನೆ ।
ಧಾತಾರುತ್ತಮನಾಮಾ ವಿಜಯವಿಠ್ಠಲ ಪೂರ್ವಿ ॥೬॥

* * *

## ಸುಳಾದಿ – ೨೬

**"ನೀರೇ ಪಾವನ, ನೀರೇ ಜೀವನ; ನೀರೇ ಸಕಲ ಕುಟುಂಬಿಗೆ ಲೋಕಕ್ಕೆ ಆಧಾರ" ಎಂಬ ವಿಷಯದ ಮರ್ಮವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.**

**"ನೀರು ತುಲಸಿಯನ್ನು ನೈವೇದ್ಯಕ್ಕೆ ತಂದಿಟ್ಟರೆ ಮೋರೆ ತಿರುವಿಕೊಂಡು ನೋಡದೇ ಇರುವ ಮುನಿಸೇಕೆ ಸ್ವಾಮಿ, ನಿನ್ನ ತೃಪ್ತಿಬಡಿಸುವ ವಸ್ತು ಯಾವುದೆಂಬುದನ್ನಾದರೂ ಹೇಳು. ಪಾಂಚಾಲಿ ನಿನ್ನ ಕರದಲ್ಲಿ ಎರದದ್ದೇನು ?**

**ನಿತ್ಯತೃಪ್ತನಾದ ಪ್ರಭು, ನಿನಗೆ ಇದು ಅದು ಎಂಬುವ ವೈಷಮ್ಯವೆಲ್ಲಿದೆ ? ನೀನೆ ಬೇಕೆಂದು ಒಲಿದು ಅವಲೋಕಿಸಿದರೆ ತೃಣವೇ ಮೇರುವಾಗಬಲ್ಲದು. ಗೋಕುಲಾಂಬುಧಿ ಚಂದ್ರನೇ, ನಾನಿತ್ತ ಬಿಂದೋದಕ ತುಲಸಿಯನ್ನು ಸ್ವೀಕರಿಸಿ ಸಾಕುಬೇಕೆಂದು ಶರಣುಹೊಕ್ಕಿಹೆ.**

**॥ ರಾಗ–ಕಾಂಬೋದಿ–ಧ್ರುವತಾಳ ॥**

ಯಾಕೆ ಮುನಿಸು ಸರ್ವಲೋಕದ ಒಡಿಯನೆ ।
ಕಾಕುನರನ ಕೂಡ ಈ ಕಪಟವೇ ಬಾಕುಳಿಗನು ನಿನ್ನ ।
ಪಾಕಶಾಲೆಯಲ್ಲಿ ಬಿದ್ದ ಕಾಳರಾಶಿತಿಂಬ ಲೇಕಿಗನು ।
ವಾಕು ಪುಸಿಯಲ್ಲಾ ಲೇಖಿಗೆ ತಾನೇಬಲ್ಲಾ ।
ಲೋಕದೊಳಗೆ ನಾನು ಏಕನೇ ರಿಕ್ತಾ ।

ಗೋಕುಲಾಂಬುಧಿ ಚಂದ್ರ ನೀ ಕಂಡದಕ್ಕೆ ನೋಡು ।
ನಾ ಕೊಡುವೆನು ತುಲಸೀಕಬಂಧ ನೀಕರುಣದಲಿ ।
ಕೈಕೊಂಡು ಪುಷ್ಪದಲಿ ಸ್ವೀಕರಿಸಿ ವೇಗ ಸಾಕಬೇಕು ।
ಕೋಕನದನಯನ ವಿಜಯವಿಠ್ಠಲ ನೀನೆ ।
ಬೇಕೆಂದೊಲಿದು ಅವಲೋಕವೇ ತೃಣಮೇರು ॥೧॥

**ಮಟ್ಟ ತಾಳ**

ನೀರನೆ ನೈವೇದ್ಯ ತಂದಿಟ್ಟರೆ ನೀನು ।
ಮೋರೆ ತಿರುಹಿಕೊಂಡು ನೋಡದ ಬಗೆ ಏನೋ ।
ಧಾರುಣಿಯೊಳು ನಿನ್ನ ತೃಪ್ತಿಮಾಡುವ ವಸ್ತು ।
ಅರೈದುನೋಡಿದರು ಆವಲ್ಲಿ ಕಾಣೆನೋ ।
ಮೀರಿದ ಮಹಾಮಹಿಮ ವಿಜಯ ವಿಠ್ಠಲ ಎನ್ನ ।
ಗಾರ ಮಾಡುವುದಲ್ಲದೇ ಮಿಗಿಲಿಲ್ಲಾ ॥೨॥

**ತ್ರಿವಿಡಿ ತಾಳ**

ಪೇಳುವದು ನಿನ್ನ ತೃಪ್ತಿಯ ಪರಿಮಿತ ।
ಏಳಾರು ಖಂಡಗವೆ ಮತ್ತೆ ಅಧಿಕಬೇಕೇ ।
ಕೇಳುವೆ ಕಿವಿಯಲ್ಲಿ ಸುಮ್ಮನಿರದೆ ಪರರ ।
ಆಳಾಗಿ ದುಡಿದು ಅನುಗಾಲ ತಪ್ಪದೆ ।
ಕಾಲಕಾಲಕೆ ಬಿಡದೆ ಪಂಚಾವೃತವೇ ತಂದು ।
ವಾಲಯದಲ್ಲಿ ಸಮರ್ಪಿಸುವೆನು ರಾಶಿಗಳ ।
ಮೂಲೋಕದವರಸ ನೀನೆ ವಿಜಯವಿಠ್ಠಲ ಪಾಂ-।
ಚಾಲಿ ನಿನ್ನಯ ಕರದಲ್ಲಿ ಎರದದೇನೋ ॥೩॥

**ಅಟ್ಟ ತಾಳ**

ಉದಕವಾದರೇನು ಉಚಿತ ಪದಾರ್ಥವು ।
ಅಧಿಕ ಅಧಿಕವಾಗಿ ಮೇರುಪರ್ವತದಷ್ಟು ।
ಪದೋಪದಿಗೆ ನಿನ್ನ ಮುಂದೆ ಸುರವರೇನು ।
ಇದರಿಂದ ನಿನಗಿಂದು ಕಾಲಕ್ರಮಣವೆಂದು ।
ಉದರ ಪೋಷಣನಾಗಿ ದಿನವ ಕಳೆವನಲ್ಲಾ ।
ಸದ ನಿತ್ಯತೃಪ್ತನೆ ವಿಜಯ ವಿಠ್ಠಲ ನಿನಗೆ ।
ಇದು ಅದು ಎಂಬೋದು ವೈಷಮ್ಯವಿಲ್ಲದ ದೈವಾ ॥೪॥

**ಆದಿ ತಾಳ**

ನೀರೆವೇ ಪಾವನ ನೀರೆವೇ ಜೀವನ ।
ನೀರೆವೇ ಸಕಲಕುಟುಂಬಿಗೆ ಆಧಾರ ।
ನೀರೆವೆ ಕಟ್ಟಕಡೆಗೆ ಒಂದೇ ಇಪ್ಪದು ।
ನೀರೆವೇ ಇಲ್ಲದಿರೆ ನಿಲ್ಲಲಾರದುಲೋಕಾ ।
ನೀರೇರುಹ ನಾಭಾ ವಿಜಯವಿಠ್ಠಲ ನೀನೇ ।
ನೀರೊಳು ವಟಪತ್ರದಲ್ಲಿ ಮಲಗಿಪ್ಪೆ ॥೫॥

**ಜತೆ**

ನೀರೆವೇ ನೋಡಲು ನಾನಾ ಕಭೋಜನಾ ।
ಸಾರವಾಗುವದಯ್ಯಾ ವಿಜಯ ವಿಠ್ಠಲ ಪ್ರೀಯ ॥೬॥

* * *

## ಸುಳಾದಿ – ೨೭

**ಗೋವರ್ಧನಗಿರಿಯನ್ನು ಪೂವಿನೋಪಾದಿಯಲ್ಲಿ ತುದಿಬೆರಳಿನೆಂದೆತ್ತಿ, ಗೋವಳರಾವುಗಳನ್ನು ಕಾಯ್ದ ಗೋಪಾಲ, ನಿನ್ನ ಮಹಾಮಹಿಮೆಯನ್ನು ಅರಿತವನ ಚರಣಕ್ಕೆ ಶರಣೆಂದು ಶಿರಬಾಗುವೆ, ನಿನ್ನ ನೆನೆಯದವನು ನರಕನಲ್ಲಿ ಬಿದ್ದು ನರಳುವನು.**

**ನೀನು ಪಾಲಿಸುವ ಲೀಲೆಯನ್ನು ಮಾನವ, ಮುನಿ, ನಿರ್ಜರ ನಿಕರವು ಅರಿಯುವುದೂ ಕಷ್ಟ, ಅಂದಮೇಲೆ "ನಾನು ನಾನು" ಎಂದು ನುಡಿವ ಹೀನಮಾನವನಾದ ನಾನು ಕಾಣಬಲ್ಲೆನೇ, ತಿಳಿಯಬಲ್ಲೆನೇ ! ಶ್ವಾನಗೆ ಶಾವಿಗೆಯನ್ನು ಎಷ್ಟು ಉಣಿಸಿದರೇನು ಅದು ತಾನುಂಡು ಸಂತೋಷಪಡಬಲ್ಲದೇ.**

**ನಿನ್ನನ್ನು ಪ್ರಸನ್ನೀಕರಿಸಿಕೊಳ್ಳದೆ ನರಜನ್ಮ ವ್ಯರ್ಥವೆಂಬುದೇನೋ ನಿಜ. ಆದರೆ ನಿನ್ನ ಧ್ಯಾನ, ನಿನ್ನ ಕ್ರೀಡೆಯ ಬಗ್ಗೆ ತಿಳಿಯದು.**

**ದೀನ ಜನೋದ್ಧಾರ ನೀನೇ ಉದ್ಧರಿಸಿ ಕಾಪಾಡಬೇಕು.**

**॥ ರಾಗ–ಸಾರಂಗ–ಧ್ರುವ ತಾಳ ॥**

ದೇವ ನಿನ್ನ ಮಹಿಮೆಯನ್ಯಾವನರಿವನು ।
ಆವನ ಚರಣಕ್ಕೆ ಶರಣು ಎಂಬೆ ।
ಪಾವನಾಮೃತ ಸಂಜೀವನ ಈ ಶರೀರ ।
ಪಾವಿನತುಳಿದ ಪರಮ ಪುರುಷಾ ।
ಗೋವರ್ಧನಗಿರಿ ಪೂವಿನೋಪಾದಿಯಲ್ಲಿ ।
ಆ ವರುಷಗರಿಯಲು ಬೆರಳಲೆತ್ತಿ ।
ಗೋವಳರಾವುಗಳ ಪಾಲಿಸಿ ಗೀರ್ವಾಣ–।

ದೇವನ ಗರ್ವಾದ್ರಿ ಭಂಗಿಸಿದೆ ।
ಸೇವಕ ಜನರಿಗೆ ಆವಾಗ ಪಂಚಪ್ರಾಣ-।
ವಾವನೋ ನಿನ್ನ ರಹಿತ ಈ ವಸುಧೆಯೊಳು ।
ಗೋವಿಂದ ಅಚ್ಯುತ ಕೇಶವಯೆಂತೆಂದು ನೆನಿಯದವನು ।
ಕೀವು ಮೊದಲಾದ ನರಕದಲ್ಲಿ ಬಿದ್ದು ।
ಸಾವು ಪುಟ್ಟಿಲ್ಲದೇ ಮಿಡುಕವನು ।
ನಿವರ್ತಾತ್ಮ ನಾಮ ವಿಜಯ ವಿಠ್ಠಲ ನಿನ್ನ ।
ಕಾವ ಸೋಜಿಗವು ಸರ್ವರಿಗಸಾಧ್ಯ ॥೧॥

### ಮಟ್ಟ ತಾಳ

ಏನು ಪೇಳಲಿ ಇಂದು ನೀನು ಪಾಲಿಪ ಲೀಲೆ ।
ಮಾನವ ಮುನಿ ನಿರ್ಜರನಿಕರ ಬಲ್ಲದೆ ।
ನಾನು ನಾನು ಯೆಂದು ನಾನಾಕ ಜನ್ಮದಲ್ಲಿ ।
ಕೇಣಿಗೊಂಬುವ ಹೀನ ಕಾಣಲಾಪನೆ ನಿನ್ನ ।
ಶ್ವಾನಗೆ ಶಾವಿಗೆ ಏನು ಉಣಿಸಿದರೇ ।
ತಾನುಂಡು ಸಂತೋಷವನು ಬಡಬಲ್ಲದೇ ।
ದೀನ ಜನೋದ್ಧಾರ ದೀನಜನಾಧಾರ ।
ದೀನ ವತ್ಸಲ ಧರ್ಮ ವಿಜಯ ವಿಠ್ಠಲ ರೇಯಾ ।
ನೀನುಮಾಡುವ ಕರುಣ ನಾನೇನು ಬಲ್ಲೆನೊ ॥೨॥

### ತ್ರಿವಿಡಿ ತಾಳ

ನಿನ್ನ ಪ್ರಸನ್ನೀಕರಿಸಿಕೊಳ್ಳದ ನರನಜನ್ಮವೆ ಸುಡು ಸುಡು ।
ಇನ್ನ್ಯಾತಕೆ ದೇಹ ಎನ್ನಪೋಲುವ ಪಾಪಿಯನ್ನು ಅರಿಸಿದರೆ ।
ಅನಂತವಾನಂತದಲ್ಲಿ ಇಲ್ಲಾ ಕಣ್ಣಿದ್ದು ಕುರುಡನಾಗಿ ದಾ-।
ರಿನಡದ ಮೂರ್ಖನಂತೇ ಬದುಕಿದೆ ಘನ್ನಗರ್ವ ಲ್ಲಿ ।
ಖಿನ್ನ ಸಂಸಾರದ ಮಣ್ಣಿನೊಳಗೆ ಹೊರಳಿ ।
ಭಿನ್ನಜ್ಞಾನದಲಿ ಸುಖಿಸುವೆನೋ ।
ಪೊನ್ನಾಂಬರನಯ್ಯಾ ವಿಜಯ ವಿಠ್ಠಲರೇಯಾ ।
ಬಣ್ಣಿಸಲಾಪನೆನೆ ನಿನ್ನ ಪರಮಶಕ್ತಿ ॥೩॥

### ಅಟ್ಟ ತಾಳ

ವೀಂದ್ರವಾಹಣ ರಾಮಚಂದ್ರನೆ ಗೋಕುಲ-।
ಚಂದ್ರನೆ ಅಖಿಳ ಕಮಲಜಾಂಡವ ಸೂಜಿ-।

ರಂಧ್ರದೊಳಗೆ ಪೋಗಿಸಿ ತಗೆವ ಮಾಯಾ ।
ಇಂದ್ರಸುರಾದ್ಯರು ಬಲ್ಲರೇನು ಉ-।
ಪೇಂದ್ರ ನಿನ್ನಯ ತವ ಘಟಿತವು ।
ನಿಂದ್ರಲಾಪವೆ ವೇದಾಸ್ತುತಿಸಿ ಸಹಜವೆಂದು ।
ಇಂದ್ರಿಗಗೋಚರ ಚಂದ್ರಾರ್ಕಾನುತ ಸ್ತೈ-।
ಳೇಂದ್ರಿಯ ಕಾಯ್ದು ಕಪಟನಾಟಿಕ ದೇವಾ ।
ತೀಂದ್ರಿಯನಾಮ ಶ್ರೀ ವಿಜಯವಿಠ್ಠಲ ಸ-।
ರ್ವೇಂದ್ರಿ ವ್ಯಾಪಾರಕ್ಕೆ ಮೀರಿದ ದೈವವೇ ॥೪॥

**ಆದಿ ತಾಳ**

ಶ್ರೀ ಲಕುಮಿಗೆ ಪೇಳದೆ ಗಜೇಂದ್ರ ಕೇಳುವನಿತರೊಳು ।
ಆಲಸವಿಲ್ಲದ ಗಮನಾ ಆಳುಗಳು ಕೂಗಲು ನೀ ।
ಪಾಲಿಸುವ ಚತುರತನವೊ ಪೇಳಲೇನು ಬರುವಭಾರವ ।
ಬಾಲಲೋಲ ವಿನೋದನೆ ಕಾಲಕಾಲಕ್ಕೆ ನೆರೆನಂಬಿ ।
ದಾಳುಗಳ ಭಾರಕರ್ತಾ ಮೂಲೋಕದೊಳಗೆ ನಿನ್ನ ।
ಆಳುತನ ಮಾಯಾಶಕ್ತಿ ಮೇಲೆ ಗಮನ ವ್ಯಾಪಾರದಿ ।
ಸ್ಥೂಲ ಸೂಕ್ಷ್ಮವೆಲ್ಲಾ ಭೇದ ಶ್ರೀಲೋಲ ನಿನ್ನ ಮಹಿಮೆ ।
ಹೇಳಿ ಕೇಳುವರ ಕರ್ನಕ್ಕೆ ಆಲಯದ ಮಧುರ ಪಾನಾ ।
ಮೇಲಗಿರಿ ತಿಮ್ಮಾಬ್ರಹ್ಮಾ ವಿಜಯವಿಠ್ಠಲ ದೇವಾ ।
ಸೋಲದವರೇ ನಿನಗಿಲ್ಲಾ ನಿನಗಿಲ್ಲಾ ಕಾಲದೇಶ ಪಾತ್ರಪೂರ್ಣಾ ॥೫॥

**ಜತೆ**

ಆವಧ್ಯಾನವೊ ನಿನ್ನದಾವ ಕ್ರೀಡಿಯೇ ತಿಳಿಯದು ।
ಆವ ನೂತನವು ಮಹಾ ಭೋಗಾ ವಿಜಯವಿಠ್ಠಲಾ ॥೬॥

* * *

## ಶ್ರೀಕೃಷ್ಣ ಮಹಿಮಾ ನಿಂದಾಸ್ತೋತ್ರ

**ಸುಜೀವಿಗಳಿಗಿರುವ ಶ್ರೀಕೃಷ್ಣನಲ್ಲಿಯ ಭಕ್ತಿಪಾರಮ್ಯವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ. ಪರಮಾತ್ಮನನ್ನು ನಿಂದಿಸುತ್ತಲೇ ಆತನನ್ನು ಸ್ತುತಿಸಿರುವ ಸವಿ ಇದರಲ್ಲಿದೆ.**

**"ಗೊಲ್ಲನಾಗಿ ಹುಟ್ಟಿ ತೋರಿದ ನಿನ್ನ ಗುಣಗಳು ನಿನ್ನ ಕಪಟ ನಾಟಕಕ್ಕೆ ತುಂಬಾ ಸಲ್ಲುತ್ತದೆ. ಸುಮ್ಮನೇ ಸ್ತುತಿಸಿಕೊಂಡಾಡಿದರೆ ಕೇಳಿದ್ದುಕೊಡುವ ಕೈ ನಿನ್ನದಲ್ಲ. ಗುಣ ನಿನ್ನದಲ್ಲ ನಿನ್ನ ಕಪಟತನವನ್ನೆಲ್ಲ ಬೈಲಿಗಿಡುತ್ತೇನೆ, 'ಬಾಯಿಯಿಲ್ಲದವಗೆ ಎಲ್ಲಿ**

**ಹೋದರೂ ಬದುಕಿಲ್ಲ' ಎಂದು ಬಲ್ಲವರು ಹೇಳುತ್ತಾರೆ.**

**ಹಾಲು, ಬೆಣ್ಣೆ, ಮೊಸರು ಕದ್ದೆ, ಮೆದ್ದೆ, ಕಳ್ಳರ ಗುರು ನೀನು, ಗೊಲ್ಲತಿಯರನ್ನು ಕೆಣಕಿ ಸಾವಿರ ಬೈಸಿಕೊಂಡರೂ ನಿನಗೆ ನಾಚಿಕೆ ಬರಲಿಲ್ಲ. ನರನ ಬಂಡಿಯನ್ನು ನಡೆಸಿದೆ, ಭೀಷ್ಮನ ವಂಚಿಸಿದೆ, ಗುರು, ಕರ್ಣ, ಶಲ್ಯ ಮೊದಲಾದವರನ್ನು ಕಪಟದಿಂದ ಕೊಂದೆ. ಒಂದೇ ಎರಡೇ ನೀನು ಮಾಡಿದ ಕಾರ್ಯ. ಪರಿಪೂರ್ಣ ಮಹಿಮನೆನಿಸಿಕೊಂಡದ್ದೆಲ್ಲ ಬರಿದು ಎಂದು ನನಗೆ ತೋರುತ್ತಿದೆ.**

**ಮೇದಿನಿಯೊಳಗೆ ಹುಟ್ಟಿ ನಿನ್ನಿಂದ ಭಕುತಿ ಸಂಪಾದಿಸಿಕೊಂಡು ಸ್ತುತಿಸುತ್ತಿದ್ದೇನೆ. ಆದದ್ದಾಗಲಿ, ಭಕುತಿಯಿದ್ದ ಕಾರಣ ಅಪರಾಧಗಳನ್ನು ನೋಡದಲೇ ಕಾಪಾಡು ಪ್ರಧಾನ ಭಕುತಿಯಲ್ಲದಲೆ ಮತ್ತೊಂದು ಬೇಕೇ ?**

**ನಾಡದೈವದ ಗಂಡ, ನಿನಗಾಡದವರೇ ಇಲ್ಲ, ನನ್ನನ್ನು ಮನ್ನಿಸಿ ಕಾಪಾಡು.**

## ಸುಳಾದಿ – ೨೮

**॥ ರಾಗ–ವರಾಳಿ–ಧ್ರುವತಾಳ ॥**

ಗೊಲ್ಲನಾದಕ್ಕಿದೇ ಗುಣಗಳ ತೋರಿದಿಯೋ ।
ಸಲ್ಲುವದು ನಿನ್ನ ಕಪಟತನವೋ ।
ಬೆಲ್ಲಗಿಂತಧಿಕ ಮಾತುಗಳು ಕಾಣಿಸುತವೆ ।
ಪಳ್ಳಿಗಾ ಧಟಿ ಉಳಿಕಾರ ಕರುಣಾಸಿಂಧು ।
ಎಲ್ಲೆಲೊ ಎಲೋದೇವ ಒಂದಾದರು ಮಾತು ।
ಸಲ್ಲಿಸಿದ್ದು ಕಾಣೇ ಮನಸಿನಂತೇ ।
ಮೆಲ್ಲನೆ ಸ್ತುತಿಸಿ ಕೊಂಡಾಡಿದರೆ ನಿನ್ನ–।
ದಲ್ಲವೋ ಕೊಡುವಕ್ಕೆ ಕಮಲನಾಭಾ ।
ಗುಲ್ಲು ಎಬ್ಬಿಸಿ ನಾನಾವಿಕಾರತನದಲ್ಲಿ ।
ನಿಲ್ಲದೆ ನೀನು ಕದ್ದುಮೆದ್ದದ್ದೆಲ್ಲಾ ।
ಅಲ್ಲಿ ಅಲ್ಲಿಗೆ ದೂರಿ ರಚ್ಚೆಗಿಕ್ಕಾದಿರೆ ।
ಸಲ್ಲಾದೆ ಪೋಗುವೆನು ಗತಿ ಮಾರ್ಗಕ್ಕೆ ।
ಬಲ್ಲವರು ಪೇಳೊರು ಬಾಯಿಇಲ್ಲದವಂಗೆ ।
ಎಲ್ಲಿ ಪೋಗಲು ಬದುಕಿಲ್ಲವೆಂದು ।
ಸೊಲ್ಲುಮರಿಯದೆ ಏನೂ ಗತಿಗಾಣದಿರೆ ಭೂಮಿ–।
ವಲ್ಲಭ ನೀನಲ್ಲೆ ನಿನಗಂಜೆನೋ ।
ಕಲ್ಲಿನ ಮುಂದೆ ತಂದುಸುರುವಿದ ಬೋನವ ।
ಅಲ್ಲಿ ವ್ಯಾಪುತನಾಗಿ ಬಳಿದುಂಡಿಯೋ ।
ಹೊಲ್ಲೆ ಲೇಸುಗಳಿಲ್ಲ ಹೊರಗೊಳಗುಳ್ಳರೆ ।
ಎಲ್ಲೆದೆಲ್ಲೆದೆಲೆ ಕಾಣೆ ನಿನ್ನ ಲೀಲೆ ।

ಕಳ್ಳನಾಗಿ ಪೊಟ್ಟೆಪೊರದ ವಿಜಯವಿಠ್ಠಲ ಭಕ್ತವ-।
ತ್ಸಲ ನಂಬಿದೆ ಎನಗೇನೋ ॥೧॥

**ಮಟ್ಟ ತಾಳ**

ಅರಸು ನೀನಾದಡೆ ? ದೇವಕಿಯಲ್ಲಿ ಅವ-।
ತರಿಸಿ ಬಂದಾಗಲು ಆವ ರಾಜ್ಯವನಾಳಿ ।
ಅರಸುನೆನಸಿಸಿದ್ದು ಒಬ್ಬರ ವಾಕ್ಯದಲಿ ।
ಸ್ಮರಿಸಿದ್ದು ಕಾಣೆ ಆವಲ್ಲಿ ಚರಿಸಿದರೂ ।
ತರುಳತನದಲ್ಲಿ ಗೋಮಕ್ಕಳ ಕೂಡಿ ।
ನೆರೆದಾಡಿ ಲಜ್ಜೆ ಹೊರಿಸಿದರು ನಿನಗೇ ।
ಅರಿದುಕೊ ಮನದೊಳಗೆ ತರುವಾಯದಲಿ ಗೊ-।
ಲ್ಲರ ಪಾಲು ಮೊಸರು ಕದ್ದದ್ದಕ್ಕೆ ಸಾವಿರ ಬೈದರು ಕಾಣೊ ।
ಇರಳು ಹಗಲು ಚಿದಗುವ್ಯಾಪಾರದಲ್ಲಿ ।
ಸರಿ ಇಲ್ಲವೊ ನಿನಗೆ ಪೇಳಿದರೇನಹದು ।
ನರನ ಬಂಡಿಯಹೊಡಿದೆ ಭೀಷ್ಮನ ವಂಚಿಸಿದೆ ।
ಗುರು ಕರ್ನ ಶಲ್ಯ ಮೊದಲಾದವರ ।
ಮರಣವ ಗೈಸಿದೆ ಮಹಾ ಕಪಟಾಟದಲ್ಲಿ ।
ದೊರೆತನವುಳ್ಳರೆ ಧರ್ಮರಾಯನಲ್ಲಿ ।
ಪರಿಚಾರನಾಗಿ ಯಿದ್ದದ್ದು ಆವಬಗೆ ।
ಶರಣ ನೀನಾಗಿ ಶ್ರೀ ರುಕ್ಮಿಣಿ ಸಹಿತ ಭೂ-।
ಸುರನ ರಥವನ್ನು ಎಳೆದದ್ದು ಏನಯ್ಯಾ ।
ಪರಿಪೂರ್ಣ ಮಹಿ ಎನೆನಿಸಿಕೊಂಡದೆಲ್ಲ ।
ಬರಿದೆಯೆಂಬೋದಾಗಿ ತೋರುತಿದೆ ಎನಗೆ ।
ತುರುಕರುಗಳ ಕಾಯ್ದು ವಿಜಯವಿಠ್ಠಲ ಕೃಷ್ಣ ।
ಮರಣವ ಮಾಡಿದೆ ಮೊಲೆಗೊಡ ಬಂದವಳ ॥೨॥

**ತ್ರಿವಿಡಿ ತಾಳ**

ಸಾಧು ಎತ್ತಿಗೆ ಎರಡುಗೋಣಿ ಹೇರುವರೆಂಬೋ ।
ಗಾದಿಯಾಗಿದೆ ದೇವಾ ಎನ್ನ ಮಾತುರಕೆ ।
ಕ್ರೋಧದಲ್ಲಿ ಮುಳುಗಿ ಕಡೆಮಾಡೆಂದು ನಿನ್ನ ।
ಪಾದವ ನೆರೆನಂಬಿ ಇದ್ದವಗೇ ।
ನೀ ದಯಮಾಡದೆ ಮರಳೆ ಮರಳೆ ವೆಗ್ಗಳ ।
ಕ್ರೋಧವ ಪೆಚ್ಚಿಸಿಕೊಡುವದೇನೋ ಸ್ವಾಮೀ ।

ಕ್ಯಾದಿಗೆಯಲಿ ಸರ್ವ ಅವಗುಣಂಗಳು ।
ಇದ್ದರಾದರು ಅದರಲ್ಲಿ ಒಂದುತ್ತಮಾ – ।
ವಾದ ವಾಸನೆಗುಣ ಇರತಕ್ಕುದ್ದಾಗಿ ಸ–।
ರ್ವದಾ ಎಲ್ಲರಿಗೆ ಬೇಕಾದದ್ದಲ್ಲೆ ।
ಮಾಧವಾ ನಾನೊಬ್ಬ ಬಲುಪಾಪಿಯಾದರು ।
ಆದಿ ವಿಡಿದು ದತ್ತ ಸ್ವಾತಂತ್ರದಿ ।
ಮೇದಿನಿಯೊಳು ಪುಟ್ಟಿ ನಿನ್ನಿಂದ ಭಕುತಿ ಸಂ–।
ಪಾದಿಸಿಕೊಂಡು ಸ್ತುತಿಸುತ್ತಿಪ್ಪೆನೋ ।
ಆದದ್ದೆಲ್ಲಾಗಲಿ ಭಕುತಿವುಳ್ಳದಕೆ ಅಪ–।
ರಾಧಗಳ ನೋಡದಲೇ ಕಾಯಬೇಕೊ ।
ಪ್ರಧಾನ ಭಕುತಿಯಿಲ್ಲದಲೆ ಮತ್ತೊಂದು ಬೇಕಾ–।
ದದ್ದು ಏನಯ್ಯಾ ಪರಿಪೂರ್ಣನೆ ।
ಸಾಧಾರಣದವನೆಂದು ಕಂಡಲ್ಲಿ ವೇದಸ್ಮೃತಿಗಳಲ್ಲಿ ।
ಸಾರುತಿವೆ ಬೀದಿ ಬೀದಿಯೊಳು ಗೋಪಳ್ಳಿಯೊಳು ನಿನ್ನ ।
ಯಾದವ ಕುಲಕೆ ಕೀರ್ತಿಯನು ತಂದೆ ।
ಸಾಧುಜನ ಪ್ರಿಯ ವಿಜಯ ವಿಠ್ಠಲ ಕೃಷ್ಣ ।
ಆದಿಮೂರುತಿ ಎಂಬೊದಲ್ಲೆ ನೀನಾರು ॥೩॥

**ಮಟ್ಟ ತಾಳ**

ನೀನು ಮಾಡುವದೇನೊ ನಾನು ನೋತದಲ್ಲದೆ ।
ಅನಂತ ದಿವಸಕ್ಕೆ ಮಾಣಿಸಲಾಪೆಯೋ ।
ಯೋನಿಗಳಲ್ಲಿ ಮುಂದಾನು ಜನಿಸುವ ।
ಹೀನಯವನು ನೀನು ಕಾಣದೇ ಇರಲಾಪ್ಪಾ ।
ನಾನಿಗಂಜುವದೇನೊ ಸಂಕಲ್ಪಕ್ಕೆ ।
ಕಾಣಿಯ ಏನಿತ್ತು ಕಡಿಮೆನೆನಿಸಲಾಪ್ಪಾ ।
ಏನಿದ್ದ ಪರಿಮಿತ ತಾನೆ ಕ್ಲಪ್ತಿಯದೆ ।
ಹೇನಾಥ ನೀನೆಂದು ನಾನು ಕರೆವುದೇನೊ ।
ಹಾನಿವೃದ್ಧಿ ನಿನ್ನಧೀನವಾಗಿದೆ ಸತ್ಯ ।
ಮಾನವನೀಪರಿಯನು ಮಾಡುವರೆ ।
ನೀನರಸಾದಡೆ ಕಾಣಾ ಬಪ್ಪದು ಬಂಟ–।
ರನಾ ಸಾಕುವಭಾರ ಏನಂದರೇನಹುದು ।
ಶ್ರೀನಿಧಿ ಕೃಷ್ಣಾ ವಿಜಯ ವಿಠ್ಠಲ ಮೂರ್ತಿ ।
ನೀನಾಡಿದ ಕಡೆಯಿಂದ ಏನಾಡಿದರೇನು ॥೪॥

**ಆದಿ ತಾಳ**

ರವಿಗೆ ಅಂಗಯ್ಯವಡ್ಡಿ ಅವನಿಯೆಲ್ಲ ಕವಳ ।
ಕವಿವದೇನೋ ಮೂರು ಭುವನೇಶ ಭೂತಿವಂತ ।
ಯವೆ ಇಡೊ ಸ್ವಾತಂತ್ರದವನು ನಾನಲ್ಲವೋ ।
ಅವಗುಣನೆನೆಸಿ ಕೋಪವನು ಉಣಿಸುವದೇನೋ ।
ಸವಿಗಾರ ವೊಂದರೆದಿವಸವಾದರು ಲೇಶ ಭವಲೇಪವಾದರೆ ।
ಭವಣೆ ತಿಳಿಯಬಪ್ಪುದು ನವನವ ಬಗೆ ಮಹಿಮೆ ।
ಅವನಾಗಿ ಎಲ್ಲರಿಗೆ ಪವಿತುರನಾಗಿ ಅಂದವ ಮಾಡಿಕೊಳುತಲಿ ।
ಯುವತಿ ಸಮೇತಲಿದ್ದು ಅವರವರ ಕರ್ಮ ನಿಮಿ-।
ತ್ಯವಮಾಡಿ ನೀನು ಚಕ್ಕಂದವನಾಡಿ ನಗುವ ಕೇ-।
ಶವ ಮಾಯಾ ಮೊದಲೇ ।
ಸವೆಯದಗತಿ ದಾತಾ ವಿಜಯ ವಿಠ್ಠಲ ನಮ್ಮ ।
ಭವವಿಮೋಚನ ಭೇದವ ನಡಿಸುವದೇವಾ ॥೫॥

**ಜತೆ**

ನಾಡದೈವದ ಗಂಡ ವಿಜಯ ವಿಠ್ಠಲ ನಿನ-।
ಗಾಡದವರೇಯಿಲ್ಲಾ ಎನ್ನ ಮನ್ನಿಸಿ ಕಾಯೋ ॥೬॥

* * *

## ಸುಳಾದಿ – ೨೯

ನವರತ್ನ ಖಚಿತವಾದ ಮುಕುಟವನ್ನು ಧರಿಸುವ ಪರಮಾತ್ಮನು ಕೃಷ್ಣರೂಪದಿಂದ ಕಾಣಿಸಿದಾಗ ನೆತ್ತಿಯಲ್ಲಿ ಬಳ್ಳಿಗಳನ್ನು ಸುತ್ತಿ ಸಣ್ಣ ಮಕ್ಕಳೊಡನೆ ಹಾರಾಡುತ್ತಾನೆ. ಅನಂತ ವೇದಗಳಿಂದ ಸದಾ ಸ್ತುತ್ಯನಾದವನು, ಗೋಮಕ್ಕಳ ಕೈಯಿಂದ ಸುಮ್ಮನೆ ಬೈಸಿಕೊಳ್ಳುತ್ತಾನೆ. ನಿತ್ಯತೃಪ್ತ, ನಿತ್ಯಾನಂದನೆನಿಸಿಕೊಂಡವನು ಕಲ್ಲಿ ಬುತ್ತಿಗಾಗಿ ಹಂಬಲಿಸುತ್ತಾನೆ, ತಾಪಸಿಗಳ ಯಾಗದಲ್ಲಿ ಉಣ್ಣುತ್ತಾನೆ.

ಸಿರಿದೇವಿಯು ನಿತ್ಯವಿಯೋಗಿನಿಯಾದರೂ ರುಕ್ಮಿಣಿಯನ್ನು ತರುತ್ತಾನೆ. ಸ್ವರಮಣನಾಗಿ ಸುಖಿಸುವ ದೇವನು ಕರಡಿಯ ಮಗಳನ್ನು ಕೂಡುತ್ತಾನೆ. ಬ್ರಹ್ಮಾಂಡವನ್ನೇ ಹೊತ್ತು ನಿಂತವನಿಗೆ ಗಿರಿಯನೆತ್ತಿದನೆಂಬ ಹಿರಿತನವೇಕೆ ?

ಹೀಗೆ ಪರಮಾತ್ಮನು ಕೃಷ್ಣಾವತಾರದಲ್ಲಿ ಮಾಡಿದ ಲೀಲೆಯನ್ನು ಈ ಸುಳಾದಿಯಲ್ಲಿ ದಾಸರಾಯರು ವೈಶಿಷ್ಟ್ಯಪೂರ್ಣವಾಗಿ ವರ್ಣಿಸಿದ್ದಾರೆ. ಇಲ್ಲಿಯ ಮಾತುಗಳು ಧ್ವನಿಪೂರ್ಣವಾಗಿವೆ.

**॥ ರಾಗ–ಭೈರವಿ–ಝಂಪೆ ತಾಳ ॥**

ಮುತ್ತು ನವರತ್ನಮಯ ಪವಳಸಂಗತಿಯಿಂದ ।
ಕೆತ್ತಿಸಿದ ಮುಕುಟ ಶಿರದಲ್ಲಿ ಧರಿಸಿಪ್ಪದೇನೋ ।
ನೆತ್ತಿಗೆ ಗಿಡದೆಲೆ ನಾನಾಕ ಬಳ್ಳಿಗಳು ।
ಸುತ್ತಿ ಸಣ್ಣವರೊಡನೆ ಪಾರಾಡುವದೆತ್ತ ।
ಹತ್ತು ಸಾವಿರ ವೇದಸ್ತುತಿಸಿ ಬಾಯಾರಿ ಬೇ–।
ಸತ್ತು ಸುಮ್ಮನೆ ನಿನ್ನ ಮಹಿಮೆ ಅರಸುವದೇನೋ ।
ಚಿತ್ತಕ್ಕೆ ಬಂದಂತೆ ಗೋಮಕ್ಕಳ ಕೈಯ್ಯಾ ।
ಹತ್ತು ನೂರಾರುಗಳು ಬೈಸಿಕೊಂಬುವದೆತ್ತ ।
ನಿತ್ಯ ತೃಪ್ತ ಪರಮ ನಿತ್ಯಾನಂದನೆಂದು ।
ತೆತ್ತಿಸ ಕೋಟಿ ಆದಿತ್ಯರು ಪೊಗಳಲೇನು ।
ಹೊತ್ತುಹೊತ್ತಿಗೆ ಕಲ್ಲಿಬುತ್ತಿ ಉಣಲು ಸಾಲದೆ ।
ತತ್ತಪಶಿಗಳ ಯಾಗದಲ್ಲಿ ಉಂಡದ್ದೇನೋ ।
ಉತ್ತಮೋತ್ತಮ ವೈಕುಂಠವನ್ನು ಬಿಟ್ಟು ।
ಮರ್ತ್ಯಲೋಕದಲ್ಲಿ ನಿನ್ನ ಲೀಲಾವಿನೋದವೇನೋ ।
ಸತ್ಯಸಂಕಲ್ಪ ಸಿದ್ಧ ವಿಜಯವಿಠ್ಠಲ ನಿನ್ನ ।
ಚಿತ್ತಕ್ಕೆ ಬಂದದ್ದಲ್ಲದೇ ಪ್ರತಿಯುಂಟೇ ॥೧॥

**ಮಟ್ಟ ತಾಳ**

ಜನನ ಮರಣ ದೋಷವಿದೂರ ।
ಎನಿಸಿಕೊಂಡು ಮೆರೆವದೇನೋ ।
ಮನುಜಕಾಯಧರಿಸಿ ದೇವಕಿ ।
ತನುಜನಾಗಿ ಪುಟ್ಟುವದೆತ್ತ ।
ವಿನಯತಾ ಸಾಕ್ಷಿ ವಿಜಯವಿಠ್ಠಲ ।
ಅಣುಮಹತ್ತೆ ಗುಣಗಣ ನಿಲಯಾ ॥೨॥

**ರೂಪಕ ತಾಳ**

ದನುಜದಲ್ಲಣನೆಂಬೊ ಘನಪೆಸರು ನಿನಗೇನು ।
ದನುಜಗಂಜಿ ಪೋಗಿ ವನಧಿಯೊಳಡಗಿದೆ ।
ಸನಕಾದಿಗಳು ನಿನ್ನ ಬಿಡದೆ ಕಾಯುವದೇನೋ ।
ವಿನಯದಿಂದಲಿ ನೀನು ದನಗಾವಿನೆನಿಸಿದೆ ।
ವನಜಭವಾದಿಗಳು ನಿನ್ನ ದಾಗಲವೇನು ।
ಧನಂಜಯಗೆ ನೀನು ರಥವನು ನಡೆಸುವದೇನು ।

ವಿನಯೋಜನಾಮ ಸಿರಿ ವಿಜಯವಿಠ್ಠಲ ನೀನು ।
ನೆನದಾಟವಲ್ಲದೇ ಅನಿಮಿಷರು ಬಲ್ಲರೇ ॥೩॥

### ಝಂಪೆ ತಾಳ

ಸಿರಿಗೆ ನಿನಗೆ ನೋಡೆ ಎಂದಿಗೆ ವಿಯೋಗವಿಲ್ಲ ।
ಭರದಿಂದ ರುಕ್ಷಿಣಿಯ ತಂದೆ ನೆಂಬುವದೇನೋ ।
ಸರಸಿಜಜಾಂಡಗಳೆಲ್ಲ ಹೊತ್ತ ಮಹಮಹಿಮನೆ ।
ಗಿರಿಧರಿಸಿದನೆಂಬ ಕೀರ್ತಿಪಡದದೇನೋ ।
ವರ ವೇದಗಳ ಶರೆ ಬಿಡಿಸಿದ ಧೀರಗೆ ।
ತರುಣೇರ ಬಿಡಿಸಿದ್ದ ಸೋಜಿವೆ ನಿನಗೆ ।
ಸರಿಯಾದ ದೈವಂಗಳು ಇಲ್ಲದ ಕಾರಣದಿಂದ ಬೆರಗು ।
ತೋರುವಿ ಜಗಕೆ ಸತ್ವ ವಿಜಯವಿಠ್ಠಲಾ ।

### ತ್ರಿವಿಡಿ ತಾಳ

ಅನಿಲಾಸನನ ಮೇಲೆ ಯೋಗನಿದ್ರೆವುಳ್ಳವಗೆ ।
ವನದೊಳು ಕಂಡಲ್ಲಿ ಮಲಗಿ ಏಳುವದೇನೋ ।
ಮಣಿಕಾಂಚನ ವಸನ ಉಟ್ಟು ಉನ್ನತನೆ ರ–।
ತುನಗಂಬಳಿ ಚಲ್ಲಣದ ಶೃಂಗಾರವೇನೋ ।
ಚಿನುಮಯನಾಗಿ ಕಾಣಿಸದಿಪ್ಪ ದೈವವೇ ।
ಮನೆಮನೆ ಪೊಕ್ಕು ನವನೀತ ಕದುವದೇನು ।
ಸನಾತ್ಸನಾತನ ನಾಮ ಸಿರಿ ವಿಜಯವಿಠ್ಠಲರೇಯಾ ।
ಅಣುವಾಗಿ ಎಲ್ಲರೊಳು ಜುಣಗಿಯಾಡಿದನೇನೋ ॥೫॥

### ಅಟ್ಟ ತಾಳ

ಸ್ವರಮಣ ನೀನಾಗಿ ಸುಖಿಸುವ ದೈವವೇ ।
ಕರಡಿಯ ಮಗಳನು ಕೂಡಿದ ಬಗೆ ಏನೋ ।
ಸುರ ಪಾರಿಜಾತ ಮಂದಾರ ಪುಷ್ಪ ಮುಡಿದಿಪ್ಪ ।
ಧರಿಸಿದ ಮಾಲಾಗಾರರು ಹಾರುವನು ತಾನೆ ।
ಶರಧಿಯೊಳಗೆಬಂದು ಸುಧಿಯನೆರೆದವನೆ ।
ಕರದ ನೊರೆಪಾಲು ಕುಡಿದ ನೆನಸಿದನೇನೋ ।
ಸುರಚಿರ ನಾಮ ನಮ್ಮ ವಿಜಯವಿಠ್ಠಲ ನಿನ್ನ ।
ಚರಿತೆ ಒಂದೊಂದು ಉಚ್ಚರಿಸಲೆನಳವೇ ॥೬॥

**ಆದಿ ತಾಳ**

ಪರಾಪರಾವ ಪ್ರಾಕೃತ ಶರೀರವೆನಿಸುವದೇನು ।
ಚರಾರಮಣರಣನೆಂದು ತೋರಿಧರಿಗೆ ಎನಿಸುವದೇನು ।
ಹರಿ ನಿನ್ನ ಮಾಯಾಲೀಲೆ ಆವದಾವದಾವದಯ್ಯಾ ।
ಅರಿದರೆ ಚೇತನ ಅಚೇತನ ದೊಳಗೆ ಯಿಲ್ಲಾ ।
ಚರಾಚರದಲ್ಲಿ ನಿತ್ಯವರಸಿ ನೋಡಿದರೊಂದು ।
ಪರಿಗೆ ಅನಂತಪರಿ ನೂತನವೆನಿಸುತಿದೆ ।
ಸುರೇಶ್ವರನಾಮ ಸಿರಿ ವಿಜಯ ವಿಠಲ ನಿನ್ನ ।
ತರುಳತನದ ಲೀಲೆಗಳು ದನುಜರ ಕುಲಕೆ ಕಷ್ಟಾ ॥

**ಜತೆ**

ನಿಮ್ಮ ಮಹಿಮೆಗೆ ಅನಂತಾನಂತ ನಮೋ ।
ಬೊಮ್ಮಗೆ ಪರಬೊಮ್ಮ ಗಹನ ವಿಜಯವಿಠಲಾ ॥೮॥

* * *

## ಸುಳಾದಿ – ೩೦

ಇದು ನಿಂದಾ ಪರವಾದ ವ್ಯಂಗ್ಯ ಸ್ತುತಿ.

"ನಿಗಮಮಣಿಯೇ, ನನ್ನೊಡನೆ ಈ ಕುಟಿಲತನವೇಕೆ ? ನನ್ನನ್ನು ಕಾಪಾಡುವುದು ನಿನ್ನಿಂದಾಗದೇ ದೇವ ? ಭಕ್ತವತ್ಸಲನೆಂಬ ಬಿರುದು ನಿನಗೆ ಬೇಕಿಲ್ಲವೇ ? ನೀನೊಬ್ಬನೇ ಗತಿದಾಯಕನೆಂದು ಸ್ತುತಿಸಿದರೆ ಗರ್ವದಿಂದ ಮುಖಮೇಲೆತ್ತಿ ಆಕಾಶವನ್ನೇ ನೋಡುತ್ತಿರುವಿಯಲ್ಲ. ಬಾ ಇಲ್ಲಿ ಕುಳಿತುಕೊ, ನಿನ್ನ ಯೋಗ್ಯತೆ ಏನೆಂಬುದನ್ನು ಹೇಳುತ್ತೇನೆ.

ನೀನು ಆಕಳ ಕಾಯ್ದಿ, ಗೋಪಿಕಾಸ್ತ್ರೀಯರನ್ನು ತಡವಿ ಬೈಸಿಕೊಂಡೆ, ಗೋವಳರ ಮನೆಯಲ್ಲಿ ಹಾಲು, ಮೊಸರು, ಬೆಣ್ಣೆ, ಕದ್ದು ತಿಂದೆ, ಹುಡುಗತನದಿಂದ ಹಣ್ಣು ಹಂಪಲುಗಳನ್ನು ಹುಡುಕಿ ತಿಂದೆಯಲ್ಲವೇ ? ಇನ್ನೂ ಹೇಳಲೆ, ಸಾಕು.

ನಿನ್ನೆದೆಗೆ ಒದೆದವನನ್ನು ಮುದದಿಂದ ಅರ್ಚಿಸಿದಿ, ನಾನು ಹುದುಗಿ, ಹೆದರಿ ನಿಂದಿರಲು ಕಿವುಡನಂತೆ ಸುಮ್ಮನಿರುವೆ. ಇದಾವ ನಡತೆಯೋ ತಿಳಿಯದು.

ಸದಾ ನಿನ್ನ ಚರಣಗಳನ್ನೇ ನೆರೆನಂಬಿ, ನಿತ್ಯ ಹೃದಯದಲ್ಲಿ ವಂದಿಸಿ ಕೊಂಡಾಡಲು ಚದುರಿ ದೂರಹೋಗುವದು ಉಚಿತವೇ ?

ನನ್ನ ಅಂತರಂಗದಲ್ಲಿದ್ದು ನನ್ನ ಯೋಗ್ಯತೆಯಂತೆ ಪ್ರೇರಿಸಿ ನನ್ನಾಧೀನನಾಗಿರು ಸ್ವಾಮಿ. ನಿನಗೆ ಬಲವಂತನಾಗದಲೆ ಪಾಪಗಳು ಅಳಿಯವು.

**॥ ರಾಗ–ಕಲ್ಯಾಣಿ–ಝಂಪೆ ತಾಳ ॥**

ಯಾಕೆಲವೋ ನಿಗಮಮಣಿ ಈ ಕುಟಿಲತನವೇನೋ ।
ಜೊಕೆಮಾಡುವದು ನಿನ್ನಿಂದ ಆಗದೇ ।
ಸಾಕೆ ಸಾಕುವ ಬಿರಿದು ಭಕುತ ವತ್ಸಲನೆಂಬ ।
ವಾಕು ಬೇಕಾಗಿಲ್ಲವೇನೋ ಪೇಳೋ ।
ಏಕಮೇವಾನೆಂದು ಸ್ತುತಿಸಿದರೆ ನಿನ್ನಮೊಗ–।
ವಾಕಾಶ ನೋಡುತಿದೆ ಗರ್ವದಲಿ ।
ಬಾಕುಳ್ಳಿರಿಲ್ಲಿ ನಿನ್ನ ದೇವ ದೈವತನವೇನೋ–।
ಆಕಳನು ಕಾಯಿದಿ ಪೋಕತನದ–।
ಲ್ಲೇಕಿಕನಾಗಿ ಆರಿಸಿದ ಹಣ್ಣುಹಂಪಲೆ ।
ನಾಕಜನ ನೋಡುತಿರೆ ಮೆಲಲಿಲ್ಲವೇ ।
ಈ ಕಥೆಯನಾರಾದರರಿಯದವರೇ ಇಲ್ಲ ।
ನಾ ಕಠಿಣ ಉತ್ತರ ಪೇಳಲೇಕೆ ।
ಪ್ರಕಾಶಾತ್ಮ ನಾಮ ವಿಜಯ ವಿಠ್ಠಲ ಎನ್ನ ।
ವಾಕ ಬರದದ್ದು ನೀನು ಬಿಡಿಸಲಾಪೆಲೋ ದೇವಾ ॥೧॥

**ಮಟ್ಟ ತಾಳ**

ಭೂತ ಭೂತವೆಂದು ಭೀತಿಗೊಂಡರೆ ಆ–।
ಭೂತವೆ ಮಹದೊಡ್ಡ ಭೂತವಾಗಿ ತೋರಿ ।
ಆತುಮದೊಡನೆ ಸಂಗಾತ ತಿರುಗಿದಂತೇ ।
ತಾ ತೊಡಕಿಕೊಂಡು ಭೀತಿಗೊಳಿಸುವದು ।
ಭೂತನಾಮಕ ದೇವಾ ವಿಜಯ ವಿಠ್ಠಲ ನಿನಗೆ ।
ಸೋತೆವೆಂದವರಿಗೆ ಭೂತನಾಗಿ ನಿಲುವೆ ॥೨॥

**ತ್ರಿವಿಡಿ ತಾಳ**

ಎದೆ ಮೇಲೊದದು ಅಂಜದಲೆ ನುಡಿಸಿದವನ ।
ಮುದದಿಂದಲರ್ಚಿಸಿ ಒದಗಿ ಬಿನ್ನೈಸಿದೆ ।
ಹುದುಗಿ ಗದಗದ ನದರಿ ಬೆದರಿ ನಿಂದವನಿಗೆ ।
ಬಧಿರನಂತೆ ಮಂದನಾಗಿ ಕೇಳದಲಿಪ್ಪೆ ।
ಪದೋಪದಿಗೆ ನಿನ್ನ ಪದಗಳ ನೆರೆನಂಬಿ ।
ಕದಲದಲೆ ನಿತ್ಯ ಹೃದಯದೊಳು ।
ಮೃದುವಾದ ಮನದಲ್ಲಿ ವಂದಿಸಿ ಕೊಂಡಾಡೆ ।
ಚದರಿ ದೂರಾಗಿ ಪೋಗುವದು ಏನೋ ।

ಎದುರಿಲಿನಿಂದು ತಿರುಗದ ಭಕ್ತರಿಗೆಲ್ಲಾ ।
ವಹನದಿಂದಲಿ ಸೋಲಬಾರದ ಮುನ್ನ ।
ಬದಿಯಲಿ ನಿಂದು ಪರಿಪಾಲಿಸಿ ತೊಲಗದೆ ।
ಮದುವೆ ತೆತ್ತಿಗನಂತೆ ಇರಳು ಹಗಲು ।
ಪದುಮನಾಭನೆ ನಮ್ಮ ವಿಜಯವಿಠಲ ಸ-।
ರ್ವದ ನಿನ್ನ ನೆನೆದವಗೆ ವಿಧಿನಿಷೇಧವಿಲ್ಲಾ ॥೩॥

**ಅಟ್ಟ ತಾಳ**

ಬಿಟ್ಟರೆ ಸಿಗನೆಂಬೊ ದಿಟ್ಟತನವೇನೋ ।
ಇಟ್ಟಣಿಸಿ ನಿನ್ನ ಅಟ್ಟುಳಿಂದಲಿ ಬೆನ್ನಟ್ಟಿ ಬಿಡದೆ ಬಂದು ।
ಉಟ್ಟ ಪೀತಾಂಬರ ದಟ್ಟಿಯ ಶರಗನು ।
ದಟ್ಟಡಿಯಿಂದಲಿ ನಿನ್ನ ಮುಟ್ಟಿ ಪಿಡಿದು ಒಳ-।
ಗಿಟ್ಟುಕೊಂಡು ಜಗಜಟ್ಟಿ ಚಿತ್ತದಲ್ಲಿ ಕಟ್ಟಿಹಾಕುವವೆನು ।
ಅಟ್ಟಹಾಸದಲ್ಲಿ ರಟ್ಟುಮಾಡಿಬಿಡುವೆ ।
ಇಷ್ಟದೈವವೆ ವಿಜಯ ವಿಠಲರೇಯನೇ ।
ಪುಟ್ಟಿದಂತೆ ಪಾಪ ನಷ್ಟವಮಾಡೋ ॥೪॥

**ಆದಿ ತಾಳ**

ತಿಲವನ್ನು ಕರತಳದಲ್ಲಿ ಇಟ್ಟುಕೊಳ್ಳಲು ।
ಸುಲಭತನದಿಂದಲಿ ತೈಲ ಫಲಿಸೋದೆ ಎಲೋ ದೇವಾ ।
ಸಲಿಗೆಯಿಂದಲಿ ನಿನಗೆ ಪಲ್ಲುದೆರೆದು ಬೇಡಿದರೆ ।
ಒಲಿದು ಕೊಡುವದು ಗುಣಾವಳಿಗಳು ನಿನ್ನವಲ್ಲ ।
ಒಳಗೆ ನಿಲಿಸಿಕೊಂಡು ಸಲೆಭಕುತಿಲಿಂದ ।
ಕೆಲಸಕ್ಕೆ ಪೋಗಗೊಡದಲೆ ಸಿಗಿಸಿಕೊಂಡು ।
ಚಲುವ ಕ್ಷೇತ್ರಜ್ಞ ವಿಜಯವಿಠ್ಠಲ ನಿನಗೆ ।
ಬಲವಂತ ನಾಗದಲೆ ಅಳಿಯವು ಪಾಪಾ ॥೫॥

**ಜತೆ**

ನಾಮುಂದೆ ನೀ ಹಿಂದೆ ಗುರುವಿಕೆ ನಿನಗೇಕೋ ।
ಸಾಮಗ ವಿಜಯ ವಿಠಲನೆ ಎನ್ನಧೀನಾ ॥೬॥

* * *

## ಸುಳಾದಿ - ೩೧

ಶ್ರೀಕೃಷ್ಣನ ನಿಂದಾಪರ ಸ್ತುತಿಯಿದು. ದಾಸರು ಶ್ರೀಕೃಷ್ಣನನ್ನು ನಿಂದಿಸುತ್ತಲೇ ಆತನನ್ನು ಸ್ತುತಿಸಿದ ಬಗೆ ಬಹು ಮಾರ್ಮಿಕವಾಗಿ ಈ ಸುಳಾದಿಯಲ್ಲಿ ಮೂಡಿಬಂದಿದೆ.

"ಎಂಜಲನುಂಡು, ತಲೆಗೆ ಗುಲಗುಂಜಿಯ ದಂಡೆಯನ್ನು ಧರಿಸಿ, ಗಂಜಿ ಕುಡಿದದ್ದನ್ನು ಮರೆತೆಯಾ ಕೃಷ್ಣಾ ? ಬಾಲಕನಿದ್ದಾಗ ಹಾಲು ಮೊಸರು ಕದ್ದು, ಮೆದ್ದು ಒರಳಿಗೆ ಕಟ್ಟಿಸಿಕೊಂಡೆ. ಗೊಲ್ಲ ಬಾಲೆಯರಿಂದ ಸಲ್ಲದವನೆಂದು ಬೈಸಿಕೊಂಡದ್ದು ನೆನಪಿದೆಯೇ ? ಅಲ್ಲದೆ ರಕ್ಕಸಗಂಜಿ ಮುಚುಕುಂದಗೆ ಮೊರೆಹೋದೆ. ರಕ್ಕಸಗಂಜಿ ಸಾಗರವ ಸೇರಿದೆ. ಮೋರೆ ಕೆಡಸಿಕೊಂಡೆ, ನಿನ್ನ ಠಕ್ಕತನವನ್ನೆಲ್ಲ ಬೈಲಿಗೆಳೆಯುವೆ. ನೀನಂಜಿಸಿದರೆ ನಾನು ಅಂಜಲಾರೆ ಕಂಜನಾಭ. ನನ್ನ ಎಡಬಲದಿ ನಿನ್ನ ನಾಮ ಪಾಲಿಸುತ್ತಿರಲು ನಾನೇಕೆ ಚಲಿಸಲಿ ಹೇಳು ? ನಿನ್ನ ಪಾದಕ್ಕೆ ಬಿದ್ದೆ, ಗೆದ್ದೆ.

### ರಾಗ-ಸಾರಂಗ-ಧ್ರುವ ತಾಳ

ಅಂಜಿಸುವದೇನೋ ಪರಂಜಳವಾಗಿರದೇ ।
ಕೆಂಜಡಿಯ ನೊಡಿಯಾ ಯಾದವರೊಡಿಯಾ ।
ಎಂಜಲ ಉಂಡು ಗುಲಗಂಜಿಯ ದಂಡಿಯಧರಿಸಿ ।
ಗಂಜಿಗೂಳನ್ನು ಕುಡಿದದ್ದು ಮರದಿಯಾ ।
ಭುಂಜಿಸಿ ಪರವುಮಾಡಿ ತಂದ ವಾಗರಕೆ ನೀ-।
ಅಂಜದೆ ಏಳುದಿವಸ ಗಿರಿಯಪೊತ್ತೇ ।
ಕಿಂ ಚನ ನಿನ್ನದು ? ನಿನ ಗಂಜಲ್ಯಾಕೇ ಧ-।
ನಂಜಯ ನಾಮಾ ಹರಿ ವಿಜಯ ವಿಠ್ಠಲಗೊಲ್ಲ ॥೧॥

### ಮಟ್ಟ ತಾಳ

ಬಾಲಕತನದಲ್ಲಿ ಪಾಲು ಮೊಸರು ಕದ್ದು ।
ಕೋಲು ಬಡಿಗೆಯಿಂದ ಕೊಲಿಯ ಕೊಲ್ಲಿಸಿಕೊಂಡೆ ।
ಕಾಲನುವರಳಿಗೇ ಬೀಳು ಕಟ್ಟಿಸಿಕೊಂಡು ।
ಏಳಲವಾದಿಯೊ ಗೊಲ್ಲ ಬಾಲೇರಿಗೆಯಲ್ಲ ।
ಮೂಲೋಕವು ಬಿಡದೆ ಆಳುವದೊರೆತನವು ।
ಏಳಲವಾಯಿತೊ ವಿಜಯವಿಠ್ಠಲ ಶ್ರೇಷ್ಠಾ ॥೨॥

### ರೂಪಕ ತಾಳ

ರಕ್ಕಸಗಂಜಿ ಮುಚುಕುಂದನ ಮೊರೆ ಬಿದ್ದೆ ।
ರಕ್ಕಸ ಗಂಜಿ ಸಾಗರದೊಳು ಪುರಬಿಗಿದೆ ।

ರಕ್ಕಸಗಾಗಿ ವಿಕಾರ ಮೊಗನಾದಿ ।
ರಕ್ಕಸಗಾಗಿ ಕೋಡಗ ಬಲನೆರಹಿದೆ ।
ರಕ್ಕಸಾಂತಕ ನಿನ್ನ ಮಕ್ಕಮಕ್ಕಲಾಟಕೆ ದೇ ।
ಮಕ್ಕಳ ಮನಸ್ಸಿಗೆ ಸಿಕ್ಕಿದೆಂತೆಂಬೋರು ।
ಮಕ್ಕಳ ಬೇಡಿ ನೀ ಮುಕ್ಕಣ್ಣ ನೊಲಿಸಿದೆ ।
ಠಕ್ಕು ಮಾಯಾತನ ಕಕ್ಕುಜ ಗೊಂಬೆನೊ ।
ಚಿಕ್ಕವನ ಹಿರಿಯನ ಮಾಡಿ ಪುಣ್ಯವ ।
ದಕ್ಕಿಸಿಕೊಂಡ ಶ್ರೀ ವಿಜಯ ವಿಠ್ಠಲ ಪುಂಡ ॥೩॥

**ಝಂಪೆ ತಾಳ**

ಅಳಕುವವಗೆ ಕಾವಳದೊಳುಹುಲ್ಲ ಸರವೇ ।
ತುಳಿದರೆ ಪೊಳೆವೊಂದು ಫಣಿಓಲು ।
ಅಳುಕದವಗೆ ಜಲಧಿ ಮೊಳಕಾಲು ಉದಕವೋ ।
ಅಳುಕುವದೇನು ನಿನ್ನಯ ಭೀತಿಗೆ ।
ಇಳಿಯ ಮುಣಗಿದವಗೆ ಥಳಿಯ ಪರವೇನು ಸಿ ।
ಡಲಿಗಂಜದವನು ಹೆಗ್ಗೋಳಿ ಗಂಜುವನೆ ।
ಬಲವಾಗಿ ಎನ್ನೆಡಬಲದಲಿ ನಿನ್ನ ನಾಮಗಳು ।
ಪಾಲಿಸುತಿರೆ ಚಲಿಸಲ್ಯಾತಕೋ ದೇವಾ ।
ಕುಲಿಶ ಪಾಪದಗಿರಿಗೆ ವಿಜಯ ವಿಠ್ಠಲ ಕೃಷ್ಣ ।
ಕಲಕಾಲದಂತೆ ನೋಡದ ಹೊಸ ಪರಿ ಏನೋ ॥೪॥

**ತ್ರಿವಿಡಿ ತಾಳ**

ಬಾಗಿಲ ಕಾಯಿಸಿದ ಹೊಗಾಕೊಡದೆ ಬಲಿ ।
ಯೋಗಿ ನಾರದನು ಸ್ತ್ರೀಯರ ಬೇಡಿದ ।
ಭಾಗೀರಥಿ ಸುತನು ನಿನ್ನ ಪಂಥವ ಕಳೆದ ।
ಜೋಗಿಯಾಗಿ ಪಾರ್ಥ ಅನುಜೆಯವೈದ ।
ಭೋಗಿಶನುಬಿಡದೆ ಹೆಣಗಾಡಿದನಯ್ಯಾ ।
ನಾಗರಾಜನು ನಿನ್ನ ಕೂಗಿ ಕಂಗೆಡಿಸಿದ ।
ಹೀಗಿದ್ದವರ ಬೆರಳ ಬಾಗಿಸಿದಿ ಏನೋ ನೀ-।
ಯೋಗಿಯಾಗಿ ಎನ್ನನೀಗಂಜಿಸುವದೆ-ನೋ ।
ಘುಗಾರಗೊಲದ ಭಂಡುಗಾರ ಗೋವಾ ಶ್ರುತಿ ।
ಸಾಗರ ನಾಮ ವಿಜಯವಿಠ್ಠಲರೇಯಾ ॥೫॥

**ಅಟ್ಟ ತಾಳ**

ಸೂತಸತಿಯ ಉದರದಲ್ಲಿ ಬಂದವನಿಗೆ ।
ಖ್ಯಾತಿಯಾತಕೊ ಇಷ್ಟು ಭೂತಳದೊಳಗೆ ।
ದೂತನಾಗಿ ಪೋಗಿ ಹಸ್ತಿನಾಪುರದಲ್ಲಿ ।
ಭೂತಿಗಳಿಂದ ಬಿಗಿಸಿಕೊಂಡು ನಿಂದು ।
ಯಾತಕ ನಿನಗಿಷ್ಟು ಬಿಂಕದ ಮಾತು ।
ಭೀತಿಗೊಂಬವರಿಗೆ ತೃಣಮೇರುವಾದಂತೆ ।
ಕೋತಿ ಕೊರವಂಗೆ ಸಿಕ್ಕಿದಂತೆ ಎನ್ನ ।
ಈ ತೆರದಲಿ ಇನ್ನು ಕಾತುರೆಬ್ಬಿಸವರೇ ।
ಜಾತಿಯಿಲ್ಲದ ನಿತ್ಯ ಜಾತರಹಿತ ಮಹ–।
ಭೂತ ವಿಜಯ ವಿಠ್ಠಲ ನೀತವೇ ನಿನಗೆ ॥೬॥

**ಆದಿ ತಾಳ**

ಒದ್ದವನೆ ಒದ್ದೇ ಪೋದಾ ಮೆದ್ದವನೆ ಮೆದ್ದೇ ಪೋದಾ ।
ಕದ್ದವನೆ ಕದ್ದೇ ಪೋದಾ, ಗೆದ್ದವನು ಗೆದ್ದೇ ಪೋದಾ ।
ಇದ್ದವನೆ ಇದ್ದೇ ಪೋದಾ, ಎದ್ದವನು ಎದ್ದೇ ಪೋದಾ ।
ಗದ್ದುಗೆ ನೀಡಿಸಿದವ ಹೊದ್ದಿದ ನಿನ್ನವರೊಳು ।
ಸಿದ್ಧಿದ ವಿಜಯ ವಿಠ್ಠಲ ಬಿದ್ದೆನೋ ನಿನ್ನ ಪಾದಕ್ಕೆ ।
ಪದ್ದು ಎನ್ನ ಕೂಡ ನಿಷಿದ್ಧ ಎಂದೆಂದಿಗೂ ಬೇಡ ॥೭॥

**ಜತೆ**

ಕಂಡವರಿಗೆ ಮುನ್ನೆ ಪ್ರಾಯಶ್ಚಿತ್ತವೇ ಇಲ್ಲ ।
ಕುಂಡಲಿ ಶಯನ ಶ್ರೀ ವಿಜಯ ವಿಠ್ಠಲ ನಿನಗಂಜೆನೋ ॥೮॥

* * *

## ಸುಳಾದಿ – ೩೨

"ನಿನ್ನನ್ನು ತರತರ ನಡುಗಿಸಿ ಕರತಂದು ನಿಲ್ಲಿಸಿ, ವರ ಪಡೆಯುವವರೆಗೆ ನಾನು ಬಿಡುವುದಿಲ್ಲ ಮೃಡ ವಂದ್ಯ. ನೀನು ಕರುಣಿಯೆಂದು ತಿಳಿದು ಸಿರಸಾನಮಿಸಿ ಬೇಡುತ್ತಿರಲು, ನನ್ನನ್ನು ಲಕ್ಷ ಮಾಡದೇ ಹೋಗುವುದೇ ?

ಭಂಡು ದೇವರಿಗೆ ಲೆಂಡುಪತ್ರಿ ಎಂಬ ನುಡಿಯಂತೆ ಭಂಡು ದೇವನೇ ನಿನಗೆ ಗೋಕುಲದ ಲೆಂಡ ಗೊಲ್ಲತಿಯರೇ ಮಟ್ಟು.

ದೂರಿದ ಭಕ್ತರ ಪಾಪವನ್ನು ದೂರ ಮಾಡುವ ಮಾರನಯ್ಯನೇ ದೂರನೋಡದೇ ನನ್ನ ದುರಿತಗಳನ್ನು ತರಿದು ಕಾಪಾಡು.

**॥ ರಾಗ-ಕೇದಾರಗೌಳ-ಝಂಪೆತಾಳ ॥**

ತರ ತರ ತರ ತರ ತರ ತರ ತರನೆ ನಿನ್ನ ನಡುಗಿಸಿ ।
ಕರ ಕರ ಕರ ಕರ ಕರ ಕರದು ನಿನ್ನ ನಲಿಸಿ ।
ಸರ ಸರ ಸರ ಸರ ಸರ ಸರ ಸರನೆ ನಿನ್ನ ಒಲಿಸಿ ।
ವರ ವರ ವರ ವರ ವರ ವರ ವರಗಳನು ಪಡಿಯದಲೆ ಬಿಡುವೆನೆ ।
ಸಿರಿಯೊಡಿಯ ಸುರರೊಡಿಯಾ ಎನ್ನೊಡಿಯ ಜಗದೊಡಿಯಾ ।
ಮರಿಯದಲೆ ನೋಡು ತಡಿಯ-।
ದಿರು ಮುಂದೆ ಎನಗೊಂದೆ ಪೇಳು ।-
ತ್ತರವ ಇಂದೆ ಇರುಕೊಡದೆ ಬಿಡುವೆನೆ ಜಗದ ತಂದೆ ।
ಪರ ಮುಖ ನೀನಾಗೆ ನಿನ್ನಯ ಚರಣದಡಿಗಳಲಿ ।
ಸಿರಸಾ ಪವಡವನು ಕೊಡುವ ಜೀಯಾ ।
ಕರುಣಿ ನೀನೆಂದು ಮೊರೆಹೊಕ್ಕು ಬೇಡಿದರೆನ್ನ ।
ಸರಕು ಮಾಡದಲೆ ತೊಲಗುವದು ಏನೋ ।
ಪರಿಪೂರ್ಣ ಗುಣ ನಿಧಿ ವಿಜಯ ವಿಠ್ಠಲ ನಿನ್ನ ।
ಚರಣದುಂಗುಟದ ಮಂದಿರದ ನೆಳಲೆ ಬೇಕು ॥೧॥

**ಮಟ್ಟ ತಾಳ**

ಭಂಡುದೇವರಿಗೆ ಲೆಂಡ ಪ್ರತಿ ಎಂಬೋದು ।
ಮಂಡಲದೊಳಗಿದು ಸಹಜ ನೀತಿ ।
ಭಂಡುದೇವನೆ ನೀನು ನಂದಗೋಕುಲದಲ್ಲಿ ।
ಲೆಂಡ ಗೊಲ್ಲತಿಯರು ಅವರೆ ನಿನಗೆ ಮಟ್ಟು
ತೊಂಡನಾಗಿ ನಿನ್ನ ಕೊಂಡಾಡಲು ಶಿ-।
ಖಂಡಿಯಾಗಿ ಯಿದ್ದಿ ನಿನಗೆ ಅವರೆ ಮಟ್ಟು ।
ಕುಂಡ ಗೋಳಕರ ಮಂಡೆ ಮೇಲೆ ಇದ್ದು ।
ಭಂಡುಗಾರ ಗೊಲ್ಲ ವಿಜಯ ವಿಠ್ಠಲಾ ॥೨॥

**ತ್ರಿವಿಡಿ ತಾಳ**

ಕದ್ದಾ ಶುದ್ಧಿಗೆ ದಧಿ ಪಾಲಾಗೆ ವಶನಾಗೆ ।
ಬದ್ಧಾದಿಂದಲಿ ಬಂದು ಅವನು ಕೇಳಿದ ಮಾತು ।
ಸಿದ್ಧಾಂತವೆಲ್ಲಾ ವಳಿಕೆ ಪೇಳುವರಾರು ।
ಈ ಧರೆಯೊಳಗೆ ಧರ್ಮಕೆ ಕಾಲಾ ನಡೆಯಂದೊ ।
ನಿರ್ಧಾರವಾಗಿದೆ ಎನಗೆ ನೋಡಲಿ ಇಂದು ।
ಅಬ್ಧಿಶಯನ ನಿನ್ನ ವರ್ಮವರ್ಮಗಳಾ ।

ಇದ್ದಾವು ಅಲ್ಲಲ್ಲಿ ದೂರಾದಲ್ಲದೆ ನೀನ-।
ಹೊದ್ದಿ ಇಪ್ಪದು ಸಟಿ ವಿಜಯ ವಿಠ್ಠಲಸಿರಿ-।
ಮುದ್ದು ಮುಖದ ಚಲುವ ಸಿದ್ಧ ಪ್ರಸಿದ್ಧ ॥೩॥

**ಅಟ್ಟ ತಾಳ**

ಪಾವಮಾನಿಯಂತೆ ಹರಿವಾಣಾ ವೈ ಬೇಕು ।
ಗೋವಳರಂತೆ ಎಂಜಲು ಕಲನಲಿಬೇಕು ।
ರಾವಣಾನುಜನಂತೆ ನಿನ್ನ ಹೊತ್ತು ತಂದಿಡಬೇಕು ।
ದೇವ ನದಿ ಜನಂತೆ ಕದನ ಮಾಡಲಿಬೇಕು ।
ದೇವತಾ ಗಣದಂತೆ ಭಾರ ಹೊರಿಸಬೇಕು ।
ಈ ವಿಚಾರ ವಿರಲು ಆವಲ್ಲಿ ಪೋಗಾದೆ ।
ಕಾವುತ್ತ ಲಿತ್ತವರಾವಾದರು ಬೇಡೆ ।
ದೇವೇಶ ವಿಜಯ ವಿಠ್ಠಲ ನಿನ್ನ ಮಹಿಮೆಯ ।
ಆವಾವ ಬಲ್ಲನು ನಮೊ ನಮೋ ಎಂಬೆ ।
ಹಾವಿಗೆ ತಡೆ ಬೇರು ಇದ್ದಂತೆ ಇರಬೇಕು ॥೪॥

**ಆದಿ ತಾಳ**

ದೂರಿದ ಭಕ್ತರ ದೂರ ಮಾಡುವಿ ಪಾಪ-।
ದೂರ ಬೇಕು ನಿನ್ನ ದೂರಬೇಕು ನಿನ್ನ ।
ದೂರದಲೆ ಎನ್ನ ದೂರು ಮುಟ್ಟುವದಿಲ್ಲ ।
ದೂರಿದನೆ ಸಿರಿ ವಿಜಯ ವಿಠ್ಠಲ ವಿ-।
ದುರ ವಂದಿತ ಪಾದ ದೂರದೋಷ ಬಲು-।
ದೂರ ನೋಡದೆ ಎನ್ನ ದುರಿತ ಬಿಡಿಸೋ ॥೫॥

**ಜತೆ**

ಹರನ ಶಿರ ಮುಕುಟ ನಿನ್ನ ಪಾದಪೀಠವೊ ರನ್ನ ।
ಪೊರೆವದು ದಯದಿಂದ ವಿಜಯ ವಿಠ್ಠಲ ಎನ್ನ ॥೬॥

## ೨. ಕರುಣಾಕರ ಶ್ರೀಹರಿಯ ಸ್ತೋತ್ರ

**ಜೀವಾಂತರ್ಯಾಮಿಯಾದ ಕರುಣಾಳುವಾದ ಶ್ರೀಹರಿಯು ಜಗಜ್ಜನ್ಮಾದಿಕಾರಣನು, ಸೃಷ್ಟಿಯೊಳಗೆ ಸೃಜಿಸಿದ ಬಹು ಜೀವರ ಅಂತರ್ಯಾಮಿಯಾದ, ನಾನಾರೂಪಗಳನ್ನು ಧರಿಸಿದ ಶ್ರೀಹರಿಯ ರೂಪಗಳಿಗೆ ಭೇದವಿಲ್ಲವಾದರೂ, ತತ್ತದಧಿಷ್ಠಾನಭೂತರಾದ ಜೀವರ ಸ್ವಭಾವ ತಾರತಮ್ಯಾನು ಗುಣವಾಗಿ**

ಮನದಾಸೆಯನ್ನು ಒದಗಿಸುತ್ತಾನೆ. ಹೀಗೆ ಸರ್ವತ್ರವ್ಯಾಪ್ತನಾದ ಶ್ರೀಹರಿಯು ಸದಾನಂದೈಕದೇಹನು. ಸ್ವರೂಪೇಂದ್ರಿಯಾದಿಗಳಲ್ಲಿದ್ದು ಪ್ರೇರಿಸಿ, ಸರ್ವಜೀವರಲ್ಲಿ ಸಕಲ ವ್ಯಾಪಾರವನ್ನು ಮಾಡಿಸುತ್ತಾನೆ. ಶರಣ ಜನರ ಕಲ್ಪವೃಕ್ಷನಿವನು. ಭಕ್ತರು ಬೇಡಿದ ಇಷ್ಟಾರ್ಥಗಳನ್ನು ಈಡೇರಿಸುವ ಕರುಣೆಯು. ಪರಮ ಪವಿತ್ರನು. ಸಕಲ ಜೀವಾಂತರ್ಯಾಮಿಯಾಗಿ ಸಖನಂತೆ ಎಡೆಬಿಡದೆ ಅತಿಸ್ನೇಹದಿಂದ ಸಲಹುವ ಕರುಣಾಳು. ತನ್ನವರ ಜ್ಞಾನಕ್ಕೆ ಗೋಚರನಾಗಿ ಬಂದೊದಗುತ್ತಾನೆ.

ಶ್ರೀಹರಿಯು ಜೀವ ಜಡದಿಂದ ಭಿನ್ನನು, ಸರ್ವಸ್ವಾಮಿ ಬ್ರಹ್ಮಾಂಡಾಂತರ್ಯಾಮಿ. ಮೊರೆಯಿಡುವ ಪರಮ ಭಕ್ತರ ಕರೆಗೆ ಓಗೊಟ್ಟು ಕಾರುಣ್ಯದಿಂದ ವ್ಯಕ್ತನಾಗುತ್ತಾನೆ.

ಕರುಣಾಕರನಾದ ಶ್ರೀಹರಿಯ ಸ್ತೋತ್ರ ವೈವಿಧ್ಯತೆಯನ್ನು ಈ ಭಾಗದ ಸುಳಾದಿಗಳಲ್ಲಿ ಕಾಣುತ್ತೇವೆ.

* * *

## ಸುಳಾದಿ – ೩೩

ಶ್ರೀಯರಸನೆ ನಿನ್ನ ಸೊಬಗಿನ ನಾಮದ ಅಮೃತವನ್ನು ಕುಡಿದರೆ ಅಯೋಗ್ಯನೂ, ಅಪ್ರಬುದ್ಧನು ಆದ ನನಗೆ ಅದು ದಕ್ಕುವದೇ? ನಾಯಿಗೆ ಶಾವಿಗೆ ಪರಮಾನ್ನದ ತುತ್ತನ್ನು ಬಾಯಿಯೊಳಗಿಟ್ಟರೆ ಅದು ತಿಂದು ಜೀವಿಸುವುದೇ?

ಉದ್ಧಾರಮಾಡುವ ಶುದ್ಧಾತ್ಮನು ನೀನಿರುವಾಗ ಕದ್ದು ವ್ಯಾಕುಲದಿಂದ ನಾನೇಕೆ ಅಳಲಿ ಪದ್ಮನಾಭನೇ ? ನಿನ್ನ ಕಾರುಣ್ಯವನ್ನು ಪಡೆದ ಮೇಲೆ ಎಲ್ಲವು ಸುಲಭ. ಮುದ್ದುಮೋಹನರಂಗ, ಕರುಣಾಬ್ಧಿಯೇ ನೀನೊಲಿದು ಯಾತರಾಲೋಚನೆ. ಒಳಗೆ ಪ್ರೇರಕನಾಗಿ ಕ್ಷಣ ಬಿಡದೆ ಒಲುಮೆಯಿಂದ ತಿಳುಹಿಸಿಕೊಡುವ ನಿನ್ನ ಪಾದ ಕಮಲಕ್ಕೆ ನಮೋ ನಮಃ

ನೀನು ದಾತನಾಗಿರಲು ನಾನೇಕೆ ಯೋಚಿಸುವೆನು. ಮನವು ಭೀತಿಗೊಳ್ಳದಂತೆ ಮಾತುಮಾತಿಗೆ ಸಂಪ್ರೀತಿಬಡಿಸುವ ಮಾತಾಪಿತನು ನೀನೆ. ಮುಗ್ಗಿದಲ್ಲಿಗೆ ಬಂದು ಒದಗುವ ಕರುಣಾಳು ನೀನು ಕುಗ್ಗಗೊಡದೇ ನನ್ನನ್ನು ಪೊರೆವ ಭಾರ ನಿನ್ನದು.

॥ ರಾಗ–ಭೈರವಿ–ಧ್ರುವ ತಾಳ ॥

ದೀನ ಮಾನವನಿಗೆ ನೀನೇನು ಕರುಣಿಸಿದರೂ ।
ತಾನಿಲ್ಲಾದೆ ಪೋಗಿ ಹೀನವಾಗುವದೂ ।
ಅನಂತ ದಿನಕೆ ನಿದಾನ ನಿಕ್ಷೇಪ ಸಂಪಾ–।
ದನೆ ಸವಿಯದಂತೆ ಆನಂದವಾಗಿರಲು ।
ಮೇಣು ಪೋಗಾಡಿದೇನು ದೀನಬಂಧೂ ।
ಜೇನು ಕಾನನದೊಳು ತಾನಿಟ್ಟು ಉಣದಂತೆ ।

ನಾನುಂಡು ಸುಖಿಸದೆ ನಾನಿದ್ದೆ ಬರಿದೇ ।
ದಾನವಾಂತಕ ಎನ್ನ ಪ್ರಾಣ ವಿಜಯ ವಿಠ್ಠಲ ।
ಧೇನು ನೀನಿರಲು ಯೋಚನೆ ಎನಗಿಷ್ಟು ಮಾಡಲ್ಲಾ ॥೧॥

**ಮಟ್ಟ ತಾಳ**

ನಾಯಿಗೆ ಶಾವಿಗೆ ಪರಮಾನ್ನದ ತುತ್ತು ।
ಬಾಯೊಳಗಿಡಲದು ಉಂಡು ಜೀವಿಸುವದೇ ।
ಶ್ರೀಯರಸೆ ನಿನ್ನೆ ಸೊಬಗಿನ ನಾಮದ ।
ಪೀಯೂಷವ ಕುಡಿಯೆ ದಕ್ಕುವದೇ ಎನಗೆ ।
ಅಯೋಗ್ಯನು ನಾನು ಅಪ್ರ ಬುದ್ಧನು ನಾನು ।
ಕಾಯದೊಳಗೆ ಭರಿತಾ ವಿಷ ಪುಂಜರ ನಾನು ।
ಪಯೋ ನಿಧಿ ಶಯನ ವಿಜಯ ವಿಠ್ಠಲಯನ್ನ ।
ಕಾಯುವ ಬಿರಿದುಳ್ಳ ಕಪಟನಾಟಕ ರಂಗಾ ॥೨॥

**ತ್ರಿವಿಡಿ ತಾಳ**

ಉದ್ಧಾರ ಮಾಡುವಲ್ಲಿ ಜ್ಞಾನಿನೀನಿರಲಿಕ್ಕೆ ।
ಕುದ್ದುವ್ಯಾಕುಲದಿಂದ ನಾನಳಲುವದ್ಯಾಕೆ
ಇದ್ದವಿಲ್ಲದವೆಲ್ಲಾ ನೀನೆಪೇಳಿಸಿ ಕೃತಿ-।
ಸಿದ್ಧವೆಂದೆನಿಸಿದೆ ಸಕಲರಿಂದಾ ।
ಪದ್ಮನಾಭನೆ ನಿನ್ನ ಕಾರುಣ್ಯವನುಪಡೆದು ।
ಇದ್ದವನಿಗೆ ಎಲ್ಲ ಸುಲಭಕಾಣೋ ।
ಬಿದ್ದುಹೋಹೆ ಪತ್ರದಮೇಲೆ ಬರೆದರೆ ।
ಪೊದ್ದಿರದೆ ಪೋಗೋವು ತನಗಲ್ಲದೇ ।
ಮುದ್ದುಮೋಹನ ರಂಗ ವಿಜಯವಿಠ್ಠಲ ಕರು-।
ಣಾಬ್ಧಿಯೇ ನೀನೊಲಿಯೆ ಯಾತರಾಲೋಚನೆ ॥೩॥

**ಅಟ್ಟ ತಾಳ**

ಒಳಗೆ ಪ್ರೇರಕನಾಗಿ ಒಲಿಮೆಯಿಂದಲಿ ಕಾಲಾ-।
ಘಳಿಗಿರಗೊಡದಲೆ ತಿಳುಹಿಕೊಡುತಾ ಬಪ್ಪಾ ।
ಚಲುವ ನಿನ್ನಯ ಪಾದಜಲಜಕೆ ನಮೊನಮೋ ।
ಬಲುದಯರಸ ಭಕ್ತಾವಳಿಗೆ ನೀನೆಲ್ಲಾದೇ ।
ಇಳೆಯೊಳು ಮತ್ತೊಂದು ನೆಲೆಬಲ್ಲ ದೇವತೆ -।
ಗಳು ಎಲ್ಲಿಕಾಣೆನೋ ಕಲಕಾಲನೋಡಲು ।

ಬಲವಂತ ಜಗದಯ್ಯಾ ವಿಜಯವಿಠ್ಠಲರಾಯಾ ।
ಸುಳಿಸುಳಿದಾಡು ವಾಗ್ಗಳಿಯಾ ದೇವೇಶ ॥೪॥

**ಆದಿತಾಳ**

ದಾತಾ ನೀವಾಗಿರೆ ಯಾತರಾಲೋಚನೆ ।
ಮಾತುಮಾತಿಗೆ ಸಂಪ್ರೀತಿಯ ಬಡಿಸುತ ।
ಈ ತನುವ ಮನವ ಭೀತಿಗೊಳದ ತೆರದೀ ।
ತಾತನೀನಾಗಿರೆ ನೀತಡಿಯದಲಿ ಪೊರವುತಿರೆ ಎನದೇನು ।
ಪಾತಕ ಹರ ನಮ್ಮ ವಿಜಯ ವಿಠ್ಠಲ ಎನಗೆ ।
ಮಾತಾಪಿತನು ನೀನೆ ಭೂತಳಾಧೀಶಾ ॥೫॥

**ಜತೆ**

ಮುಗ್ಗಿದಲ್ಲಿಗೆ ಬಂದು ಒದಗುವ ಕರುಣಾಳು ।
ಕುಗ್ಗಗೊಡದೆ ಕಾಯೋ ವಿಜಯ ವಿಠ್ಠಲರೇಯಾ ॥೬॥

* * *

## ಸುಳಾದಿ – ೩೪

ಜನನ ಮರಣದ ಬಿಡುಗಡೆಗೆ ಶ್ರೀಹರಿಯ ದಯವೇ ಮುಖ್ಯ. ಸಕಲವೂ ಬಿಂಬಾಧೀನ ಎಂಬ ವಿಷಯ ಈ ಸುಳಾದಿಯಲ್ಲಿ ಪ್ರತಿಪಾದಿತವಾಗಿದೆ.

ಈ ದೇಹವು ಪರಮಾತ್ಮನ ದಯದಿಂದಲೇ ದೊರಕುತ್ತದೆ. ಗುರುಗಳ ಕರುಣೆಯಾಗಿ, ಸುಜ್ಞಾನ ತಿಳಿದು, ಭಕ್ತಿಯು ಹೆಚ್ಚಿದಂತೆಲ್ಲ ವೈರಾಗ್ಯ ಹುಟ್ಟಿ ಧ್ಯಾನವು ಸಂಘಟಿತವಾಗುತ್ತದೆ. ಬಿಂಬಮೂರ್ತಿಯು ಹೃತ್ಕಮಲದಲ್ಲಿ ಹೊಳೆದಾಗ ಜೀವ ತನ್ನ ಅರಿವನ್ನು ಹೊಂದುತ್ತಾನೆ. ಇದರಿಂದ ಆಗಮನ ಅಂತರಾರ್ಥ ಅನುಸಂಧಾನದ ಅರಿವಾಗುತ್ತದೆ. ಸಂಚಿತಾಗಾಮಿಗಳು ನೀಗಿ ಪ್ರಾರಬ್ಧವು ಕೊಂಚವಾಗುತ್ತದೆ.

ಕಾರಣ ಪರಮಾತ್ಮನ ಪಾವನನಾಮವನ್ನು ನೆನೆದರೆ ಜೀವರಿಗೆ ಶಾಶ್ವತ ಸುಖವುಂಟಾಗುತ್ತದೆ. ನೀನೇ ಎಂದು ನಂಬಲು ಲಿಂಗಶರೀರವನ್ನೇ ಕೆಡಿಸುತ್ತಾನೆ. ಸಕಲವೂ ಬಿಂಬಾಧೀನವೆಂದು ನಂಬಿ ನತಿಸುವವರಿಗೆ ಸದಾ ಇಂಬುಕೊಡುತ್ತಾನೆ, ಕರುಣಾಳುವಾದ ಶಿರಿಯರಸ.

**ರಾಗ – ಶಂಕರಾಭರಣ – ಧ್ರುವ ತಾಳ**

ಆವನ್ನ ದಯದಿಂದ ಈ ದೇಹ ದೊರಕೋದು ।
ಆವನ್ನ ದಯದಿಂದ ಗುರುಕರುಣಿಸುವನು ।

ಆವನ್ನ ದಯದಿಂದ ಸುಜ್ಞಾನ ತಿಳಿವದು ।
ಆವನ್ನ ದಯದಿಂದ ಭಕ್ತಿ ವಗ್ಗಳಿಸುವದು ।
ಆವನ್ನ ದಯದಿಂದ ವೈರಾಗ್ಯ ಪುಟ್ಟುವುದು ।
ಆವನ್ನ ದಯದಿಂದ ಧ್ಯಾನ ಸಂಘಟಿಸುವದು ।
ಆವನ್ನ ದಯದಿಂದ ಬಿಂಬಾಪೊಳೆವದು ।
ಆವನ್ನ ದಯದಿಂದ ತನ್ನ ತಾನರಿವಾನು ।
ಆವನ್ನ ದಯದಿಂದ ಆಗಮ ನಿಲ್ಲುವದು ।
ಆವನ್ನ ದಯದಿಂದ ಸಂಚಿತ ಪರಿವದು ।
ಆವನ್ನ ದಯದಿಂದ ಪ್ರಾರಬ್ಧ ತೀರುವದು ।
ಆವನ್ನ ದಯದಿಂದ ಈ ದೇಹ ದೊರಕೋದು ।
ಆವನ್ನ ದಯದಿಂದ ಭುವನತ್ರಯವಾಶ್ರೈಸೋದು ।
ಆವನ್ನ ಪಾವನ್ನನಾಮ ನನೆದರೆ ।
ಜೀವನ್ನ ಸುಖ ಉಂಡು ಭಯವಿಲ್ಲಾ ।
ಕಾವನ್ನಪಿತ ಹರಿ ವಿಜಯ ವಿಠ್ಠಲ ಸಂ-।
ಜೀವನ್ನ ನಂಬಲು ಕಾವಾನು ದಯದಿಂದ ॥೧॥

**ಮಟ್ಟ ತಾಳ**

ನಂಬುವ ದಂಬುವದು ಅಂಬುಧಿಯೊಳು ಮಲಗಿ ।
ಅಂಬುಜ ಪೊಕ್ಕಳಲಿ ಅಂಬಜಭವನೆಂದಂಬವನ ಪಡೆದ ।
ಕಂಬುಕಂಠನ ಪಾದಾಂಬುಧರಿಸಿ ತ್ರಿಯಂಬಕ ಪೆಸರಾದ ।
ನಂಬುವ ದಂಬುವದು ಅಂಬುಜಪತಿ ಪೀ-।
ತಾಂಬರ ವಿಜಯ ವಿಠಲನ ನಾಮವ ಉಂಬುವಗಲ್ಲದಲೆ ।
ಇಂಬಿಲ್ಲ ಪರದಲ್ಲಿ ಎಂಬುವದು ಶತಸಿದ್ಧಾ ನಂಬುವ ।
ದಂಬುವದು ಅಂಬುಜನಾಭನಾ ॥೨॥

**ರೂಪಕ ತಾಳ**

ಗೋಕುಲದೊಳು ಜನಿಸಿ ಏಕಮಾನವನಾಗಿ ।
ಆಕಳ ಕಾಯಿದ ಅನೇಕ ಗೋವಳರೊಡನೆ ।
ಸಾಕಾರ ಸತ್ಕ್ರೀಯಾ ಏಕಮೇವನು ತಾನು ।
ಲೋಕಕ್ಕೆ ಬಹುಮೋಹಕ ತೋರುತ್ತಾ ।
ನಾಕಾದ್ಯರಿಗೆ ದೂರ ಭೀಕರಸುರಹರ ।
ಬೇಕಾದರೆ ಸಿಗ ನೂಕಿದರೆ ಪೋಗಾ ।
ಶೋಕ ನಾಶನ ನಾಮಾ ವಿಜಯ ವಿಠ್ಠಲರೇಯಾ ।
ಸಾಕಿ ಗೊಲ್ಲರಿಗೆ ಸಾಲೋಕ್ಯವ ಪಾಲಿಸಿದಾ ॥೩॥

### ಝಂಪೆ ತಾಳ

ಆವ ದೇವರು ಕೊಟ್ಟ ವರಗಳನು ಜಯಸಿ ಮ-।
ತ್ತಾವವನು ಕ್ಷಿತಿಯೊಳಗೆ ಪೆಸರಾದನೂ ।
ಆವನಾ ತೋರು ಅನಾದಿಕಾಲದಿಂದ ।
ಹೇವರಿಕೆ ಹಿಡಿಯದಲೆ ಹಿತಾರ್ಥವಾ ।
ಗೋವುಜನ್ನಿಗೆ ಪಾಲು ಶುನಕನ ಮರಿ ತಂದು ।
ದೇವರಾಮನೆಯೊಳು ಕುಡಿಸಿದಂತೆ ।
ಮೋವಿಗಾರಾಗದೆ ಸರ್ವಲಕ್ಷಣನಾಮ ।
ಶ್ರೀ ವಿಜಯ ವಿಠ್ಠಲ ಸದೈವ ದೈವವೆನ್ನಿರೋ ॥೪॥

### ತ್ರಿವಿಡಿ ತಾಳ

ಗುಂಡೇರಿ ಬಾಡಿ ಎದೆಗುಂಡಿಯ ಒಣಗಿಸಿ ।
ಕೆಂಡದ ಮಧ್ಯದಲಿ ಆಂಡೊಲಿದುನಿಂದು ।
ದಿಂಡುಂದೆ ಉರುಳಿ ಮುಂಕೊಂಡು ಮಂಡಲವೆಲ್ಲ ।
ಕಂಡಲ್ಲಿ ತಿರುಗಿ ತಿರುಗಿ ತಿರುಗಿ ನೀವು ।
ದಂಡಾಣಿಂದಲಿ ದಣಿದು ವ್ಯರ್ಥವಾಗಿ ನೀವ ।
ಖಂಡಾ ಮನಸಿನಲ್ಲಿ ಭಂಡಾದರೆ ನಮ್ಮಾ ।
ಅಂಡಜಗಮನಾನೊಲಿಯಾ ಕಾಣಿರೋ ।
ಪುಂಡರೀಕಾಕ್ಷ ಶ್ರೀ ವಿಜಯವಿಠ್ಠಲನ್ನ ।
ಪುಂಡರೀಕ ಪಾದದೊಲಿಮೆಯಾಗದನಕಾ ॥೫॥

### ಅಟ್ಟ ತಾಳ

ಸಪ್ತವೆರಡು ಲೋಕದೊಳಗೆ ವ್ಯಾಪ್ತನೀತಾ ।
ಸಪ್ತಾವರಣ ಬಾಹಿರದೊಳಗೀತಾ ।
ಸಪ್ತಾರ್ಚಿ ವಿಪ್ರರಾ ಮುಖದಿಂದ ಭುಂಜಿಸಿ ।
ತೃಪ್ತಿಯ ಬಡುವನೀತಾ ನಿತ್ಯ ತೃಪ್ತನೀತಾ ।
ಆಪ್ತನು ಜನುಮಜನುಮ ನಿಜದಾಸರಿಗೆ ।
ಕ್ಲಿಪ್ತಿಗೆ ಕಡಿಮೆ ಇಲ್ಲದಂತೆ ಪೊರೆವನು ।
ಗೋಪ್ತನಾಮ ನಮ್ಮ ವಿಜಯವಿಠ್ಠಲ ಸಂ-।
ಕ್ಷೇಪ್ತನು ಎಂದೆಂದಿಗೆ ಇಹ ಪರದಲ್ಲಿ ॥೬॥

### ಆದಿ ತಾಳ

ಮೂರೊಂದು ಮೂರೊಂದು ।
ಮೂರು ಎರಡು ಮೂರು ಮೂರು ।

ಮೂರುತಿಯ ರೂಪ ನೋಡಿ ।
ಮೂರು ಮೂಲೆಯೊಳಗಿದ್ದಾ ।
ಮೂರುತಿಯಿಂದ ಕೂಡಿಸಿ । ಮೂರುತಿ ನಿರ್ಮಳರಾಗಿ ।
ಮೂರರೊಳಗೆ ಒಂದು ಪಿಡಿದಾ । ಮೂರು ಪುರಾಣದಲ್ಲಿ ನೀನು ।
ಮೂರೊಂದು ಪದವಿಯಲ್ಲಿ । ಮೂರುತಿವಂತನಾಗೋ ।
ಮೂರು ಆರು ಎರಡು ಕಲಿತು । ಮೂರುತಿ ವಿಜಯವಿಠ್ಠಲನ ।
ಮೂರು ರೂಪಾದವನ ನಂಬಿ । ಮೂರು ಮುವತ್ತವರ ಕೂಡೊ ॥

**ಜತೆ**

ನೀನೆಂದು ನಂಬಲು ಲಿಂಗಶರೀರವ ।
ಹಾನಿಮಾಡುವ ವಿಷ್ಣು ವಿಜಯ ವಿಠ್ಠಲನೊಲಿದು ॥೮॥

* * *

## ಸುಳಾದಿ – ೩೫

**ಈತನು, ಮನ, ಸದನ, ವನಿತೆ ಪುತ್ರರು, ಸಕಲೇಂದ್ರಿಯಗಳು, ಚೇತನ ಸರ್ವಸ್ವವನ್ನು ನೀನೆ ಕೊಟ್ಟಿಹಿ ಸ್ವಾಮಿ, ನೀನು ಅನಾದಿ ಎಂದು ನಾನು ದಾಸನಾದೆ. ನೀನೇ ಪೊರೆಯದಿದ್ದರೆ ನನ್ನನ್ನು ಉದ್ಧರಿಸುವರಾರು ?**

**"ಆರು ಇಲ್ಲದ ಒಬ್ಬ ಊರಾ ಪರದೇಶಿಯ ವೈದು ನೀರೊಳಗೆ ಹಾಕಿ ತೀರದಲ್ಲಿ ಇರದೆ ದೂರದಲ್ಲಿ ನಿಂದು ಮೋರೆ ನೋಡುವರೇ?" ಸಂಸಾರ ಸಾಗರದಲ್ಲಿ ಬಿದ್ದು ಬಳಲುವ ನನ್ನನ್ನು ದೂರ ಮಾಡಬೇಡ ಪ್ರಭು, ನೀನು ಕರುಣಾಸಾಗರನಲ್ಲವೇ, ಈ ಅಂಗಿಯನ್ನು ಬಿಡಿಸಿ ನನ್ನನ್ನು ಅಂಗೀಕರಿಸಿಕೊ.**

**॥ ರಾಗ–ಶಂಕರಾಭರಣ–ಧ್ರುವ ತಾಳ ॥**

ನೀನಿತ್ತ ತನುವೋ ನೀನಿತ್ತ ಮನವೋ ।
ನೀನಿತ್ತ ಸದನವೋ ನೀನಿತ್ತ ವನುತೆ ನಂದನರತಿಘನವೋ ।
ನೀನಿತ್ತ ಚೇತನವೋ ನೀನಿತ್ತ ಮಾನವೋ
ನೀನಿತ್ತ ಸಕಲೇಂದ್ರಿಗಳ ಅಭಿಮಾನವೋ ।
ನಾನಾವದು ಬೇಡಿ ನಾನಿಂತುಬೇಕೆಂದು ।
ನಾನಿಂತು ಬಿನ್ನೈಸಿ ನಾನಿಂತುಕೇಳಿದೆನೆ ।
ನಾನಾನೇಕದಾ ನಾನಾವಸ್ಥಿಯಾ ।
ನಾನಾವಾಬಗೆ ನಾನಾವೆನಿಸಿ ।
ನೀನಿತ್ತ ಬಾರದೆ ನೀನಿತ್ತ ಪೋಗದು ।

ನೀನಿತ್ತವಯ್ಯಾ ಕಾವಾನಯ್ಯಾ ।
ನಾನೆತ್ತಪೊಂದಲಿ ನಾನಾರಸದಲ್ಲಿ ।
ನಾನಾಕ ಮಾಯದ ನಾರಾಯಣ ।
ದಾನವ ನಾಶಾ ರಂಗ ವಿಜಯವಿಠ್ಠಲ ಸ್ವಾಂಗಾ ॥
ನೀನನಾದಿ ಎಂದು ನಾನಾದೆ ದಾಸಾ ॥೧॥

**ಮಟ್ಟ ತಾಳ**

ಆರು ಇಲ್ಲದ ಒಬ್ಬ ಊರಾ ಪರದೇಶಿಯ ವೈದು ।
ನೀರೊಳಗೆ ಹಾಕಿ ತೀರದಲ್ಲಿ ಇರದೆ ।
ದೂರದಲ್ಲಿ ನಿಂದು ಮೋರೆ ನೋಡುವರೇನೊ ।
ಆರಾದರೆ ಏನು ವಾರ ವಾರಕ್ಕೆ ತಮ್ಮ ।
ವಾರಣದ ವಾರ್ತೆ ಹಾರೈಸುವವರಯ್ಯಾ ।
ಸಾರಿಸಾರಿಗೆ ಸಂಸಾರದೊಳಗೆ ಬೀಳೆ ।
ತೈರಕೆಯ ಯವನಾಗಿ ದೂರ ನೋಡುತಲಿಪ್ಪ ।
ಚಾರುತನವೇನೋ ವೀರ ವಿಜಯವಿಠ್ಠ-।
ಲಾರು ಮೆಚ್ಚುವರು ಈ ಗಾರಡ ದಾಟಕ್ಕೆ ।
ಭಾರಕ ನೀನೆಲ್ಲಾ ಧಾರುಣಿಯೊಳಗೆಲ್ಲಾ ॥೨॥

**ರೂಪಕ ತಾಳ**

ಹಂಗು ಹರೆದ ಮೇಲೆ ಲಿಂಗದ ಪರವೆ ಎ-।
ನ್ನಂಗವ ನಿನ್ನಯ ಅಂಘ್ರಿಗೊಪ್ಪಿಸಿದೆ ಈ ।
ಅಂಗದ ಪರವೇನು ಅಂಗಜಪಿತ ತಿರು-।
ವೆಂಗಳನಿಹ ಲಾವಾಂಗವ ಹರಿ ಬಿಡೆ ।
ಕೆಂಗಡದಲೆ ನಿನ್ನುಂಗುಟ ಬಾಯಲ್ಲಿ ।
ಹಿಂಗದೆ ಕಚ್ಚಿ ಹೀನಂಗಳ ನೂಕುವೆ ।
ಹಿಂಗಳ ದಡೆ ನಿನ್ನ ನಿನ್ನಂಗನಿರಲು ದಿವ-।
ಸಂಗಳು ಪೊತ್ತು ಪೆತ್ತದು ಬರಿ ದೇವ ।
ನಂಗ ವಿಜಯ ವಿಠ್ಠಲಂಗೈಸುರವೆನು ಈ ।
ಅಂಗಿಯ ಬಿಡಿಸೆನ್ನ ಅಂಗಿಕರಿಸಿಕೊಳ್ಳೊ ॥೩॥

**ಝಂಪೆ ತಾಳ**

ಬಿಂದು ಮೊದಲು ಅವ್ಯಾಕೃತಾಕಾಶ ಪರಿಯುತ ।
ಒಂದು ಸ್ಥಳವೆನ್ನದಲೆ ವ್ಯಾಪ್ತನಾಗಿ ।

ಎಂದೆಂದಿಗೆ ಇಲ್ಲವೆಂದು ಎನ್ನಯ ಮುಂದೆ ।
ಬಂದು ನಿಂದಿರ ಲಾಪ್ಯಾ ಇಂದಿರಾರಮಣಾ ।
ಮಂದ ಮತಿಯ ಕೈಯ್ಯಾ ಇಂದ ನಿಂದಿಸಿ ಕೊಳದೆ ।
ಪೊಂದಿ ಬಾಂಧವನಾಗಿ ದೋಷಂಗಳ ಪಾಶಾ-।
ಬಂಧನವೆ ಪರಿಹರಿಸು ಒಂದೆ ದೈವವೆ ಶರ-।
ನಂದೆನೊ ವಿಜಯ ವಿಠಲಾ ನಂದಕಿ ನಾಮಾ ॥೪॥

**ತ್ರಿವಿಡಿ ತಾಳ**

ನೀ ಕಲ್ಪಿಸದವು ನೀ ಕಡೆ ನೋಟಾ ।
ನೀ ಕರುಣದಿಂದ ನೀಕಾಯದಿರಲು ।
ನಾ ಕಾಣೆನವನಿಯೊಳು ನಾಕಾದಿ ಬಲದೊಳು ।
ನಾ ಕಂಡೇನಂದು ಪಿನಾಕಿಯ ಕಾಯ್ದದ್ದು ।
ಈ ಕಾಮೇಂದ್ರಿಯಗಳು ಎನ್ನ ಕಾಯದೊಳಗಿದ್ದ-।
ರಾ ಕೂಡಿ ಇರಲಿ ವಿವೇಕದಲಿ ನಿತ್ಯ ।
ನಾ ಕೈಯಾ ಮುಗಿದು ಈ ವಾಕು ಬೇಡುವೆ ವಿ-॥
ವೇಕ ನಾಮಾ ನಮ್ಮ ವಿಜಯ ವಿಠ್ಠಲರೇಯಾ ।
ನೀ ಕಡೆ ಮಾಡದೆ ಸಾಕುದಯದಿಂದ ॥೫॥

**ಅಟ್ಟ ತಾಳ**

ಹೃಷಯಂಗಳಿಗೆ ನೀನರಸನಾದ ಕಾರಣ ।
ಹೃಷಿಕೇಶನೆಂದು ದಿವ್ಯಪೆಸರು ಪೆಸರಿತಯ್ಯ ।
ಘಸಣೆಮಾಡುವ ಮುನ್ನ ಸಮಹೃಷಿಕಾದಿಗಳು ।
ಅಸುವಿಂಗೆ ಸುತ್ತಿ ಉಬ್ಬಸವ ಬಡುಸುತಿರೆ ।
ಅಸುರಾರಿ ವೇಗ ಹಾರಿಸದಿದ್ದರೆ ನಿನಗೆ ।
ಹೃಷಿಕೇಶನೆಂಬೊ ಮಹಾ ಪೆಸರು ಪುಶಿಯಾಗದೆ ।
ಉಸಿರಿದವೆಲ್ಲಿ ಮೋಹಾ ಬಸುರೊಳಗಿದ್ದರೇನು ।
ಕೇಶಘ್ನಿ ವಿಜಯ ವಿಠಲೊಶವಾಗಿ ನಿನ್ನವನೆನಿಸು ॥೬॥

**ಆದಿ ತಾಳ**

ಬದಕಲಾರೆನ್ನನಂದು ಯಿದರೊಳಗೊಂದಾದರು ।
ಬದಿಗೆ ಬಂದು ಎನಗೆ ಒದಗಲಿ ಎಂದೆನೇ ।
ಉದುಭವಿಸುವಾಗ ಚದುರಮತಿಯಲಿದ್ದೆ ।
ಬೆದರಿಸುವರಿದರ ಅದುಭೂತವರಿಯನು ।
ತುದಿಗಾದರು ಒಳಿತುಹೀನದಲಿ ಒಮ್ಮೆ ನಿನ್ನ ।

ಉದರದೊಳಗೆ ನಿದ್ರೆ ಪದರದೆ ಗೈವೆನೋ ।
ಇದಕೆ ಸಂಶಯ ಸಲ್ಲಾ ವಿಜಯವಿಠ್ಠಲ ವಿರಜಾ ।
ಎದೆಗುದೆ ಎನಗಿಲ್ಲಾ ಯಾದವ ಶಿರಿನಲ್ಲಾ ॥೭॥

### ಜತೆ

ಸ್ವಾರಾ ವಿತ್ತಮ ಸಂವರ ನಿನ್ನ ಸದನವು ।
ಸರಿಬಂದಲ್ಲಿಡು ಧಾತಾ ವಿಜಯ ವಿಠ್ಠಲರೇಯಾ ॥೮॥

* * *

## ಸುಳಾದಿ – ೩೬

ನಿನ್ನ ಮಹಿಮೆ ಅನಂತವಾದುದು. ದ್ವಿಸಹಸ್ರನಾಲಿಗೆಯಿಂದ ತುತಿಸಿದರೂ ಫಣಿಪ ನೆಲಗಾಣದಾದ. ಅಂದಮೇಲೆ ನನ್ನ ಪರಿಸ್ಥಿತಿಯೇನು ಸ್ವಾಮಿ !

ಜ್ಞಾನಾನಂದಾತ್ಮಕ ಚಿದಾನಂದ ಶರೀರ, ಪ್ರಾಕೃತರೂಪರಹಿತ ಲೋಕೋತ್ತರ ಸೌಂದರ್ಯವುಳ್ಳ ನಿತ್ಯ ನೂತನ ರೂಪ ನೀನು, ಸ್ವರಮಣನಾದ ರಮಾರಮಣನೇ, ನಿನ್ನ ಸಮಾನವಾದ ದೈವ ಬೇರೊಂದಿಲ್ಲ. ಕೊಡುಗೈಯ ದಾತ ನೀನು. ಸ್ವಾಮಿ ನನ್ನನ್ನು ಕರುಣದಿಂದ ನೋಡಿ ಕೈಪಿಡಿದು ಕಾಪಾಡು ಎಂದು ಮೊರೆಹೊಕ್ಕು ಸ್ತುತಿಸುತ್ತಿದ್ದೇನೆ.

### ॥ ರಾಗ–ಸಾರಂಗ ಧ್ರುವ ತಾಳ ॥

ಎಂಥಾದೊ ನಿನ್ನ ಮಹಿಮೆ ಇಂಥಾದಂಥಾದೆಂದು ।
ಎಂಥವರೊ ಎಣಿಸಿ ಗುಣಿಸಿದರು ।
ಇಂಥಾದೆ ಎಂದು ಮಿತಿಗಟ್ಟಿಪರಾಗೀ ।
ಅಂತುಗಾಣುವರಾರು ಕಂತುಜನಕ ।
ಸಂತ ತಾನಂತಾ ಸಾವಿರ ಮೊಗದಲ್ಲಿ ।
ನಿಂತು ದ್ವಿಸಾವಿರ ಜಿಹ್ವೆಯಿಂದ–।
ನಂತಾನಂತಾ ಎಂದು ಒಂದೊಂದು ನಾಲಿಗಿಲಿ ।
ಪಂಥಿ ಸಾಗಿದಂತೆ ಪ್ರತ್ಯೇಕ ಪ್ರತ್ಯೇಕ ।
ಅಂತರಶುದ್ಧನಾಗಿ ನಿಲವಿಲ್ಲದೆ ।
ಚಿಂತಿಸಿ ಒಂದಿಷ್ಟು ನೆಲೆಗಾಣದೆ ಪೋಗಿ ।
ಭ್ರಾಂತಿಯಲ್ಲಿ ಫಣಿಪ ಸುಮ್ಮನಾದಾ–।
ನಂತಾವತಾರ ವಿಕರ್ತ ವಿಜಯ ವಿಠಲ ।
ಎಂಥಾ ದೈವವೋ ನೀನು ಎಂಥಾ ರೂಪನು ನೀನು ॥೧॥

### ಮಟ್ಟ ತಾಳ

ಸ್ವರೂಪ ಅರೂಪ ಅಪರೂಪಾ ।
ಸ್ವರತಿ ಸ್ವತೇಜ ಸ್ವಪ್ರಕಾಶ ।
ಸ್ವರಾಧೇಯಾ ಆರಾಧೇಯ ।
ಸ್ವಾರೋಗಣೆಯ ಸ್ವಬಂಧು ಬಂಧೂ ।
ಕ್ಷೀರ ಸಿಂಧುಕುಮಾರಿಯ ಪ್ರಿಯ ನಿಗಮಗೇಯಾ ।
ಪರಾವಸ್ತು ಪರಮ ಮಹಿಮಾ ।
ಪರಕೆ ಪರಾತ್ಪರಮ ಪುರುಷಾ ।
ಪರಮೇಷ್ಠಿ ಪಿತನೆ ವಿಜಯ ವಿಠ್ಠಲಾ ।
ಅರಾಧೀನ ಅನಾಧೀನ ಅನಾಥ ನೀನೆ ನಾಥನು ನೀನೆ ಸ್ವಾಮಿ ।
ಸ್ವರೂಪ ಅರೂಪ ಅಪರೂಪಾ ॥೨॥

### ತ್ರಿವಿಡಿ ತಾಳ

ಅನಾದಿ ಬ್ರಹ್ಮಚಾರಿ ನೀನೆಂದು ಸುರರ ।
ಸ್ಥಾನದಲ್ಲಿ ಪೊಗಳುತಿದೆ ।
ಅನಾದಿಗ ನೀನೆ ಅವತಾರವತಾರಾ-।
ಕೇನಾದದು ಎಲ್ಲ ನೀನೆ ಬಲ್ಲೀ ।
ನೀನಾರಿಯಾಗಿ ಸುರರಕುಲಕ್ಕೆ ಸುಧಾ-।
ಪಾನವೆರದೆ ಮಾಯಾ ವೇಷಧರಿಸಿ ।
ದಾನವರ ಎದೆದಲ್ಲಣನೆನಿಸಿ ಮ-।
ತ್ತಾ ನಾರಿರೂಪವೆ ಪೊಗಲಾಡೀ ।
ಜಾಣತನದಲ್ಲಿ ಸರ್ವರಲ್ಲಿ ಜುಣಗಿ ।
ಏನು ಅರಿಯದಿಪ್ಪ ಹೊಂತ ಕಾರಿ ।
ಮಾನವವೇಷ ಮಹಾಸ್ವಾಂಗಾ ವಿಜಯವಿಠ್ಠಲ ॥
ಆನುನಿನ್ನಯ ಸಮಾನ ದೈವವಕಾಣೆ ॥೩॥

### ಅಟ್ಟ ತಾಳ

ನಡೆವಾ ನಡಿಯು ಬೇರೆ ।
ಅಡಿಗಡಿಗೆ ಸುಖಬಡುವ ಸಂಭ್ರಮ ಬೇರೆ ।
ಕೊಡುವ ಪ್ರಸಾದ ಕೈಪಿಡುವ ಚಿತ್ರವ ಬ್ಯಾರೆ ।
ಮುಡಿದ ಪೂಗಳು ನಿನ್ನಾ ಬೆಡಗೆಲ್ಲಾ ಬ್ಯಾರೆ ।
ಸಡಗರ ದೈವವೇ ಎಡಿಗೆಡಿಗೆ ಗೋವರೊಡರೊಡನೆ ।
ಆಡ ಗೆಡೆಗೊಡುವದು ಬ್ಯಾರೆ ।

ಪಡಿಗಾಣೆ ನೀನಿಟ್ಟ ಮುಡಿ ಸಡಿಲಿಪರಾರು ।
ಬಿಡುಪೋಗಿ ಮೂರುತೊಡರುನಿಕ್ಕುವ ಜಾಣಾ ।
ಬಡಿಯರಿಗೊಡೆಯಾ ಬಡವರ ಸಹಾಯ ।
ವಡವನ್ಹಿನಾಮಾ ವಿಜಯ ವಿಠ್ಠಲ ಸರ್ವ–।
ರೊಡಲೊಳಗಾಡುವ, ಕೊಡಗೈಯ ದಾತಾರಾ ॥೪॥

**ಆದಿ ತಾಳ**

'ಏವಂತಿ ಜಾಯತೆ' ಹರಿ ನಿಜರೂಪವೆಂದು ।
ಆ ವೇದಾವಳಿಗಳು ಪಾವಿನಹಿರಿಯಂಗೆ ಪೇಳೆ ।
ದೇವಾದಿ ಕುಲದವರು ತಾವೊಲಿದು ಪೊಗಳಿದರು ।
ಆವದಯ್ಯಾ ನಿನ್ನ ರೂಪ ಆವದೈಯ್ಯಾ ನಿನ್ನಮಾಯಾ ।
ದೇವ ಮೃತ್ಯು ಪಾತಾಳ ಭೂ ವ್ಯಾಪಿಸಿಕೊಂಡಿದೆ ।
ಜೀವ ಜೀವರಾಡಿದಂತೆ ಆವಕಾಲಕೆ ತಕ್ಕಹಾಗೆ ।
ವಾವಿವರಸೆ ಇಲ್ಲದಲೆ ಕಾವೆ ಸ್ತ್ರೀ ಪುರುಷನಾಗಿ ।
ಕಾವನಯ್ಯ ನಿನ್ನ ಲೀಲೆ ಆವದೊ ಕಡಿಗೆ ನಿನ್ನ ।
ಭಾವಕೆ ಬಂದಂತೆ ಮಾಡುವಿ ಸೇವಕರಿವರವರನದೆ ।
ಭಾವನೆ ವಿಜಯವಿಠ್ಠಲ ದೇವ ನೀನೇಒಬ್ಬ ಮಿ–।
ಕ್ಕವರೆಲ್ಲ ನಿನ್ನ ಮಾಯಾವಲಿಗೆ ಬೀಳುದರು ॥೫॥

**ಜತೆ**

ಅಪ್ರತಿಪ್ರತಾಪಾ ಅಪ್ರತಿಯರಸೆ ಪು–।
ಣ್ಯ ಪ್ರಭಾವ ವಿಜಯ ವಿಠ್ಠಲನೆ ಸರ್ವೋತ್ತಮಾ ॥೬॥

* * *

## ಸುಳಾದಿ – ೩೭

**ಸ್ವಾಮೀ, ಅನಂತಾನಂತ ಗುಣಪೂರ್ಣ ನೀನು, ಅನಂತ ಜೀವರಾಶಿಯೊಳಗೆ ಒಂದು ಜೀವ ನಾನು. ಅನಂತಮೂರ್ತಿಗಳೊಳಗೆ ಒಂದೇ ಮೂರ್ತಿ ನೀನು. ನಿನ್ನ ನಾಮ, ನಿನ್ನ ಸ್ಮರಣೆ, ನಿನ್ನ ಧ್ಯಾನ ಅನಂತಾನಂತ, ಅನಂತಾವತಾರ ಚರಿತ, ಜಗಚ್ಚರಿತ ನೀನು.**

**ಬಿನಗು ದೈವದೊಡೆಯನಾದ ಘನಮಹಿಮನೇ ನಿನ್ನ ನೆನಹೇ ಮುಕ್ತಿಗೆ ಮಾರ್ಗ ಎಂಬ ಮಾತು ಶ್ರುತಿಸಿದ್ಧವಾದದ್ದು.**

**ಪಂಚಭೂತ, ಪಂಚತನ್ಮಾತ್ರಾಗಳಲ್ಲಿ ಸೂಕ್ಷ್ಮವಾಗಿ ನೀನೇ ವಿವಿಧ ಬಗೆಯಿಂದ ಅವುಗಳಲ್ಲಿರುವಾಗ, ಚರಾಚರದಲ್ಲಿ, ಪ್ರಾಣ ಪ್ರಕೃತಿಗಳಲ್ಲಿ ನೀನು ತಿರುಗಿ, ವ್ಯಾಪಾರ ಮಾಡುತ್ತಿರುವಾಗ, ನೀನರಿಯದ ದ್ರವ್ಯಗಳನ್ನು ತಂದು ನಾನು ಪೂಜಿಸುವುದೆಂತು? ನನ್ನ ಭವದ ಬನ್ನ ಬಿಡಿಸಿ ಕಾಪಾಡು ಕರುಣಾಳು.**

**॥ ರಾಗ – ಶಂಕರಾಭರಣ – ಧ್ರುವ ತಾಳ ॥**

ಅನಂತಕಾಲದೊಳಗೊಂದೆ ಕಾಲವಿದೆ ।
ಅನಂತಾನಂತ ದೇಶದೊಳಗೊಂದೆ ದೇಶವಿದೆ ।
ಅನಂತ ಗುಣದೊಳುಗೊಂದೆ ಗುಣವಿದೆ ।
ಅನಂತಾನಂತ ಕರ್ಮದೊಳಗೊಂದೆ ಕರ್ಮವಿದೆ ।
ಅನಂತಾನಂತ ಜನುಮದೊಳಗೊಂದೆ ಜನುಮವಿದೆ ।
ಅನಂತಾನಂತ ತೀರ್ಥದೊಳಗೊಂದೆ ತೀರ್ಥವಿದೆ ।
ಅನಂತಾನಂತ ಶ್ರುತಿಯೊಳಗೊಂದೆ ಶ್ರುತಿಯಿದೆ ।
ಅನಂತಾನಂತ ಮಂತ್ರದೊಳಗೊಂದೆ ಮಂತ್ರವಿದೆ ।
ಅನಂತಾನಂತ ವರ್ಣದೊಳಗೊಂದೆ ವರ್ಣವಿದೆ ।
ಅನಂತಾನಂತ ದ್ರವ್ಯದೊಳಗೊಂದೆ ದ್ರವ್ಯವಿದೆ ।
ಅನಂತಾನಂತ ಜಾಂಡಜಾಂಡದೊಳಗೊಂದೆ ಜಾಂಡವಿದೆ ।
ಅನಂತಾನಂತ ಕಲ್ಪದೊಳಗೊಂದೆ ಕಲ್ಪವಿದೆ ।
ಅನಂತಾನಂತ ಯುಗದೊಳಗೊಂದೆ ಯುಗವಿದೆ ।
ಅನಂತಾನಂತ ಕಾಲದೊಳಗೊಂದೆ ಕಾಲವಿದೆ ।
ಅನಂತಾನಂತ ಒಂದೆ ಒಂದೊಂದೆ ಅನಂತಾನಂತ ।
ಅನಂತ ಗುಣಪೂರ್ಣ ವಿಜಯ ವಿಠ್ಠಲರೇಯಾ ।
ಅನಂತ ಜೀವರಾಶಿಯೊಳು ಒಂದು ಜೀವ ನಾನು ॥೧॥

**ಮಟ್ಟ ತಾಳ**

ಅನಂತ ಮೂರ್ತಿಯೊಳಗೊಂದೆ ಮೂರ್ತಿಯಿದೆ ಅನಂತಾ ।
ಅನಂತ ನಾಮದೊಳಗೊಂದೆ ನಾಮವಿದೆ ಅನಂತಾ ।
ಅನಂತ ಸ್ಮರಣೆಯೊಳಗೊಂದೆ ಸ್ಮರಣೆ ಇದೆ ಅನಂತಾ ।
ಅನಂತ ಧ್ಯಾನದೊಳಗೊಂದೆ ಧ್ಯಾನವಿದೆ ಅನಂತಾ ।
ಅನಂತಾನಂತ ಅನಂತ ಬಗೆ ವಿಜಯ ವಿಠ್ಠಲರೇಯಾ ।
ಅನಂತಾವತಾರ ಅನಂತ ಚರಿತಾ ॥೨॥

### ತ್ರಿವಿಡಿ ತಾಳ

ತೃಣ ಜೀವರಾಶಿಗಳು ಬೊಮ್ಮನ ತನಕವರು ।
ಗುಣದಲ್ಲಿ ಪರಮಾಣು ಪ್ರಾದೇಶದಿ ।
ಎಣಿಸಿನೋಡುವರಯ್ಯಾ ತಮ್ಮ ಯೋಗ್ಯತದರಿತು ।
ಎಣಿಕೆ ಅಧಿಕಾಧಿಕವೆನಿಸಿ ।
ಇನಿತಲ್ಲದೆ ಲಕುಮಿ ಬೊಮ್ಮನ ನೋಡಲು ।
ಗಣನೆ ಇಲ್ಲದೆ ಒಂದಾನಂತ ಮಡಿಯಾಗಿ ।
ಮನದಲ್ಲಿ ಕಾಂಬಳು ಲೇಶ ಬಿಡದೆ ।
ಜನುಮರಹಿತ ನೀನೆ ಲಕುಮಿನೋಡಿದರೊಳು ।
ಅಣು ಅತ್ಯಣುಗಳ ಕಾಣುತಿಪ್ಪೆ ।
ನಿನಗೆ ನಿನ್ನಿಚ್ಛೆಗೆ ಭೇದ ಎಂದಿಗಿಲ್ಲಾ ।
ಚಿನುಮಯ ರೂಪನೆ ತತ್ವಮೋದಾ ।
ಅನಿಮಿಷಾದಿಗಳಿಗೆ ಸೋಜಿಗ ತೋರುವ ।
ಘನ ಮಹಿಮಾ ವೈಕುಂಠವಾಸಾ ಶ್ರೀಶಾ ।
ತನು ಹತ್ತು ಇಂದ್ರಿಯಗಳು ಚಿತ್ತ ಬುದ್ಧಿಯು ।
ಮನ ಅಹಂಕಾರ ನಾನಾ ವರ್ಣನೆ ।
ತನುರೂಹ ಸರ್ವಾವಯವಗಳು ಜ್ಞಾನಮೂ –
ರಣನಾಗಿ ಇಪ್ಪ ಸ್ವತಂತ್ರ ಪುರುಷರ್ಚನೆ ಮಾಡಿ ।
ನಿನ್ನ ಮೆಚ್ಚಿಸಬಲ್ಲೆನೆ ದೇವಾ ।
ಎನಗಾವದು ನಿನ್ನ ನೆಲಿಯೆ ತಿಳಿಯೆ ।
ಬಿನಗು ದೈವ ಡೊಡಿಯಾ ವಿಜಯ ವಿಠ್ಠಲ ನಿನ್ನ ।
ನೆನಹೆ ಮುಕ್ತಿಗೆ ಮಾರ್ಗವೆಂಬೋದೆ ಶ್ರುತಿಸಿದ್ಧ ॥೩॥

### ಅಟ್ಟ ತಾಳ

ಧರಣಿ ಉದಕ ತೇಜ ವಾಯು ಅಂತರಿಕ್ಷಾ ।
ಸ್ಪರಶ ರೂಪರಸ ಗಂಧ ಶಬ್ದ ಮಿಗಿಲಾದ ।
ಪರಮಾಣುಗಳು ಚತುರವಿಂಶತಿ ತತ್ವ ।
ವಿರುತಿರೆ ಅತಿ ಸೂಕ್ಷ್ಮವಾಗಿ ಅದರೊಳು ।
ಹರಿನೀನೇ ಅಂಥ ಪರಮಾಣುಗಳಲ್ಲಿ ।
ಪರಿ ಪರಿ ಬಗೆಯಿಂದಲಿ ಒಳಗಿಪ್ಪೆ ಕಾಣುತ್ತ ।
ನಿರುತ ನೀನರಿಯದ ದ್ರವ್ಯಂಗಳ ತಂದು ।
ವರ ಪೂಜೆ ಮಾಡು ಎಂದರೆ ಅವದಿಪ್ಪದು ।
ಚರಾಚರದಲ್ಲಿ ಪ್ರಾಣ ಪ್ರಕೃತಿ ನೀನಲ್ಲದೆ ।

ತಿರುಗುವ ವ್ಯಾಪಾರ ಮತ್ತಾವದು ಪೇಳೋ ।
ಚರಣದಲ್ಲಿ ಧರೆ ಅಳೆದ ಮಹಾತುಮಾ ।
ಸರಿಯಿಲ್ಲ ನಿನಗೆಲ್ಲಿ ವಿಜಯ ವಿಠ್ಠಲ ಎನ್ನ ।
ಇರುವ ಬಲ್ಲವನಿಗೆ ವಿಸ್ತರಿಸುವದೇನೊ ॥೪॥

**ಆದಿ ತಾಳ**

ಸನಕಾದಿ ಮುನಿ ಮನುಗಳು ।
ಅನಿಮಿಷಗಣ ಪಾಕಶಾಸನ ರುದ್ರ ।
ಪನ್ನಗ ಖಗ ವನಜಭವನ ಮನಕೆ ತೋರದಾ ।
ಕಣ್ಣಿಗೆ ಪೊಳೆಯದೆ ಚಿನುಮಯ ಅನ್ನಮಯಾ ।
ಘನಕೆ ಘನ ನಿನ್ನ ಪೂಜೆಯನ್ನು ಮಾಡಿ ।
ದಣಿಸುವನಾರು ಬಣ್ಣಿಸಲರಿದು ಬಿ–।
ನ್ನಾಣದಲ್ಲಿ ಎನ್ನ ಭವದಬನ್ನ ಬಿಡಿಸೊ ।
ಅನಂತಾನಂತ ಚನ್ನ ಮೂರುತಿ ವಿಜಯ ವಿಠಲ ।
ನಿನ್ನ ಪಾದವನ್ನು ನಂಬಿದೆ ॥೫॥

**ಜತೆ**

ನನ್ನಂಥವನ ಪೂಜೆಯಿಂದ ನಿನಗೇನು ।
ಅನಂತಾನಂತನೆ ವಿಜಯ ವಿಠಲ ಸುಲಭಾ ॥೬॥

* * *

## ಸುಳಾದಿ – ೩೮

**ಅನಂತಾನಂತ ಬ್ರೊಹ್ಮಾಂಡಗಳನ್ನು ನಿನ್ನುದರದಲ್ಲಿಟ್ಟು, ಅನಂತಾನಂತ ಮಹಿಮೆಯನ್ನು ತೋರುತ್ತ, ಅನಂತಾನಂತ ಗುಣಪೂರ್ಣನಾದ, ಅನಂತಬಗೆಯ ನಾಟಕಕರ್ತನಾದ ಅನಂತಶಯನನೇ.**

**ಬಹುವಾದ ಶಿರಸ್ಸು, ಕರ್ಣ, ನಯನ, ನಾಸಾ, ವದನ, ಬಾಹು, ಪಾದ ಮುಂತಾದ ಅವಯವಗಳನ್ನು ಹೊಂದಿದ ವಿಶ್ವರೂಪಿಯೇ. ಬಹುಕಾಲದ ಹಿರಿಯನಾದ ನೀನೇ ನನ್ನನ್ನು ಬಹುವಿಧದಿಂದ ಪಾಲಿಸಬೇಕು.**

**ಜನನ ಮರಣಾದಿಗಳನ್ನು, ಬಾಲ್ಯ, ಯವ್ವನ, ಮುಪ್ಪನ್ನು, ಮನಸ್ಸಿನ ನಾನಾ ವ್ಯಾಪಾರಗಳನ್ನು ಕಲ್ಪಿಸಿ ನನ್ನನ್ನು ದಣಿಸುವುದು ಉಚಿತವೇ ಸ್ವಾಮಿ ?**

**ನನಗೆ ಯಾರ ಗೊಡವೆಯೂ ಬೇಕಿಲ್ಲ. ನೀನು ಉದ್ಧಾರ ಮಾಡ್ದ ಬಿಡು, ನಾನು ಕೇಳುವುದಿಲ್ಲ. ಆದರೆ ಪರಿಪೂರ್ಣ ಮಹಿಮನೇ ಸದಾ ನಿನ್ನ ಚಿಂತಿಸುವಂತೆ ಮಾಡು.**

॥ ರಾಗ – ಭೈರವಿ – ಧ್ರುವ ತಾಳ ॥

ಅನಂತ ಬೊಮ್ಮಾಂಡ ನಿನ್ನುದರದಲ್ಲಿ ಯಿಟ್ಟು ।
ಅನಂತ ಬೊಮ್ಮಾದಿಗಳ ನಿನ್ನೊಳಗಡಗಿಸಿ ಕೊಳುತ ।
ಅನಂತ ಸರ್ವದಲ್ಲಿ ನೀನೆ ನೀನೆ ।
ಅನಂತ ಮಹಿಮೆಯ ತೋರುತಲಿ ।
ಅನಂತ ಅನಂತ ಅವತಾರ ಮಾಡುತ್ತ ।
ಅನಂತ ಗುಣ ಪರಿಪೂರ್ಣ ನೀಲವರ್ನಾ ।
ಅನಂತ ನದಿ ಜನಕ ವಿಜಯ ವಿಠ್ಠಲ ನೀನೆ ।
ಅನಂತ ಪರಿಯಲ್ಲಿ ನಾಟಕ ಕರ್ತಾ ॥೧॥

ಮಟ್ಟ ತಾಳ

ಬಹು ಶಿರಸಾ ಬಹುಕರ್ನಾ । ಬಹುನಯನಾ ಬಹುನಾಸಾ ।
ಬಹು ವದನಾ ಬಹುಬಾಹು । ಬಹುಹಸ್ತ ಬಹುಕಂಠ ।
ಬಹು ಉದರಾ ಬಹುಕಟಿ । ಬಹುಜಾನು ಬಹುಜಂಘೆ ।
ಬಹು ಚರಣಾ ಬಹುನಖಾ । ಬಹು ಮೂರುತಿ ವಿಜಯ ವಿಠ್ಠಲರೇಯಾ
ಬಹು ಕಾಲದ ಹಿರಿಯ । ಬಹುವಿಧ ಪಾಲಿಸು ॥೨॥

ತ್ರಿವಿಡಿ ತಾಳ

ಜನನ ಮರಣಾ ರ್ಭಕತನ ಯೌವ್ವನ ಜರೆ ।
ತನ ನಾನಾಕಾ ಮನಸಿನ ವ್ಯಾಪಾರಂಗಳು ।
ಇನಿತು ನಿರ್ಮಾಣವ ಎನಗೆ ಕಲ್ಪಿಸಿಕೊಟ್ಟು ।
ದಣಿಸುವದು ಚಿತವೆ ದನುಜಾಂತಕಾ ।
ಮನುವಂಥ ಜನಕ ನಮ್ಮ ವಿಜಯ ವಿಠ್ಠಲರೇಯಾ ।
ನಿನಗೆ ಈ ಪರಿ ವ್ಯಾಪಾರವೇ ಬಲುಲೇಸು ॥೩॥

ಅಟ್ಟ ತಾಳ

ಇದರಿಂದ ನಿನಗೆ ಕಾಲಕ್ಷೇಪವಿದ್ದರೆ ।
ಅದರಂತೆ ಮಾಡಿ ಎನ್ನನು ಪುಟ್ಟಿಸಲಿಬೇಕು ।
ಮಧುಸೂದನ ರಂಗಾ ವಿಜಯ ವಿಠ್ಠಲರೇಯಾ ।
ಚದುರತನ ವೆಂಬೊದದಟ ಒಂದಲ್ಲದಲೆ ॥೪॥

ಆದಿ ತಾಳ

ಆರ ಗೊಡವಿ ಏನು ಎನಗೆ । ಆರಸಂಗವೇನು ಎನಗೆ ।
ಆರಿಂದಲೇನುಪಕಾರ ವಾಗೊದೆನಗೆ ಮುಂದೆ ।

ಆರನಾದರೇನು ನೀನುದ್ಧಾರವನ್ನು ಮಾಡು ಬಿಡು ।
ಕೋರುವನಾನಲ್ಲ ಎನ್ನ ಓರಂತೆ ಮಾಡು ಎಂದು ।
ಶ್ರೀ ರಮಣ ವಿಜಯ ವಿಠ್ಠಲಾಪಾರ ಮಹಿಮ ಪರಿಪೂರ್ಣ ।
ಮೂರುತಿ ಮುರಾರಿ ಸರ್ವಾಧಾರಿ ವಾರಿಜ ವದನಾ ॥೫॥

ಜತೆ

ಹೊಸ ಪರಿಯ ವ್ಯಾಪಾರ ನಿನ್ನಲ್ಲಿ ಇರಲಾಗಿ ।
ಅಸುರ ರಿಪು ವಿಜಯ ವಿಠ್ಠಲ ಎನಗೆ ಇನಿತೊ ॥೬॥

* * *

## ಸುಳಾದಿ – ೩೯

ಏಕೋ ವಿಷ್ಣು ಮಹದ್ಭೂತವೆಂಬ ಮಂತ್ರಸಾರವನ್ನೇ ದಾಸರಾಯರು ಈ ಸುಳಾದಿಯಲ್ಲಿ ಮಾರ್ಮಿಕವಾಗಿ ವಿವರಿಸಿದ್ದಾರೆ.

ಚೇತನಾಚೇತನವಾದ ಸರ್ವತ್ರದಲ್ಲಿ ಜ್ಯೋತಿಸ್ವರೂಪನಾದ ಪರಮಾತ್ಮನು ಒಳಹೊರಗೆ ವ್ಯಾಪ್ತನಾಗಿದ್ದಾನೆ. ಸರ್ವಭೂತರ ಮಧ್ಯದಲ್ಲಿ ಭೂತಿಯುಳ್ಳ ಭೂತವಿದು. ಜ್ಞಾನಾನಂದ ಸುಂದರ ವರ್ಣ ಪರಿಪೂರ್ಣ ಮಹಿಮ, ಪರಕೆ ಪರಾತ್ಪರನಾದ ಪರಮಾತ್ಮನನ್ನು ಸರಿಬಂದಂತೆ ನಿರೀಕ್ಷಿಸಿ ಇದರ ಕುರುಹನ್ನು ಕಂಡವರಾರು ? ಈ ಗರುವ ಭೂತಕೆ ಜಗದೊಳಗೆಲ್ಲಿಯೂ ಸರಿಗಾಣೆ.

ಏಕೋ ವಿಷ್ಣು ಮಹದ್ಭೂತನೆಂಬೊ ಭೂತ ಸೋಕಿದ ಮನುಜನ ಭಾಗ್ಯಕ್ಕೆ ಎಣೆಯಿಲ್ಲ, ಕಡೆಯಿಲ್ಲ. ನೆನೆವವರ ಅಂತರಂಗದಲ್ಲಿದ್ದು ಈ ಭೂತ ಚಿಂತಾ ಮಣಿಯೆನಿಸುವುದು. ಪರಮಾತ್ಮನ ಈ ಭೂತ ಬಡಿಯದಿದ್ದರೆ ಸಂಸಾರ ಬಿಡದು. ಆನಂದ ಲಭಿಸದು.

॥ ರಾಗ ರೇಗುಪ್ತಿ – ಧ್ರುವ ತಾಳ ॥

ಭೂತ ಸೋಕಿತು ಕಾಣೋ ಯಾತರ ವರ್ಣವೊ ।
ಮಾತು ಲಾಲಿಸೆ ವಿಪರೀತವೆನಿಸುತಿದೆ ।
ಜಾತಿ ಮತ್ತಾವದೊ ಜಾತವೆಂಬೊದೆ ಇಲ್ಲಾ ।
ಗಾತುರ ನೋಡಿದರೆ ಭೀತಿ ನಿರ್ಭೀತಿ ಬರ್ಪದು ।
ಶಾತ ಕುಂಭದವನ ಜಾತ ಭವಾಂಡದ ಸ–।
ಪೂತಾವರಣ ಅವ್ಯಾಕೃತ ಗಗನ ಸಮೇತ ತೊಲಗದೆ ।
ವ್ಯಾಪುತವಾಗಿವೆ ಇದರ ಭೀತಿಗೆ ಬ್ರಹ್ಮಾದ್ಯರು ।
ಧಾತುಕೆಡುತಲಿರೆ ಭೂತಳ ದೊಳಗುಳ್ಳ ।

ರಾತಿ ಆರಾತಿಗಳಿಗೆ ದ್ವೈತ ಅದ್ವೈತವೆಂದು ।
ತಾ ತಿಳುಪೀರ್ವಾರೊಳು ಪಾತಕಕೊಬ್ಬನ ಮು-।
ಕುತಿಗೆ ಒಬ್ಬನ ಈ ರೀತಿಯಲ್ಲಿ ಕಳುಹಿ ।
ಪ್ರೀತನೆನಿಸುವದು ಚೇತನ ಅಚೇತನ-।
ವಾತದೊಳಗೆ ಮಹದ್ಭೂತವಾಗಿ ವಿಖ್ಯಾತ ಭೂತ ಕಾಣೋ ।
ಜ್ಯೋತಿ ಸ್ವರೂಪ ನಮ್ಮ ವಿಜಯ ವಿಠ್ಠಲ ಸರ್ವ-।
ಭೂತರ ಮಧ್ಯದಲ್ಲಿ ಭೂತಿ ಉಳ್ಳದು ಎನ್ನ ॥೧॥

### ಮಟ್ಟ ತಾಳ

ಶಿರ ನಯನ ಕರ್ನ, ವರ ವಾಶಿಕ ವದನ ।
ಕರ ತೋಳು ಭುಜ ಕಂಠ, ಉರ ಉದರ ನಾಭಿ ।
ಶಿರಸ ಕಟಿ ಊರು ಮೆರೆವ ಜಾನುಜಂಘೆ ।
ಚರಣ ಬೆರಳುಗಳು ಮಿರಗುವಾಭರಣ ಸ-।
ಧ್ಭರಿತ ಜ್ಞಾನಾನಂದ ಸುಂದರ ಶಾಮವರ್ನಾ ।
ಪರಿಪೂರ್ಣ ಮಮ ಪರಕೆ ಪರಾತ್ಪರ ।
ಸರಿ ಸರಿ ಬಂದಂತೆ ನಿರೀಕ್ಷಿಸಲು ಇದರ ।
ಕುರುಹು ಕಂಡವರಾರು ಪರೋಕ್ಷದಲ್ಲಿ ಕೇಳಿ - ।
ದರೆ ಮನಕೆ ದೂರ ಅ-।
ಪರೋಕ್ಷದಲ್ಲಿ ಸ್ತುತಿಸಿದರೆ ಧ್ಯಾನಕ್ಕೆ ದೂರ ।
ಪರಿ ಪರಿ ನೋಡಿದರೆ ಪರಿಮಿತವಾದ ಸು-।
ಚ್ಚರಿತ ನಿರ್ಮಳ ಕಾಯ ಪರಿಪರಿಯಲ್ಲಿವೆ ।
ಸುರರ ಮಸ್ತಕ ಮಣಿ ವಿಜಯವಿಠ್ಠಲನೆಂಬೊ ।
ಗರುವ ಭೂತಕೆಯಲ್ಲಿ ಸರಿಗಾಣೆ ಜಗದೊಳು ॥೨॥

### ತ್ರಿವಿಡಿ ತಾಳ

ಏಕೋವಿಷ್ಣು ಮಹದ್ಭೂತ ನೆಂಬೊ ಭೂತಾ ।
ಸೋಕಿದ ಮನುಜನ ಭಾಗ್ಯಕ್ಕೆ ಕಡಿಯಿಲ್ಲಾ ।
ಲೋಕದೊಳಗುಳ್ಳ ಭೂತ ಪ್ರೇತದ ಗಂಡಾ ।
ತಾಕ ಬಾರದಿದರು ತಾಕಿದರೇ ಬಿಡದು ।
ಆಕಾರ ನೋಡಿದರೆ ಆರಿಗೆ ವಶವಲ್ಲಾ ।
ಆಕಾಶಕೆ ನೂರ್ಮಡಿ ಒಂದೇ ಎನಿಸುತಿದೆ ।
ನಾಕಾದಿ ಜನರಿಗೆ ಮೀರಿದ ಭೂತಾ ಅ ।
ನೇಕ ಕೈಕಾಲು ಕಿವಿ ವದನದಲ್ಲಿಪ್ಪದು ।
ಲೌಕಿಕದಲಿ ನೋಡೆ ಲಕ್ಷಣೊಂದು ಪರಿ ।

ನಾಕಾಣೆ ನಾಕಾಣೆ ಭೂತ ದುಚ್ಚಾರಣೆ ।
ಕಾಕುಲಾತಿ ಇದಕೆ ಎಳ್ಳಿ ನಿತು ಇಲ್ಲಾ ।
ತಾಕೊಡುವದು ಹೊಡಿಸಿಕೊಂಡವರಿಗೆ ಪುರುಷಾರ್ಥ ।
ಪ್ರಾಕೃತದೊಳಗಿದ್ದದಲಿ ಈ ಭೂತ ಬೇರೆ ।
ಶೋಕ ಕಳೆವದು ಸಾರಿದವರಿಗೆ ಪುಣ್ಯಾ – ।
ಶ್ಲೋಕ ಭೂತ ವಿಜಯ ವಿಠ್ಠಲ ಇಂದೆ ।
ವಿಕಾರಣವಾದರೂ ಸಾಕದು ಬಿಡದು ॥೩॥

### ಅಟ್ಟ ತಾಳ

ಮಂತ್ರಕೆ ಹಣಿಯದು ಯಂತ್ರಕೆ ಹಣಿಯದು ।
ಎಂಥೆಂಥ ದಿಗ್ಬಂಧ ಅಂತಂತೆ ಮಾಳ್ಪುದು ।
ಪಂಥವಾಡಿದವರ ತಂತುಗೆಡಿಸುವದು ।
ಸಂತತ ಸಂತರ ಅಂತರಂಗದೊಳಿದ್ದು ।
ಚಿಂತೆಗೆ ಯಿಕ್ಕಿ ಏಕಾಂತಕ್ಕೆ ಎಳೆವದು ।
ಭ್ರಾಂತಿಯಗೊಳಿಸಿ ನಿಃಶ್ಚಿಂತನ ಮಾಡೋದು ।
ದಾಂತ ಭೂತವಿದು ಶಾಂತ ಭೂತದು ।
ಅಂತಕನಾಳಿಗೆ ಅಂತಕನಾಗಿದೆ ।
ಪಿಂತೆ ಮುಂತೆ ಸರ್ವತಂತು ಬಲ್ಲದುಕಾಣೊ ।
ಹೊಂತಕಾರಿ ಇದರಂತದ ಸಂದಿಲಿ ।
ನಿಂತೀಗ ಮುಕುತಿವಂತರು ಬೊಮ್ಮಾಂಡ ।
ಅಂತ ಗಾಣರು ತಾವೆಂತುವೆಣಿಸಲು ।
ಎಂಥ ಭೂತವಿದು ಜಂತುಗಳಿಗೆ ಒಂದು ।
ತಂತಿಯನ್ನೆ ಹೂಡಿ ಗ್ರಂಥಿಯ ಬಿಗಿದು ಆ ।
ದ್ಯಂತ ಕಾಲದಲ್ಲಿ ಸಂತಿಗೆ ಬಂದವರಂತೆ ಕೊಡಲಿಟ್ಟು ।
ತಂತಿಯ ಬಗಿದಾಡುವಂಥೆ ಕಲ್ಪಿಪ ಮಾಯಾ ।
ವಂತದ ಬಲ ಬಲವಂತ ಮಹಾಭೂತ ।
ನಿಂತಲ್ಲಿ ನಿಲ್ಲದು ಚಿಂತಿಗೆ ಸಿಗದು ।
ಪಂಥ ಗಾರರಸ ವಿಜಯ ವಿಠ್ಠಲ ಭೂತ ।
ಚಿಂತಾಮಣಿಯೋ ನೆನೆವರ ಅಂತರಂಗದಲ್ಲಿ ॥೪॥

### ಆದಿ ತಾಳ

ಹೊಡೆಯೆ ಈ ಭೂತಾ ಬಿಡದು ಎಂದೆಂದಿಗೆ ।
ಕೆಡಹಲಾಹದು ಭವದ ಮಡುವಿನೊಳು ನಮ್ಮನ್ನು ।
ಒಡನೆ ತಿರುಗುವದು ಒಡಲಿಗ ಬೇಡದು ।

ತಡಿಯದ ನಾಮಾಮೃತ ಕುಡಿಸುವದೊಲಿದು ।
ಆಡಿ ಬಂದು ತೊಲಗದೆ ಹಿಡಕೊಂಡು ಇಪ್ಪದು ।
ಎಡೆಗೆಡಪ ಭೂತಕ್ಕೆ ಘುಡಿಸಿ ಹುಂಕರಿಪದು ।
ತೊಡೆ ಕಾಲು ಮತ್ತೊಂದರ ತೊಡಕಗೊಡದೆ ಬೆನ್ನು ।
ಬಿಡದೆ ತನ್ನ ಮನಿಯ ವಡಿವೆಂದು ಕಾಯುವದು ।
ನಡೆ ನುಡಿ ತಪ್ಪಿದರು ಬಡಿಬೀಸಿ ಬೀಸಾಟದೆ ।
ಕೊಡುವದು ಅಭಯದವರೊಡನೆ ಪೋಗಲೀಸಾದು ।
ಕಡು ದಯಾನಿಧಿ ಭೂತ ಪೊಡವಿಯೊಳಿದು ಕಾಣೊ ।
ಉಡಲುಂಟು ಉಣಲುಂಟು ಇಡಲುಂಟು ತೊಡಲುಂಟು ।
ಬಿಡದಿರಿ ಬಿಡದಿರಿ ಕೆಡದಿರಿ ಕೆಡದಿರಿ ।
ಸಡಲಿದ ಮ್ಯಾಲದರ ಪಿಡಿಯಲೊಶವಲ್ಲ ।
ದೃಢಮನವಮಾಡಿ ಸಂಗಡಲೆ ಕೈವಲ್ಯವ ।
ಕೊಡುವದು ತಡೆಯದಲೆ ಮೃಡಾದಿಗಳಿಗೆ ।
ಬಡವ ಬಲ್ಲಿದನೆನದೆ ಕಡೆಮಾಡುವದು ಒಮ್ಮೆ ।
ನುಡಿದರೆ ವೇಗದಿಂದ ಒಡಲೊಳಗೆ ಪೊಂದಿ ।
ಕಡಲಶಯನ ನಮ್ಮ ವಿಜಯ ವಿಠ್ಠಲಭೂತ ।
ಬಡಿಯದಿದ್ದರೆ ದುಃಖಪಡಬೇಕು ನಿತ್ಯದಲ್ಲಿ ॥೫॥

॥ ಜತೆ ॥

ಭೂತ ಸೋಕಿದವಗೆ ದೂಷಣ ಭೂಷಣವೇನು ।
ವಾತವಂದಿತ ವಿಜಯ ವಿಠ್ಠಲ ಬಲ್ಲದ್ದೇ ಸರಿ ॥೬॥

* * *

## ಸುಳಾದಿ – ೪೦

ಶ್ರೀಹರಿಯನ್ನು ಬಿಡದಿರು. ಸತ್ಯವಾಗಿ ನಿತ್ಯವಾಗಿ ಹರಿಯನ್ನು ಕೊಂಡಾಡು. ಹರಿಯೇ ಸರ್ವೋತ್ತಮನೆಂದು ಬಾಗು, ನೀಗು, ಹರಿದ್ವೇಷ ನಿತ್ಯನರಕವಾಸ ಎಂಬ ಮಾತನ್ನು ಮರೆಯದಿರು. ಮಾನವನಾಗಿ ಹರಿಸ್ಮರಣೆಯನ್ನು ಎಂದೂ ಮರೆಯಬೇಡಾ.

ಶ್ರೀ ಹರಿಯೇ, ನಮಗೆ ಸರ್ವಸ್ವ, ತನ್ನ ಪೊಂದಿದ ಜನರಿಗೆ ಸರ್ವಸ್ವವನ್ನು ಕೊಟ್ಟು ಕಾಪಾಡುವ ಕಾರುಣ್ಯ ಸ್ವಭಾವದವನು. ಪರಿಪೂರ್ಣ ಕಾಮನಾದ ಪರಮಾತ್ಮನು ತನ್ನ ನಾಮವನ್ನು ಹೊಗಳುವ ಮನುಜರನ್ನು ಸದಾ ರಕ್ಷಿಸುತ್ತಾನೆ.

ಅಹಂಕಾರವನ್ನು ಬಿಟ್ಟು ದೇಹ ದೇಹಿ ಎಲ್ಲವೂ ಮಹಾಬಲವಾದ ಶ್ರೀಹರಿಯೇ ಎಂದು ನಂಬಿ, ನತಿಸಿ, ನಡೆದು, ಗತಿಗಾಣ ಎಂಬ ವಿಷಯವನ್ನು ದಾಸರಾಯರು

**ಈ ಸುಳಾದಿಯಲ್ಲಿ ಬಹಳ ಕಳಕಳಿಯಿಂದ ಹೇಳಿದ್ದಾರೆ. ಆತ್ಮೀಯತೆಯಿಂದ ಆದೇಶಿಸಿದ್ದಾರೆ.**

**॥ ರಾಗ ಸಾರಂಗ – ಧ್ರುವ ತಾಳ ॥**

ಹರಿಯ ಬಿಡದಿರು ಸತ್ಯ ಹರುಷದಲಿ ನಿತ್ಯ ।
ಹರಿಯೆಂದು ಕೊಂಡಾಡಿ ನಿರುತಪಾಡಿ ।
ಹರಿ ಸರ್ವೋತ್ತಮ ಎಂದು ಶರಣು ಎಂದು ।
ಹರಿದಾಡಿ ಕುಣಿವರು ಗುಣವೆಣಿಸುವದು ।
ಹರಿಯನ್ನೇ ಪೊಂದುವದು ಗತಿಗೆ ಸಂದುವದು ।
ಹರಿಯಬಿಟ್ಟರೆ ಕೇಡು ನಿಮಿಷದಲ್ಲಿ ನೋಡು ।
ಹರಿಯ ಕೂಡಣ ದ್ವೇಷಿ ನಿತ್ಯ ನರಕವಾಸಿ ।
ಹರಿಗಂಡವನು ಶ್ರೀ ಹರಿಯ ಕಾಂಬವನು ।
ಹರಿಯಗಾಣದವನು ಅತಿಶುದ್ಧಶವನೂ ।
ಹರಿ ಪರಮಪುರುಷ ಪುರುಷೋತ್ತಮ ।
ನರಸಿಂಹನಾಮ ಸಿರಿ ವಿಜಯ ವಿಠ್ಠಲ ।
ಹರಿದಿಂಬ ದುರಿತ ಕರಿಗೆ ಹರಿ ಹರಿ ಕಾಣೋ ।
ಹರಿಪಾದ ನೆನವನ್ನು ಮರೆಯದಿರು ಮನುಜಾ ॥೧॥

**ಮಟ್ಟ ತಾಳ**

ಮಾತಾಪಿತಾ ಗುರು ಭ್ರಾತೃ ಬಾಂಧವನು ।
ಪ್ರೀತನ ಪ್ರಿಯನು ದಾತನು ನಾಥನು ।
ಈತನು ಕಾಣೆಲವೋ ಭೂತ ಭೂತಳಕ್ಕೆ ।
ಭೂತಭಾವನ ನಾಮ ವಿಜಯ ವಿಠ್ಠಲಾ ।
ಜ್ಯೋತಿರ್ಮಯ ವಿಖ್ಯಾತ ಮೂರುತಿಯಿದು ।
ಯಾತಕೆ ಸಂಶಯವೋ ಪಾತಕ ಪೋಗಾಡು ॥೨॥

**ರೂಪಕ ತಾಳ**

ಒಂದೊಂದು ರೋಮ ರೋಮ ಕೂಪದೊಳು ।
ಪೊಂದಿಸಿಕೊಂಡಿಪ್ಪನಾನಂತ ನಂತರ –।
ವಿಂದ ಜಾಂಡಗಳೆಲ್ಲ ಬಿಂದಗಜದ ಮ್ಯಾಲೆ ।
ಬಂದೂ ಬಿದ್ದ ತೆರದಿ ಇಂದಿರೇ ರಮಣ ।
ನಂದಾದಿಂದಾವ್ಯಾಕೃತಾಗಸಕ್ಕೆ ಸಂ–।
ಗಂಧವ ಪೂಸಿದಂತೆ ಲೇಪಿಸಿಕೊಂಡು ।
ಬಂದೆ ಮೂರುತಿಯಾಗಿ ವಿಶ್ವನೆಂದೆನಿಸಿ ಮ–।

ತ್ತೊಂದು ಮೂರುತಿಯಾಗಿ ಲಕುಮಿಗೆ ಪೊಳೆವ ।
ಅಂದವರಂಥೆ ವರವನೀವನು ಶತಾ–।
ನಂದ ವಿಜಯ ವಿಠ್ಠಲ ಕಂದರ್ಪನಯ್ಯಾ ॥೩॥

### ಝಂಪೆ ತಾಳ

ಬೊಮ್ಮನ ಕುಲದಲ್ಲಿ ಉತ್ಪತ್ಯವಾದನು ।
ತಮ್ಮಂದಿರು ಕುಂಭ ಶ್ರವಣಂ ।
ಉಮ್ಮೇಯರಸನು ಅವರ ಮನೆದೈವ ।
ಸುಮ್ಮನಸರ ಶೆರೆಹಾಕಿ ಇಪ್ಪಾ ।
ಇಮ್ಮಡಿಯಾಗಿ ಸಾಗರದ ನಡುವೆ ನಗರ ॥
ಹಮ್ಮಿಲಿ ತಿರುಗುವ ರಾವಣನ್ನ ।
ರಮ್ಮೆ ಅರಸನು ಅಣುವಾಗಿ ದನುಜನ ।
ಹಮ್ಮು ಮುರಿದು ಸುರರ ಸುಖಬಡಿಸಿದಾ ।
ಉಮ್ಮೆಯರಸನು ಪರಬೊಮ್ಮನಹುದೆಂದು ।
ಸುಮ್ಮನಿದ್ದನು ನಮಿಸಿ ವಿಜಯ ವಿಠ್ಠಲಗೆ ॥೪॥

### ತ್ರಿವಿಡಿ ತಾಳ

ಅಣುವೆಂದನಸಲ್ಲಾ ಬಲಿಯ ದಾನವ ಬೇಡಿ ।
ಕ್ಷಣದೊಳು ಗಗನಾಂಗಣಕ್ಕೆ ಬೆಳೆದು ।
ಅಣಿಚಿ ಬಲಿಯತುಳಿದು ಘನ ಉಂಗುರದಿಂದ ।
ತನುಜೆಯ ಪಡೆದಾತನು ಕಾಣಿರೋ ।
ಅಣುವೇ ಮಹತ್ತು ಘನವೆ ಅಣುವಾಗುವ ।
ಮನದಿಚ್ಛೆಲೀಲೆ ಉಪೇಂದ್ರ ವಿಜಯವಿಠ್ಠಲ ॥೫॥

### ಅಟ್ಟ ತಾಳ

ಅಂದು ಗೋಕುಲದಲ್ಲಿ ಇಂದಿರೆ ರಮಣನು ।
ಒಂದೇ ಅಸಿತ ರೋಮ ನಂದ ನಂದನನಾಗಿ ।
ಬಂದು ಪುರಂದರನ ಬಿಂಕವ ಮುರಿದ ದಿಕ್ಪಾಲರ ।
ಮುಂದುಗೆಡಿಸಿತು ಮುದದಿಂದಲಿ ಬಲಿ–।
ನಂದನ ಗೊಳಿದ ಇಂದುಶೇಖರನಾ ।
ಮಂದ ಮತಿಯಮಾಡಿ ಖಳನ ಕರವ ತರಿದ ।
ಅಂದು ದೇವರೆಂಬೊ ಹಿರಿಯರು ಆವಾವ–।
ಸಂದಿ ಬಿದ್ದರು ಕಾಣೊ ವಿಜಯ ವಿಠ್ಠಲ ಸುರ–।

ನಂದ ಮೂರುತಿ ತನ್ನ ಪೊಂದಿದ ಜನರಿಗೆ ।
ಎಂದಿಗೆ ಕೆಡದಿಪ್ಪ ನಂದವ ನೀವ ॥೬॥

### ಆದಿ ತಾಳ

ರೋಮ ರೋಮ ಪರಿಪೂರ್ಣ । ರೋಮಾಂಗ ಪರಿಪೂರ್ಣ ।
ರೋಮ ಜ್ಞಾನ ಪರಿಪೂರ್ಣ । ಶ್ರೀ ಮೂರುತಿ ಪರಿಪೂರ್ಣ ।
ಕಾಮಾ ಗುಣ ಪರಿಪೂರ್ಣ । ಸೀಮೆಯಲ್ಲಿ ಪರಿಪೂರ್ಣ ।
ಆ ಮಹಿಮ ಪರಿಪೂರ್ಣ । ಸಾಮ ಸ್ತೋಮ ಪರಿಪೂರ್ಣ ।
ಕಾಮ ನಾಮ ವಿಜಯ ವಿಠ್ಠಲ ।
ಈ ಮಹಿಯೊಳಗೆ ನಿಯಾಮಕನು ತಾನಾಗಿ ।
ನಾಮವನ್ನು ಪೊಗಳುವಂಥ ಮನುಜರನ್ನ ಪೊರೆವ ॥೭॥

### ಜತೆ

ಅಹಂಕಾರವನು ಬಿಟ್ಟು ದೇಹ ದೇಹಿ ಎಲ್ಲಾ ।
ಮಹಬಲ ವಿಜಯ ವಿಠ್ಠಲಗೆಂದು ಗತಿ ಗಾಣೂ ॥೮॥

* * *

## ಸುಳಾದಿ – ೪೧

ಪರಿಪೂರ್ಣ ಕಾಮನಾದ ಮಹಾಮಹಿಮನೇ, ಶರಣರ ಸುರತರುವಾದ ಸುರಸಾರ್ವಭೌಮನು ನೀನು. ನರರೊಳು ನಾನು ಅಧಮಾಧಮನು, ನಿರುತದಲ್ಲಿ ನಿನ್ನ ಉತ್ತಮ ಚರಣವನ್ನು ನಿಷ್ಕಾಮನೆಯಿಂದ ಭಜಿಸಿ ಕ್ಷೇಮಕರವಾದ ವರವನ್ನು ಪಡೆಯುವುದೆಂತು ಸ್ವಾಮಿ ?

ನಿತ್ಯ ತೃಪ್ತ, ನಿತ್ಯಾನಂದ, ನಿತ್ಯ ಭೂಷಿತ, ನಿರ್ಮಲ ವ್ಯಾಪಕ ನೀನು. ನಿತ್ಯ ದೈವವಾದ ಅನಿಮಿತ್ತ ಬಾಂಧವ ನೀನೇ. ಸರ್ವ ಪದಾರ್ಥಗಳಲ್ಲಿ ಒಳ ಹೊರಗೆ ವ್ಯಾಪ್ತನಾದ ನಿನ್ನನ್ನು ನಾನು ಪೂಜಿಸುವುದೆಂತು "ಎರಗಿ ಕೈಮುಗಿವೆನೊ ತರಳತನದಲಿ ನಾನು ।" ನಿನಗೆ ನೀನೇ ಪೂಜೆ ಮಾಡಿಗೊಂಬ ದೇವನೇ ಎನಗಾವ ಸಧಿಯಿಲ್ಲಾ, ನಿನ್ನ ಇಚ್ಛೆಯಾಗದಲೇ ಗತಿಯಿಲ್ಲಾ.

### ॥ ರಾಗ ಕಾಂಬೋಧಿ – ಧ್ರುವ ತಾಳ ॥

ಪರಿಪೂರ್ಣ ಕಾಮ ವಿಸ್ತರ ಮಹಿಮ ಪರಂಧಾಮ ।
ಶರಣರ ಸುರದ್ರುಮ ಸುರಸಾರ್ವಭೌಮಾ ।
ಮಿರಗುವ ನಂತರ್ಯಾಮ ಕಿರಣ ಧಿಕ್ಕರಿಸ ಪ್ರೇಮ ।

ಪರಿ ಪರಿ ಗುಣನಾಮ ಭರಿತವಾದ ರಾಮಾ ।
ದುರುಳ ದೈತ್ಯ ವಿರಾಮ ದುರಿತಾಂಬುಧಿಗೆ ಭೀಮ ।
ಪುರುಷೋತ್ತಮ ನಿಸ್ಸೀಮ ಸುರಗಣ ಲಲಾಮಾ ।
ಪರಮ ಶುದ್ಧ ನುಪಮಾ ಚರಿತ ಸುಂದರ ಶಾಮ ।
ಕರುಣಾ ಜಲಧಿ ಜನನ ಮರಣ ರಹಿತ ನೇಮಾ ।
ಹರಿ ಪರಾಪರ ಬೊಮ್ಮ ಮೆರೆವ ಜಗದುತ್ತಮ ।
ಸರಿಗಾಣೆ ನಿಗಮಾಗಮ ಸರಸಿಜಭವ ಕಾಮಾ ।
ದ್ಯರ ಪೆತ್ತ ನಿತ್ಯ ನಿಗಮಾ ಪರಿಪಾಲ ಭಕ್ತ ಸ್ತೋಮ ।
ಶರಧಿಗೆ ರಾಕಾಬ್ಜ ಸೋಮಾ ಪರಾಪರದಲ್ಲಿ ಸಮೀ ।
ಅರೆರೆ ಒಂದೊಂದು ರೋಮಾ ತೆರವಿಲ್ಲದಾಗ ಬೊಮ್ಮಾ ।
ದ್ಯರ ತುರುಗಿದ ಹೇಮಾಂಬರ ಧರಿಸಿದ ಪದುಮಾ ।
ವರನೆ ವಿಜಯ ವಿಠಲ ನರನೊಳು ನಾನಾಧಮಾ ।
ನಿರುತ ನಿನ್ನ ಉತ್ತಮಚರಣವನ್ನು ನಿಷ್ಕಾಮ ।
ಕರನಾಗಿ ಭಜಿಸಿ ಕ್ಷೇಮವರವೆಂತು ಪಡಿವೆ ಸುಧಾಮಾ ॥೧॥

**ಮಟ್ಟ ತಾಳ**

ನಿತ್ಯ ತೃಪ್ತನು ನೀನು ನಿತ್ಯಾನಂದ ನೀನು ।
ನಿತ್ಯ ಭೂಷಿತ ನೀನು, ನಿತ್ಯ ನಿರ್ಮಳ ನೀನು ।
ನಿತ್ಯ ವ್ಯಾಪಕನೀನು, ನಿತ್ಯ ನಾಟಕಿ ನೀನು ।
ನಿತ್ಯ ಮಂಗಳ ನೀನು, ನಿತ್ಯ ಭಾಗ್ಯನು ನೀನು ।
ನಿತ್ಯ ಮಾನಿತ ನೀನು, ನಿತ್ಯ ಕ್ರಿಯನು ನೀನು ।
ನಿತ್ಯ ವಸ್ತುವೆ ನೀನು, ನಿತ್ಯ ನಿತ್ಯದಲ್ಲಿ ।
ನಿತ್ಯ ಭರಿತ ನೀನು, ನಿತ್ಯ ಮೋಹನ ನೀನು ।
ನಿತ್ಯೋಪಾಸನೆ ನೀನು, ನಿತ್ಯ ಮುಕ್ತಾಶ್ರಯ ವಿಜಯ ವಿಠಲ ಸದಾ ।
ನಿತ್ಯ ದೈವವೆ ಅನಿಮಿತ್ಯ ಬಾಂಧವ ನೀನೆ ॥೨॥

**ತ್ರಿವಿಡಿ ತಾಳ**

ಸುರ ನದಿ ಪೆತ್ತವಂಗೆ ನಿನಗೀ ಮಜ್ಜನವೆ ಪಾ ।
ಲರಮನ ಮನೆ ವುಳ್ಳವಗೆ ಕ್ಷೀರಾಭಿಕ್ಷೇಕವೆ ।
ಸರಸಿಜಕುಸುಮ ಶ್ರೀ ತುಲಸಿ ಪಡೆದ ದೈವವೆ ।
ಧರೆಯೊಳಗಿದ್ದ ಕುಸುಮಾದಿ ನಿನಗೆ ಮೆಚ್ಚಿ ।
ಸಿರಿ ಉರದಲ್ಲಿ ಗಂಧ ಪರಿಮಳ ಎಸೆವನೆ ।
ಪರಿ ಪರಿ ಪರಿಮಳ ಗಂಧದಿಂದೇನಯ್ಯಾ ।

ಪರಮೇಷ್ಠಿಯಿಂದ ರ್ಘ್ಯ ಕೈಕೊಂಡ ನೆ ನಿನ್ನ ।
ಚರಣ ತೊಳೆದು ಸುಖ ಬಡಿಸಲಾಪೆನೆ ನಾನು ।
ಎರಡು ಕಂಗಳಿಂದ ಲೋಕ ಬೆಳಗುತಿಪ್ಪನೆ ।
ವಿರಚಿಸಿದ ದೀಪದಿಂದ ವೆಗ್ಗಳವೇನೊ ನಿನಗೆ ।
ಕರುಣಿಸಿ ದರೌಪದಿಗೆ ವಸನಗಳಿತ್ತ ವಂಗೆ ।
ನರನಾನು ನಿನಗೊಂದು ವಸ್ತ್ರ ಈಯಬಲ್ಲೆನೆ ।
ವರ ಪ್ರಳಯದಲಿ ಸರ್ವವು ದಹಿಸುವನೆ ।
ಹಿರಿಯ ಧೂಪಾರತಿಯು ಎತ್ತುವದು ಘನವೆ ।
ಕರದೊಳು ಮುನಿಗೆ ರಸಾಯನ ಉಣಿಪಂಗೆ ।
ತರಿಸಿ ತೋರಿಸಿದ ಪದಾರ್ಥ ದಿಂದೇನಯ್ಯಾ ।
ಎರಡೈದು ಸಾಗರ ಪೋಷಣ ಗೊಂಬವಗೆ ।
ಎರದ ನೀರಿನಿಂದ ಪೋಷಣೆ ನಿನಗೇನೊ ।
ಸರಿಗಾಣೆ ನಿನ್ನ ನಖದ ಕಾಂತಿಗೆ ಎಲ್ಲೀ ।
ಮರುಳೆ ಎತ್ತುವ ಮಂಗಳಾರುತಿಯ ಬೆಳಗ್ಯಾಕೆ ।
ಹರ ಸಖ ಕುಬೇರ ನಿನ್ನವನಾಗಿರೇ ।
ಬರಿದೆ ಯಲ್ಲದೆ ಎನ್ನ ಸುವರ್ಣ ಪುಷ್ಪವು ।
ಪರಿವಾರವೆಲ್ಲ ಸರ್ವ ಸುರರಾದಿಗಳು ಸಲಿಯೆ ।
ವರ ಮಂದ ಮತಿಯಿಂದ ನಿನಗೇನು ವಾಲಗವೆ ।
ಗರುಡ ವಾಹನ ನಮ್ಮ ವಿಜಯವಿಠ್ಠಲರೇಯಾ ।
ಎರಗಿ ಕೈಮುಗಿವೆನೊ ತರುಳ ತನದಲಿ ನಾನು ॥೩॥

**ಅಟ್ಟ ತಾಳ**

ನಿಗಮಗಳಿಗೆ ನಿಲುಕದಿಪ್ಪ ಮನದ ದೈವ ।
ಅಗಣಿತ ಸ್ತೋತ್ರಗಳಿಂದ ಹೀಯಾಳಿಕೆ ।
ಝುಗಝುಗಿಪ ಭೂಷಣ ಧರಿಸಿದ ದೈವನೆ ।
ಮಿಗಿಲೇನೊ ನಿನಗೆ ಈ ಲೋಕ ರಾಭರಣವು ।
ಖಗರಾಜ ಉರಗ ವಾಹನ ಹಾಸಿಕೆ ಇರೆ ।
ಮಗುಳೆ ನಾ ನುಡಿದ ವಾಹನ ಹಾಸಿಕೆ ಬೇಕೆ ।
ಬಗೆ ಬಗೆಯ ಗಾಯನವ ನಾರದಾದ್ಯರು ಪಾಡ ।
ಪೊಗಳ ಬಲ್ಲೆ ನೆ ನಿನ್ನ ಬಲುಪರಿ ಮಹಿಮೆಯ ।
ಸುಗುಣ ಸಾಹಸ ಮಲ್ಲ ವಿಜಯ ವಿಠ್ಠಲರೇಯಾ ।
ಗಗನ ಮಣಿಯಂತೆ ಪೊಳೆದ ಅನಾದಿ ಕರ್ತಾ ॥೪॥

**ಆದಿ ತಾಳ**

ಸಕಲ ಪೂಜೆಯು ಈ ಪರಿ ಇರಲು ಮತ್ತೆ ।
ಲಕುಮಿ ಪೂಜಿಸುವಳಾಲಕುಮಿಗೆ ನೀನೆ ಪ್ರೇ ।
ರಕ ನಾಗಿ ಒಳಗೆ ನಿಂದು ನಿನಗೆ ನೀನೆ ಅ ।
ರ್ಚಕನಾಗಿ ಅನುಗಾಲ ಸುಖಿಸುವ ಹೆದ್ದೈವ ।
ಭಕುತರಿಂದಲಿ ನಿನಗೆ ಆವದೊ ಪರಿಪೂರ್ಣಾ ।
ಮುಕುತಾ ಮುಕುತ ರೊಳು ಎಣಿಸಿ ಗುಣಿಸಿದರು ।
ಭಕುತರೊಳಗೆ ನಾನೊಬ್ಬ ಅಲ್ಪರಿಗೆ ಅಲ್ಪರಿವೆನಯ್ಯಾ ।
ಅಕುಟಿಲನಾಗಿ ನಿನ್ನ ಮೆಚ್ಚಿಸಬಲ್ಲೆನೆ ।
ಅಖಿಳ ಜೀವರೊಳು ವ್ಯಾನಾಗಿ ಇದ್ದು ।
ಸಖನಾಗಿ ಪ್ರತಿದಿನ ಪಾಲಿಪ ಪರಮಾತ್ಮ ।
ಲಕುಮಿ ಮಿಕ್ಕಾದ ತಾರತಮ್ಯ ಭಾವದಿಂದ ।
ಭಕ್ತರರ್ಚನೆ ಮಾಡೆ ಲೇಶ ಬೇಕಾದುದಿಲ್ಲಾ ।
ಸಕಲಾ ಭರಣ ವಿಟ್ಟು ಮರುಳೆ ಮರುಳೆ ತನ್ನ ।
ನಖಶಿಖ ಪರಿಯಂತ ನಸುನಗೆಯಲಿ ನಿತ್ಯ ।
ಮುಕುರ ದೊಳಗೆ ಪ್ರತಿಬಿಂಬ ನೋಡಿ ಕೊಳುತ ।
ಸುಖವ ಬಟ್ಟಂತೆ ನಮಗಲ್ಲದೇ ನಿನಗೇನು ।
ಲಕುಮಿ ವಲ್ಲಭ ನಮ್ಮ ವಿಜಯ ವಿಠ್ಠಲರೇಯಾ ।
ಭಕುತರಿಗೆ ನಿನ್ನ ಇಚ್ಛೆಯಾಗದಲೆ ಗತಿಯಿಲ್ಲಾ ॥೫॥

**ಜತೆ**

ನಿನಗೆ ನೀನೆ ಪೂಜೆ ಮಾಡಿಕೊಂಡ ದೇವ ।
ಎನಗಾವ ಸಥಿಯಿಲ್ಲಾ ವಿಜಯ ವಿಠಲ ವೊಲಿಯೋ ॥೬॥

* * *

## ೩–ಶ್ರೀಹರಿಯ ಭಕ್ತ ವಾತ್ಸಲ್ಯತೆ

ಈ ಜಗಜ್ಜನ್ಮಾದಿಗಳನ್ನು ತನ್ನ ಭಕುತರ ಉದ್ಧಾರಾರ್ಥವಾಗಿಯೇ ಪರಮಾತ್ಮ ಸೃಷ್ಟಿಸಿದ್ದಾನೆ. ಭಕುತಿಯನ್ನು ಕಲ್ಪಿಸಿ ಭಕುತರಾಧೀನನಾಗಿದ್ದಾನೆ.

ಜೀವನ ಸ್ವರೂಪದೇಹದಲ್ಲಿ ತದ್ರೂಪ, ತನ್ನಾಮಕ ತತ್ ಶಬ್ದವಾಚ್ಯನಾದ ಬಿಂಬರೂಪಿ ಶ್ರೀಹರಿಯ ಧ್ಯಾನವನ್ನು ಪ್ರತಿಯೊಂದು ಕರ್ಮದಲ್ಲಿ ಮಾಡಬೇಕು. ಇದೇ ಬಿಂಬ ಕ್ರಿಯಾನುಸಂಧಾನ. ಬಿಂಬ ಸ್ವತಂತ್ರ, ಪ್ರತಿಬಿಂಬ ಅಸ್ವತಂತ್ರ ಎಂಬ ಭಾವ ಸದಾ ಜಾಗ್ರತವಾಗಿರಬೇಕು.

ಸಕಲ ದುರಿತಗಳಿಗೆ ಸಂಸಾರವೇ ಮೂಲಸ್ಥಾನ ಆಶ್ರಯವಾದದ್ದು. ಇದು ಹೋಗುವುದಕ್ಕೆ ಅಹಂಮಮತಾ ತ್ಯಾಗಪೂರ್ವಕ ಉಪಾಸನೆ ಮಾಡಬೇಕು. ಇದು ಬರದ ಹೊರತು ದುರಿತಗಳು ದೂರಾಗವು.

ಪರಮಾತ್ಮನು ಪರಮ ಕರುಣಾಳು, ಭಕ್ತವತ್ಸಲ. ಅಪರಾಧಗಳೇನಿದ್ದರೂ ಮನ್ನಿಸಿ ತನ್ನವರನ್ನು ಕಾಪಾಡುತ್ತಾನೆ. ಈ ದಾರಢ್ಯವಾದ ನಂಬಿಕೆಯೇ ಭವಾಖ್ಯ ಸಾಗರಕ್ಕೆ ತಾರಕ.

ಶ್ರೀಹರಿಯ ಭಕ್ತವಾತ್ಸಲ್ಯತೆಯ ವೈವಿಧ್ಯಪೂರ್ಣವಾದ ಸುಳಾದಿಗಳನ್ನು ಈ ಭಾಗದಲ್ಲಿ ಕಾಣುತ್ತೇವೆ.

* * *

## ಸುಳಾದಿ – ೪೨

ಶ್ರೀಹರಿಯು ಸರ್ವತಂತ್ರ ಸ್ವತಂತ್ರನಾದರೂ ಭಕ್ತರಾಧೀನ ಎಂಬ ಅವನ ಮಹಾಮಹಿಮೆಯ ಸ್ತೋತ್ರವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.

ಸಚ್ಚಿದಾನಂದಾತ್ಮಕ, ಸರ್ವೋತ್ತಮನಾದ ಅಚ್ಯುತಾನಂದ ಕೃಷ್ಣ, ಗೋವಿಂದ ಮಾಧವನು, ನಿಚ್ಚ ಭಕ್ತರ ಮನೋಹರನಾದ ವಿಶ್ವಂಭರನು. ಧ್ರುವ, ಮುಚಕುಂದ ಮುಂತಾದ ಭಕುತರ ಬಂಟನೆನಿಸಿದನು. ನಂಬಿದ ದಾಸರ ಹೆಚ್ಚಿನ ಹೆದ್ದೈವನಿವನು.

ತನ್ನ ಭಕ್ತರತ್ತ ನೋವು, ಆಪತ್ತು, ಅಪವಾದ, ಕೇಡು, ಬಂಧ, ನರಕ ಮುಂತಾದವು ಇಣಕದಂತೆ ಕ್ಷಣಬಿಡದೇ ಕಾಪಾಡುವುದೇ ಇವನ ಬಿರುದು.

ಭಕುತರು ಏನು ಮಾಡಿದರೂ ಇವನಿಗೆ ಸಮ್ಮತ. ಭಕುತಿ ಪಾಶಕೆ ವಶನಾಗುವ ಭಕ್ತವತ್ಸಲನಾದ ಪರಮಾತ್ಮನಿಗೆ ನಮೋ ನಮಃ.

ಭಕುತರ ಇಚ್ಛೆಯಂಥೆ ನಡೆಸುವ ಮಹಾಮಹಿಮನಾದ, ನಿಖಿಳ ಜೀವರ ಭಿನ್ನವಾದ ಪರಮಾತ್ಮನ ಅಡಿದಾವರೆಗಳನ್ನು ಎಡೆಬಿಡದೆ ತುತಿಸುವವರೇ ಧನ್ಯರು.

॥ ರಾಗ ಪಂತುರಾವಳಿ – ಧ್ರುವ ತಾಳ ॥

ಅಚ್ಯುತಾನಂತ ಕೃಷ್ಣ ಗೋವಿಂದ ಮಾಧವ ।
ಸಚ್ಚಿದಾನಂದಾತ್ಮಕ ಸರ್ವೋತ್ತಮಾ ।
ಸುಚ್ಚರಿತರಂಗಾ ಕಾಳಿಂಗ ಮದಭಂಗಾ ।
ನಿಚ್ಚ ಭಕ್ತರ ಮನೋಹರಾ ವಿಶ್ವಂಭರಾ ।
ಅಚ್ಚಾಟಾಡುವ ದೈವ ಶ್ರೀ ವಾಸುದೇವಾ ।
ಅಚ್ಚಾ ಕೌಸ್ತುಭಹಾರ ಅಸುರ ಕುಲ ಕುಠಾರಾ ।
ಪುಚ್ಛ ಭಾಗದಲ್ಲಿ ಭಕ್ತನ್ನ ಇಟ್ಟ ಧಿಟ್ಟಾ ।
ಎಚ್ಚರವುಳ್ಳ ಪುರುಷಾ ಯಾದ ವೇಶಾ ।

ಮೆಚ್ಚಿದೆ ನಾನು ನಿನ್ನ ಬಲು ಪ್ರತಾಪವ ಕೇಳಿ ।
ಚಚ್ಚಾರದಲ್ಲಿ ಸಲಹೋ ಚಂದ್ರವದನಾ ।
ಮುಚ್ಚು ಮರೆ ಯಾತಕೆ ಮುಚಕುಂದ ನೃಪವರದ ।
ಮೆಚ್ಚುಗೊಳಿಸಿದವರ ನಿರು ಕಾಯ್ವದ್ವಾರಾ ।
ನೆಚ್ಚಿದವರ ಬಂಟಾ ನೆನಿಪಾ ವೈ ಕುಂಠಾ ।
ಹೆಚ್ಚಿನ ಹೆದ್ದೆ ವಿಜಯ ವಿಠ್ಠಲರೇಯಾ ।
ಎಚ್ಚ ಕನೊ ನೀನು ನಂಬಿದ ದಾಸರಿಗೆ ॥೧॥

**ಮಟ್ಟ ತಾಳ**

ಭಕುತರಿಗೆ ನೋವು ಭಕುತರಿಗಾಪತ್ತು ।
ಭಕುತರಿಗೆ ಪವಾದಾ ಭಕುತರಿಗೆ ಕೇಡು ।
ಭಕುತರಿಗೆ ಬಂಧಾ ಭಕುತರಿಗೆ ನರಕಾ ।
ಭಕುತರಿಗೆ ವ್ಯಾಧಿ ಭಕುತರಿಗೆ ದುಃಖಾ ।
ನಿಕ ರಂಗಳು ಹಣಿಕಿ ನೋಡದಂತೆ ।
ಅಖಿಳ ಜನ್ಮಾದಿ ಪಾಲಕ ನೀನೆ ಜೀಯ್ಯಾ ।
ಅಯ್ಯಾ ಅಯ್ಯಾ ಅಯ್ಯೊಯೊ ಹೊಹೊಹೊಹೊ ನಿನ್ನ ಬಿರಿದು ।
ಸಕಲೇಶ್ವರ ನಮ್ಮ ವಿಜಯ ವಿಠ್ಠಲ ನೀನೆ ।
ಮುಕುತೇಶ್ವರ ನಿನ್ನ ಮೂಲವೆ ತಿಳಿಯಾದೊ ॥೨॥

**ತ್ರಿವಿಡಿ ತಾಳ**

ಭಕುತರಾಡಿದ್ದೆ ಆಟಾ ಭಕುತರು ಮಾಡಿದ್ದೆ ಮಾಟಾ ।
ಭಕುತರು ನೋಡಿದ್ದೆ ನೋಟಾ ಭಕುತರು ಕಾಡಿದ್ದೆ ಕಾಟಾ ।
ಭಕುತರು ಉಂಡದ್ದೆ ಊಟಾ ಭಕತರು ಕೂಡಿದ್ದೆ ಕೂಟಾ ।
ಭಕುತರು ಓಡಿದ್ದ ಓಟಾ ಭಕುತರಂದದೆ ನೀಟಾ ।
ಭಕುತರ ವಶನೆ ಭಕುತರಾಧೀನನೇ ।
ಭಕುತರಿಗಾಗಿ ಬಾಳುವ ದೈವವೇ ।
ಭಕುತರ ಬಾಯಿಂದ ಪೊರಟಾಕ್ಷಣ ನುಡಿ ।
ಅಕಟಾ ಲಾಲಿಸುತಿಪ್ಪಾ ಓವಿಗನೇ ।
ಭಕುತರು ಮಾಡುವ ಚರಿತೆಯನ್ನು ನೋಡಿ ।
ಸುಖಬಡಿಸಿ ಹಿಗ್ಗಿ ನಗುವ ದಾತಾರ ದಾತಾ ।
ಭಕುತರು ಕೊಟ್ಟ ಮಾತಿಗೆ ಸಲೆ ಎನುತಲಿ ।
ಮುಕುಟವ ತೂಗುವ ಅ ಪ್ರಾಕೃತನೇ ।
ಭಕುತಿ ಪಾಶಕೆ ಬಪ್ಪ ವಿಜಯ ವಿಠ್ಠಲ ನಿನ್ನ ।
ಭಕುತವತ್ಸಲ ತನಕೆ ನಮೊ ನಮೊ ಎಂಬೆ ॥೩॥

**ಅಟ್ಟ ತಾಳ**

ಹಿಡಿ ಹೊನ್ನು ಉಂಬಾ ಸಂಬಳಿಗನು ಕಾಯ್ದಂತೆ ।
ಬಿಡದೆ ಭಕುತರಿಂದ ಬಂದಡಿ ತೊಲಗದೆ ।
ಎಡಬಲ ಹಿಂಭಾಗ ಮುಂಬಿನಲ್ಲಿ ನಿಂದು ।
ಹಿಡಿದಸಿ ಚಕ್ರ ಗದಾ ಚಾಪ ಶರದಿಂದ ।
ವಡವಡನೆ ಇದ್ದು ಕಾಲಕಾಲಕೆ ಭಯ ।
ತೊಡರು ಹೊರಸದಂತೆ ಸಾಕುವ ಮಹಾಧೀರ ।
ಬಿಡನು ಭಕ್ತರನೆಂದೂ ಮೊದಲೇ ಬಿರಿದು ಉಂಟು ।
ನುಡಿ ಒಮ್ಮ್ಯಾದರು ಧನ್ಯನಾಗಲಿಬೇಕು ।
ಕಡು ತೇಜೋಮಯರೂಪ ವಿಜಯವಿಠ್ಠಲ ನಿನ್ನ ।
ಅಡಿಗಳು ತುತಿಪರು ಅವರೇ ಧನ್ಯರು ಕಾಣೋ ॥೪॥

**ಆದಿ ತಾಳ**

ಭಕುತರಿಗಾಗಿ ನೀ ಅವತಾರ ಧರಿಸಿದೆ ।
ಭಕುತರಿಗಾಗಿ ನೀ ಚೌರ್ಯನೆಂದೆನಿಸಿದೆ ।
ಭಕುತರಿಗಾಗಿ ನೀ ಜಾರನೆಂದೆನಿಸಿದೆ ।
ಭಕುತರಿಗಾಗಿ ನೀ ಲೋಕವ ತಿರಿಗಿದೆ ।
ಭಕುತರೇ ಎಂದಿಗೂ ನಿನಗೆ ಪಂಚಪ್ರಾಣಾ ।
ಭಕುತರ ಕೈಯಿಂದ ಸೃಷ್ಟಿಯ ಮಾಳಿಪೆ ।
ಭಕುತರಿಗೆ ಸೂರೆ ನಿನ್ನ ಪರಾಕ್ರಮ ।
ಭಕುತರಿಗೆ ನೀನೆ ನಿನಗೆ ಭಕುತರೂ ।
ಭಕುತರು ದೋಷಮಾಡಲು ಪುಣ್ಯವೆನಿಸುವೆ ।
ಭಕುತರ ಪರಿಪಾಲಿ ವಿಜಯವಿಠ್ಠಲ ನಿನ್ನ ।
ಭಕುತರಿಗಿದ್ದ ಸ್ವಾತಂತ್ರ್ಯವಾರಿಗೆ ಇಲ್ಲಾ ॥೫॥

**ಜತೆ**

ಭಕುತರಿಚ್ಛೆಯಂತೆ ನಡೆಸುವ ಮಹಾಮಹಿಮಾ ।
ಅಖಿಳ ಜೀವರ ಭಿನ್ನ ವಿಜಯ ವಿಠ್ಠಲ ನೀನೇ ॥೬॥

* * *

## ಸುಳಾದಿ – ೪೩

**ಆಪತ್ತು, ಅಪಮೃತ್ಯು, ಕ್ಲೇಶ, ಭಯ, ಪೀಡೆ, ಅಧರ್ಮ, ದೋಷ ಮುಂತಾದವುಗಳು ತನ್ನ ಭಕ್ತರನ್ನು ಕಾಡದಂತೆ ಪರಮಾತ್ಮನು ಕಾಪಾಡುತ್ತಾನೆ.**

ಭಕುತಿ ಪಾಶಕೆ ಶಿಲುಕಿ ಬಂದೊದಗುತ್ತಾನೆ. ಇವನ ಭಕುತಿ ದೊರೆಯದ ತನಕ ಕರ್ಮ ಹಿಂದಾಗದು ಹಿಂಗದು.

ಈ ಜಗಜ್ಜನ್ಮಾದಿಗಳನ್ನು ತನ್ನ ಭಕುತರ ಉದ್ಧಾರಾರ್ಥವಾಗಿಯೇ ಪರಮಾತ್ಮ ಸೃಷ್ಟಿಸಿದ್ದಾನೆ. ಭಕುತಿಯನ್ನು ಕಲ್ಪಿಸಿ ಭಕುತಗಧೀನನಾಗಿದ್ದಾನೆ. ಭಕುತರ ಉದ್ಧಾರಕ್ಕಾಗಿಯೆ ಪರಮಾತ್ಮ ಇಷ್ಟೊಂದು ಪಾಟುಪಡುತ್ತಿದ್ದಾನೆ.

ತಂದೆ ತಾಯಿ, ಬಂಧು ಬಳಗ ಸಕಲವೂ ತಾನಾಗಿ ಭಕ್ತರನ್ನು ಸದಾಕಾಲ ಕಾಪಾಡುವ, ಭಕುತರ ಮನೋಹರನಾದ ಸೌಭಾಗ್ಯವಂತನಾದ, ವಿರಕ್ತರ ಪ್ರಿಯನಾದ ಭಗವಂತನ ಸ್ತೋತ್ರದ ಬಗೆಯನ್ನು ಇಲ್ಲಿ ಕಾಣುತ್ತೇವೆ.

**॥ ರಾಗ ಕೇದಾರಗೌಳ – ಧ್ರುವ ತಾಳ ॥**

ಭಕುತರಿಗಾಪತ್ತು ಬರಲಿಸಾ ಬರಲಿಸಾ ।
ಭಕುತರಿಗಪಮೃತ್ಯು ಬರಲಿಸಾ ಬರಲಿಸಾ ।
ಭಕುತರಿಗೆ ಕ್ಲೇಶ ಬರಲಿಸಾ ಬರಲಿಸಾ ।
ಭಕುತರಿಗೆ ಭಯ ಬರಲಿಸಾ ಬರಲಿಸಾ ।
ಭಕುತರಿಗೆ ಪೀಡೆ ಬರಲಿಸಾ ಬರಲಿಸಾ ।
ಭಕುತರಿಗೆ ದೋಷಾ ಬರಲಿಸಾ ಬರಲಿಸಾ ।
ಭಕುತರಿಗಾಗಿ ಸಮೀಪಾ ದೂರದಿಂದ ।
ಭಕುತಿ ಪಾಶಕೆ ಶಿಲ್ಕಿ ಬಂದೊದಗುವ ದೇವಾ ।
ಭಕುತರಿಗೆ ಪಂಚಪ್ರಾಣ ನಾಯಕಾ ।
ಭಕುತರಪೇಕ್ಷೆಯನ್ನು ಸಲಿಸಿ ಸೋತುಬಿರುವಾ ।
ಭಕುತೇಶ ಮುಕುತೇಶ ಮುಕ್ತಾಮುಕ್ತನಿಯಾಮಕ ।
ಭಕುತರಿಗೊಲಿವದು ಆವಗಂಭೀರತನವೋ ।
ಭಕುತರು ಆತನಿಗೆ ಏನುತಂದಿತ್ತರು ಕಾಣೊ ।
ಭಕುತರನ ಕಾಣದೆ ಇರುತಿಪ್ಪ ವಿಶ್ವರೂಪಾ ।
ಭಕುತರನ ಪಕ್ಕೆಯೊಳಗಿಟ್ಟು ಸಾಕುವ ಗುಣನಿಧಿ ।
ಭಕುತರನು ಪಾಲಿಪುದು ಆತಗೇನಾನಂದವೊ ।
ಭಕುತರು ಹೇಳಿದಂತೆ ಕೇಳಿಕೊಂಡು ಇಪ್ಪಾ ।
ಶಕುತನೆ ನಿಸ್ಸಂಗಾ ಇಂದ್ರಿಯಗೋಚರಾ ।
ಸಕಲೈಶ್ವರ್ಯಾತಗೆ ಪರಿಪೂರ್ಣವಾಗಿರೆ ನಾ–।
ಟಕವಾಡುವಾ ತನ್ನ ನಿಜಸ್ವಭಾವವೊ ।
ಭಕುತರನ ಸಲೆಬಿಟ್ಟು ಅವರಂತೆ ಆಡೂವಾ ।
ಅಕಳಂಕ ಅಖಂಡ ವ್ಯಾಪ್ತದೀಪ್ತಾ ।
ಅಖಿಳಾ ಬೊಮ್ಮಾದ್ಯರು ಅನಂತಾನಂ–।

ತ ಕಲ್ಪಕೆ ತೊಲಗದೆ ತನ್ನ ಒಂದು ರೋಮದೊಳು ಎ–।
ಣಿಕೆ ಅನಂತಾನಂತಾಂಶಾ ಮಾಡಲೀಪರಿ ಅ–।
ಧಿಕವ ಗುಣಿಸಲು ಅಂಥಾ ದಂಥಾ ದಂಥಾದೆ ।
ಉಕುತಿ ನಿಲುವಾಪರಿಯಂತೆ ಯೋಚಿಸಿ ಅ–।
ದಕೆ ಏಕ ಪ್ರದೇಶದಲ್ಲಿ ಹತ್ತಿಕೊಂಡು ತಮ್ಮ ।
ಸುಖಸಾಂದ್ರದಿಂದ ನಾನಾ ರೂಪವಧರಿಸಿ ಬಾ–।
ಧಕವಿಲ್ಲದಂತೆ ವಿಸ್ತರಾ ಸಂಚರಿಪರೂ ।
ಭಕುತರು ಈ ಪರಿ ತನ್ನೊಳಗಿರಲಿಕ್ಕೆ ।
ಮಕ್ಕಳಾಟಿಕೆಯಂತೆ ಮಾಯಾವ ಹಚ್ಚಿಕೊಂಡು ।
ಅಕುಟಿಲ ದೈವವೆ ಅನಾದಿಯಿಂದಲಿ ।
ಭಕುತರಿಗೆ ಬಂಟನಗಿ ಇಪ್ಪದು ಇದೇನು ಸೋಗು ।
ಪ್ರಕಟ ಅಪ್ರಕಟ ಆತನ ಮುಕುತಿಗೆ ದೇ=।
ವಕ್ಕಳೆಲ್ಲ ಎದುರಿಲ್ಲಾ ಎಂದೆಂದಿಗೆ ನೋಡೆ ।
ಭಕುತರಿಗಾಗಿ ನೀಚ ವೃತ್ತಿ ಕೈಕೊಂಡು ।
ವಿಕುತ ಸಖ ನಾಮನಿಗೆ ಸಮಸ್ತಲೋಕ ಪಾ–।
ಲಕ ಬಂದು ಮನ್ನಿಸಿ ವಂದನ ಕೊಂಡಂತೆ ।
ಭಕುತ ಜನಕೆ ತಾನೆ ಕೈವಶವೋ ।
ಭಕುತರೆಲ್ಲಿದ್ದರಲ್ಲೆ ಮಂಗಳಪ್ರದನಾಗಿ ।
ನಿಖಿಳಕಾಲಕೆ ನಿರ್ದುಃಖಿ ಎನಿಸಿಕೊಂಬ ।
ಭಕುತರ ಆರಾಭಾರ ವೊಹಿಸುವ ಹರಿ ಚನ್ನಾಗಿ ।
ಭಕುತರ ಭಾಗ್ಯವೆಂತೋ ಅಹಾಃಹಾ ಹೊಹೊಹೊ ।
ಭಕುತರಾಶೇಷವನ್ನು ಕೊಂಬ ವಿಚಿತ್ರ ಪುರುಷಾ ।
ಭಕುತರ ವಿಶೇಷವೇನಯ್ಯಾ ಲಕುಮಿ ಇರಲು ।
ಭಕುತರು ತನ್ನ ಉದ್ಧಾರಕರ್ತರೇನೊ ।
ಭಕುತರು ನಾನಾಪರಿ ಅಪರಾಧನೆಸಗೆ ಪಾ–।
ಪಕೆ ಹಾಕದಲೆ ತನ್ನ ಕೂಡಾಡಿಸುವಾ ।
ಭಕುತಿಗೆ ಸಾಧ್ಯವಾದಂತೆ ಸರ್ವೋತ್ತಮಾ ।
ಮಖ ತೀರ್ಥಯಾತ್ರಿ ಕನ್ಯಾಕಾಂಚನ ದಾನಕೊಟ್ಟ – ।
ದಕೆ ವೊಲಿಯನು ಕಾಣೋ ಕೇವಲ ರಹಸ್ಯ ।
ಭಕುತರಿಗೆ ಸ್ವಾಮಿ ಸರ್ವದಾ ಸುಲಭಾ ।
ವಿಕಳಮಾನವ ಇಂಥ ಅತಿಶಯಬಿಟ್ಟು ಲೌ–
ಕಿಕವೆಲ್ಲಾ ಬ್ರಹ್ಮಸ್ವರೂಪವೆಂದು ವೈಕಾ–।
ರಿಕ ಮಾರ್ಗಕಾಣದವಿ ಅವನೆ ಮಾಳೆಸೋಗನೊ ।

ರಕ್ಕಸ ವೇಷದವ ಬಹು ಜನುಮಜನುಮದಾಗೆ ।
ಕಕುಲಾತಿಯಿಂದ ಪೋಗಿ ಅನುಸರಿಸಿದರೆ ಸುಜನಾ ।
ಭಕುತ ವತ್ಸಲ ನಮ್ಮ ವಿಜಯ ವಿಠಲನ ಪಾದ ।
ಭಕುತಿ ದೊರೆಯದ ತನಕ ಕರ್ಮ ಹಿಂದಾಗದು ॥೧॥

### ಮಟ್ಟ ತಾಳ

ಭಕುತರಿಗಾಗಿ ಮಹಾತತ್ವ ಮೊದಲಾದ ।
ಸಕಲ ತತ್ವಂಗಳು ಪುಟ್ಟಿಸಿದನು ಗಡಾ ।
ಭಕುತರಿಗಾಗಿ ಚತುರ್ದಶ ಲೋಕವನು ।
ಅಕಟಕಟಾ ವೇಗಮಾಡಿದಾ ನೋಡುಗಡಾ ।
ಭಕುತರಿಗಾಗಿ ಸಪುತ ಶರಧಿ ಉ–
ದಕ ಪೂರಿತವಾಗಿ ಸೃಜಿಸಿದನುಗಡಾ ।
ಭಕುತರಿಗಾಗಿ ಮೇರು ಮಂದಾರ ಶೈಲಾ ।
ದಿಕ್ಕು ದೇಶಕೋಶ ಮಾಡಿ ಇಟ್ಟನುಗಡಾ ।
ಭಕುತರಿಗಾಗಿ ತೀರ್ಥ ಪುಣ್ಯಕ್ಷೇತ್ರ ।
ಸಕಲ ಪದಾರ್ಥಗಳು ಇಡಲಾಪಟ್ಟನಂಗಡಾ ।
ಭಕುತರಿಗಾಗಿ ಏನು ಬೇಡಿದದ್ದು।
ಭಕುತಿಯ ಕಲ್ಪಿಸಿ ಧರಿಗೆ ತುಂಬಿದಗಡಾ ।
ಭಕುತರಾಧೀನ ನಮ್ಮ ವಿಜಯ ವಿಠ್ಠಲ ತನ್ನ ।
ಭಕುತರಿಗಾಗಿ ನಾನಾ ಪಾಟುಬಡುವಾ ॥೨॥

### ತ್ರಿವಿಡಿ ತಾಳ

ತಂದೆಯಾಗಿ ತಾಯಿಯಂದದಿ ಸಾಕುವ ।
ಬಂಧೂ ಬಳಗವಾಗಿ ಸಾಕುವ ಸಾಕುವಾ ।
ಹಿಂದೆ ಮುಂದೆ ಇದ್ದು ಸಾಕುವ ಸಾಕುವಾ ।
ಕಂದನಾಗಿ ಬಿಡದೆ ಸಾಕುವ ಮುಖ್ಯ ಸಂ–।
ಬಂಧಿಗ ತಾನಾಗಿ ಸಾಕುವಾ ಸಾಕುವಾ ।
ಕುಂದ ಗೊಡದೆ ವೊಲಿದು ಸಾಕುವಾ ಸಾಕುವಾ ।
ಸಂದಣಿಯೊಳಗಿರಲು ಸಾಕುವಾ ಸಾಕುವಾ ।
ಸಂದಣಿಯೊಳಗಿರಲು ಕರುಣಾದಿಂದಲಿ ವೊದಗಿ ।
ಬಂದು ಸಾಕುವಾ ಬಹು ಚತುರತನದಲ್ಲಿ ।
ನಿಂದಲ್ಲಿ ಕುಳಿತಲ್ಲಿ ಮಲಗಿ ಏಳುವಲ್ಲಿ ।
ಒಂದು ಕ್ಷಣ ಬಿಟ್ಟು ಇರದೆ ಸಾಕುವನಯ್ಯಾ ।

ಎಂದೆಂದಿಗೆ ಶರಣ ಬೇಡಿದಭಿಷ್ಟೆಯನ್ನು ।
ತಂದುಕೊಡುವಾ ತವಕದಿಂದಲಿ ಮೀರದಲೆ ।
ಇಂದಿರಾರಮಣನ ಕರುಣಾತನಕೆ ಏ-।
ನಂದು ಪೇಳಲಿ ಮನಸು ಸಾಲದು ಸಾಲದು ।
ನಂದು ಬೇಕಾದರೆ ಆ ತನ್ನ ಪಾದವನ್ನು ।
ಪೊಂದಿರೋ ಪುಶಿಯಲ್ಲಿ ಪುಣ್ಯವೇ ಫಲಿಸೋದು ।
ಪುಣ್ಯಾತ್ಮಕ ದೇವಾ ವಿಜಯ ವಿಠಲರೇಯಾ ।
ಭಿನ್ನಾಂಶನಾಗಿ ನಮ್ಮೊಳಗಿಪ್ಪ ಜಗದಪ್ಪ ॥೩॥

**ಅಟ್ಟ ತಾಳ**

ದೇವ ದೇವೇಶನು ತನ್ನ ಇಂದ್ರಿಯಗಳೆಲ್ಲಾ ।
ಜೀವರ ಸ್ವರೂಪೇಂದ್ರಿಯೊಳಿಗಿಟ್ಟು ತ-।
ದ್ಭಾವ ನಡೆಸುವ ನಿರ್ದೋಷನಾಗಿ ।
ತ್ರಿವಿಧ ಗುಣದಲ್ಲಿ ಮರಳೆ ಮಿಶ್ರವಾಗಿ ।
ಪಾವನ ಪಾವನ ಮತಿಯನೆ ಕೊಡುತಲಿ ।
ಕಾವಾ ಕೊಲ್ಲುವದಕ್ಕೆ ಕರ್ತಾನೆನಿಸಿಕೊಂಡು ।
ಜೀವರಿಗೆ ಲೇಶ ತಿಳಿಯ ಗೊಡಲಾಹಂ-।
ಭಾವವೆ ಕಲ್ಪಿಸಿ ಭಕುತಿಯ ಪುಟ್ಟಿಸಾ ।
ಕೋವಿದರಿಗೆ ತಾನೇ ವೊಲಿಯಬೇಕಾದರೆ ।
ಆವಾಗ ಅವರಿಗೆ ತನ್ನನೇ ತೋರುವಾ ।
ದೇವಕ್ಕಿನಂದನ ವಿಜಯ ವಿಠ್ಠಲರೇಯಾ ।
ಕೈವಲ್ಯದಾಯಕ ಆನಂದ ಭರಿತಾ ॥

**ಆದಿ ತಾಳ**

ಬೊಮ್ಮ ಮರುತ ಗರುಡ ಶೇಷ ।
ಉಮ್ಮೆಯರಸಾ ಇಂದ್ರಕಾಮಾ ।
ಈ ಮಹಾತ್ಮರ ವಿಡಿದು ಮನುಜೋ-।
ತ್ತುಮ್ಮ ತೃಣ ಪರಿಯಂತ ಇದೆ ಇದೆ ಪೆಸರಿನಲಿ ।
ಮಮ್ಮತಾರಹಿತರಾಗಿ ಆ-।
ತುಮ್ಮದೊಳಗೆ ವಾಸವಾಗಿದ್ದು ।
ಒಮ್ಮಿಗಾದರು ತೊಲಗದೆ ।
ಘ್ರಮ್ಮನೆ ಕರ್ಮ ಮಾಡಿಸುವಾ ।
ಹಮ್ಮುಯಿಲ್ಲದ ದೈವ ವಿಜಯ ವಿಠ್ಠಲರೇಯಾ ।
ಇಮ್ಮಡಿ ಮುಮ್ಮಡಿ ನಡೆಸುವಾ ॥೫॥

ಜತೆ

ಭಕುತರ ಮನೋಹರಾ ಸೌಭಾಗ್ಯವಂತ ವಿ-।
ರಕ್ತರ ಪ್ರಿಯಾ ಸಿರಿ ವಿಜಯ ವಿಠ್ಠಲರೇಯಾ ॥೬॥

* * *

## ಸುಳಾದಿ – ೪೪

ಅಖಿಲ ಜೀವರಿಗೆ ಅತ್ಯಂತ ಭಿನ್ನವಾದ, ಮುಕ್ತಿ ಪ್ರದನಾದ, ಅಕಳಂಕ ಚರಿತನಾದ ಶ್ರೀಹರಿಯು ತನ್ನ ಅನೇಕ ಭಕುತರನ್ನು ಸಲಹಿದ ಸನ್ನಿವೇಶದ ಸೂಚನೆಯನ್ನು ಇಲ್ಲಿ ಕಾಣುತ್ತೇವೆ.

ತನ್ನ ಭಕುತರು ಮಾಡುವ ಕರ್ಮದಲ್ಲಿ ಕೊರತೆಯಾದರೂ ಅದನ್ನೆಣಿಸದೆ ಒಂದಕ್ಕೆ ಅನಂತ ಮಡಿ ಮಾಡಿ ಫಲ ಕೊಡುತ್ತಾನೆ. ಆದರೆ ದುಷ್ಟ ಚೇತನರಿಗೆ ಇದು ದೊರೆಯದು.

ಲಕುಮೀಶನು ಭಕುತರಿಗಾಗಿ ತನ್ನ ಅರಸಿಯನ್ನೇ ತೊರೆದನು. ತನ್ನ ಊರನ್ನೇ ಬಿಟ್ಟನು, ಶರೀರವನ್ನೇ ಕೊಟ್ಟನು. ಶರಣರನ್ನು ಬಿಟ್ಟು ಒಂದರೆಗಳಿಗೆ ನಿಲ್ಲದ ಕರುಣಾಳು, ತನ್ನ ಭಕುತರನ್ನಲ್ಲದೇ, ಬೇರೊಬ್ಬರನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಈತನನ್ನು ಕಾಣಲಾರದೇ ಗತಿಯಿಲ್ಲ. ಇವನನ್ನು ಹೃದಯದೊಳಗಿಟ್ಟವನಿಗೆ ಹುಟ್ಟಿನ ಭಯವಿಲ್ಲ.

॥ ರಾಗ–ಕನ್ನಡ ಕಾಂಬೋದಿ–ಧ್ರುವ ತಾಳ ॥

ಅಕಳಂಕ ಚರಿತಾ ನಿಷ್ಕಳಂಕಾಭರಣಾ ।
ಅಖಿಳ ಜಗತ್ತಿನ ಸಂತತ ಧಾರಾ ।
ಕುಚ ಕುಂಕುಮಾಂಕಿತ ರಜೋ ಭೂಷಾ ।
ಅಖಿಳ ಜೀವರಿಗತ್ಯಂತ ಭಿನ್ನಾ ।
ಶಕಟಾಸುರ ಭಂಜನ ನಿತ್ಯನಿರಂಜನ ।
ಮುಕುತಿ ಪ್ರದಾಯಕ ಪರಿಪೂರ್ಣ ರೂಪಕ ।
ಶಕುತನಿಗೆ ಮುಕುತಿಯಸಿತ್ತ ಸರ್ವಸಮರ್ಥಾ ।
ರುಕುಮನ್ನ ಮಾನಭಂಗ ಚಾಪಸಾರಂಗ ।
ಭಕುತ ಪುರಂದರನ ಹೃದಯಾಬ್ಜಭೃಂಗಾ ।
ಶುಕನುತ ಯಜ್ಞ ಸಾಧನ ವಿಜಯವಿಠ್ಠಲ ।
ಮಕ್ಕಳ ಮಾಣಿಕವೇ ಪಂಚಮುಖನ ಪ್ರೀಯಾ ॥

ಮಟ್ಟ ತಾಳ

ರಂಗ ರಂಗ ವಿಹಂಗ ತುರಂಗ ।
ಮಂಗಳಾಂಗ ತರಂಗ ಮಹಿಮಾ ।

ಅಂಗುಟಾಗ್ರದಿ ಗಂಗೆಯ ಪೆತ್ತಾ – ।
ನಂಗಜ ಜನಕ ತುಂಗಕಾಯ ಸು–।
ರಂಗಳ ಕೋಶ ಮಂಗಳ ದಾಸ – ।
ರಂಗಳದೊಳಗೆ ಸಂಗ ಸುಖದಲ್ಲಿ ।
ಸಂಗೀತ ಸ್ವರಜಾಗಂಗಳಿಗೆ ಬೆಡಗಂಗಳನು ತೋರಿದ ಪಾ–।
ರಂಗತ ದೈವ ಲಾಂಗುಲಿರಮಣ ವಿಜಯವಿಠ್ಠಲಾ ।
ರಂಗ ರಂಗ ಭೋಗಂಗಳ ಮೂರ್ತಿ ।
ತುಂಗ ಕಾಯ ಸುರಂಗಳ ಕೋಶಾ ॥೨॥

**ತ್ರಿವಿಡಿ ತಾಳ**

ಸ್ವಲ್ಪವಾದರು ತನ್ನ ನಂಬಿದ ಜನರು ಸಂ–।
ಕಲ್ಪಕ್ಕೆ ಕಡಿಮೆ ಕರ್ಮವು ಮಾಡಲು ।
ಅಲ್ಪಾ ದೊಳೆಣಿಸದೆ ಒಂದನಂತ ಮಾಡಿ ।
ಕಲ್ಪ ಕಲ್ಪಕ್ಕೆ ಫಲವಾ ಬೆಳೆಸುತಿಪ್ಪಾ ।
ಮೂಲ್ಪಂಥ ತಿಳಿಯದೆ ದುಷ್ಟ ಜೀವರು ನಿತ್ಯ ।
ಆಲ್ಪರಿದು ಹಗಲಿರುಳು ಅರ್ಚಿಸಿದರೂ ।
ನಿಲ್ವನವನ ಪುಣ್ಯ ಭಸುಮಮಾಡಿಬಿಡುವ ।
ಬಲ್ಪಂಥಗಾರನು ಗರುಡ ಗಮನಾ ।
ತಲ್ಪ ಸಾಗರ ಯಜ್ಞ ಭೃತ ವಿಜಯ ವಿಠ್ಠಲ ।
ವಲ್ಪಿಗೆ ಮೆಚ್ಚನು ಗೂಢವಾಗದನಕಾ ॥೩॥

**ಅಟ್ಟ ತಾಳ**

ಶರಣಗಾಗಿ ತನ್ನ ಅರಸಿಯ ತೊರವಾನು ।
ಶರಣಗಾಗಿ ತನ್ನ ಪುರವನ್ನು ಬಿಡುವನು ।
ಶರಣಗಾಗಿ ತನ್ನ ಶರೀರವ ಕೊಡುವನು ।
ಶರಣಗಾಗಿ ತನ್ನ ಏಕಾಂತ ವಲ್ಲನು ।
ಶರಣರ ಬಿಡೆನೊ ಅರಿಗಳ ಮುರಿದು ।
ಧರಿಯೊಳಿದರಿದೊ ದುರಿತಾಂಧಹರಿದು ।
ಶರಣರಕಾಣದೆ ಅರಘಳಿಗೆ ನಿಲ್ಲಾ ।
ಶರಣರು ಕರೆದರಬ್ಬರಕೆ ನಿಲ್ಲದೆ ಬರುವಾ ।
ಶರಣು ದಕ್ಷಣನಾಮ ವಿಜಯವಿಠ್ಠಲ ನೀತ ।
ಶರಣರಲ್ಲದೆ ಅನ್ಯರನ ನೋಡುವನೆ ॥೪॥

**ಆದಿ ತಾಳ**

ಪುಟ್ಟಿದ ದಾಸರಿಗೆಲ್ಲ ಕಟ್ಟಿಮನೆ ಪುಂಡರೀಕ – ।
ವಿಠ್ಠಲನ್ನ ಪಾದದಲ್ಲೆ ಪುಟ್ಟಿದ ರಾಜಕವಚ – ।
ತೊಟ್ಟು ಪೂರ್ಣವಾಗಿ ಮನವಿಟ್ಟು ಭಕ್ತಿರಸವೆಂಬ ।
ಗುಟ್ಟು ಒಬ್ಬರಿಗೀಯದೆ ಕಟ್ಟಡಿ ಮಾರ್ಗಬಿಡದೆ ।
ಬೆಟ್ಟದೊಡಿಯ ತಿಮ್ಮ ವಿಜಯವಿಠಲ ತುಂಗವಾಸನ – ।
ಇಟ್ಟು ಹೃದಯದೊಳಗೆ ಚಿಪ್ಪ ಹುಟ್ಟು ಸಾವು ತೊಡುವದಲ್ಲಾ ॥೫॥

**ಜತೆ**

ಈತನ ಕಾಣದಲಾರಿಗೆ ಗತಿಯಿಲ್ಲಾ ।
ಆತುಮವಂತ ನಾಮ ವಿಜಯ ವಿಠ್ಠಲ ಒಲ್ಲಾ ॥೬॥

* * *

## ಸುಳಾದಿ – ೪೫

**ಸ್ವಾಮಿ, ನಿನ್ನ ಮೂರ್ತಿಗಳು, ಗುಣಗಳು, ಅವತಾರಗಳು, ಮಹಿಮೆಗಳು, ಚರಿತ್ರೆ, ಭಾಗ್ಯ, ನಿನ್ನ ಮಂದಿರ, ನಡತೆ ನುಡತಿಗಳೆಲ್ಲವೂ ಭಕುತರಿಗಾಗಿ, ನಿನ್ನ ಭಕುತರನ್ನು ನೆಲೆಮಾಡಿ, ಅವರಿಗೆ ಪ್ರೇರಿಸಿ ಭಕ್ತವತ್ಸಲನೆಂಬುವ ಬಿರುದನ್ನು ಪಡೆದೆ. ಭಕುತರಿಂದಲೇ ನೀನು ಭಾಗ್ಯವಂತನು ನಿಜವೇ ಪ್ರಭು ?**

**"ಬಿಸಲೊಳಗೆ ತಪಸಿ ಬಂದ ತೃಷಿಯಾದ ಮನುಜಗೆ । ರಸದಾಳಿ ಕಬ್ಬು ಕೂಲಿಗೆ ಹಸನಾಗಿ ತಿನಿಸಿದಂತೆ" ನನ್ನ ಪಾಡು.**

**ದಾಸರಾಡಿದ ಲೀಲೆಯೇ ನಿನಗೆ ಸಂತೃಪ್ತಿಯಲ್ಲವೇ ? ನಿನ್ನ ನಾಮದ ಸುಧಾರಸವನ್ನುಣಿಸಿ ಕಾಪಾಡು.**

**॥ ರಾಗ ವರಾಳಿ – ಧ್ರುವ ತಾಳ ॥**

ಭಕ್ತರ ಗೋಸುಗ ನಿನ್ನ ಮೂರುತಿಗಳು ।
ಭಕ್ತರ ಗೋಸುಗ ನಿನ್ನ ಗುಣಂಗಳು ।
ಭಕ್ತರ ಗೋಸುಗ ನಿನ್ನವತಾರಗಳು ।
ಭಕ್ತರ ಗೋಸುಗ ನಿನ್ನ ಮಹಿಮೆಗಳು ।
ಭಕ್ತರ ಗೋಸುಗ ನಿನ್ನ ಚರಿತೆಗಳು ।
ಭಕ್ತರ ಗೋಸುಗ ನಿನ್ನ ಭಾಗ್ಯವಯ್ಯಾ ।
ಭಕ್ತರ ಗೋಸುಗ ನಿನ್ನ ಮಂದಿರಗಳು ।
ಭಕ್ತರ ಗೋಸುಗ ನಿನ್ನ ನಡತೆ ನುಡತಿ ।

ಭಕ್ತರ ನೆಲೆಮಾಡಿ ಅವರಿಗೆ ಪ್ರೇರಿಸಿ ।
ಭಕ್ತವತ್ಸಲನೆಂಬೊ ಬಿರಿದು ಪಡೆದೆ ।
ಮುಕ್ತನಾಮ ಪರಮಾಂಗತಿ ವಿಜಯ ವಿಠಲ ।
ಭಕ್ತರಿಂದಲಿ ನೀನು ಭಾಗ್ಯವಂನು ॥೧॥

**ಮಟ್ಟ ತಾಳ**

ವೇದಗಳುರಚಿಸಿ ಆದರದಿಂದಲಿ ।
ಆಧಾರವನು ಮಾಡಿ ಆದಿಮಧ್ಯಾಂತದಲಿ ।
ಆದಿ ಮೂರುತಿಯಾಗಿ ಭೇದಾರ್ಥವ ತಿಳುಹಿ ।
ಬೋಧರ ಕೈಯಿಂದ ತ್ರಿಧರೆಯೊಳು ಮೆರದೆ ।
ವಿಧಾತನಾಮ ವಿಜಯವಿಠಲರೇಯಾ ।
ವೇದಗಳು ರಚಿಸಿ ಆದರದಿಂದಲಿ ॥೨॥

**ತ್ರಿವಿಡಿ ತಾಳ**

ಬಿಸಿಜಜಾಂಡ ಪುಟ್ಟಿಸಿ ಪಂಚ ಭೂತಾತ್ಮದ ।
ವಸುಧಿಯ ನಿರ್ಮಾಣವನ್ನು ಮಾಡಿ ।
ಬಸುರಿಲಿದ್ದವರನ್ನು ಒಂದೊಂದು ರೂಪದಲಿ ।
ಅಸುವನೇಮಿಸಿ ಚೇತನಂಗಳಿತ್ತು ।
ವಿಷಜೀವಿಗಳಿಗೆ ತಾಮಸ ದಾರಿಯ ತೋರಿ ।
ಕುಶಲ ಬುಧರಿಗೆ ಶೋಭಿಸುವ ಮತಿ ।
ವಿಶುದ್ಧಾತ್ಮನಾಮ ಸಿರಿ ವಿಜಯ ವಿಠಲ ನೀನು ।
ವಶವಾಗಿ ಭಕ್ತರ ಕೂಡಲಿರುತಿಪ್ಪ ॥

**ಅಟ್ಟ ತಾಳ**

ಮೇರು ಮಂದರಗಿರಿ ಮೊದಲಾದ ಪರ್ವತ ।
ಧಾರುಣಿಯೊಳಗುಳ್ಳ ಸಕಲ ತೀರ್ಥಂಗಳು ।
ನೂರೆಂಟು ಸ್ವಯಂ ವ್ಯಕ್ತವಾದ ಪುಣ್ಯನಿಧಿ ।
ವಾರಿಧಿ ಪರಿಯಂತ ಮರ್ಯಾದೆ ಮಾಡಿ ।
ಪಾರಮಾರ್ಥ ಸಾಧನವಲ್ಲಿಗಲ್ಲಿಗೆ ।
ಕಾರುಣ್ಯದಲಿ ಸೃಜಿಸಿ ಕಿಂಕರರಿಂದ ।
ಆರಾಧನೆಗೊಂಡು ಅವರಿಗೆ ಸದ್ಗುಣ ।
ತೋರಿಕೊಡುವ ಧ್ವನಿ ವಿಜಯವಿಠ್ಠಲರೇಯಾ ॥೪॥

**ಆದಿ ತಾಳ**

ಬಿಸಿಲೊಳಗೆ ತಪಿಸಿ ಬಂದ ತೃಷಿಯಾದ ಮನುಜಗೆ ।
ರಸದಾಳಿ ಕಬ್ಬು ಕೂಲಿಗೆ ಹಸನಾಗಿ ತಿನಿಸಿದಂತೆ ।
ವಿಷದಲ್ಲಿ ತಪಿಸುತಾ ವಸುಧಿಯೊಳಗಿರುತಿರೆ ।
ವಸುದೇವ ಸುತ ನೆಂಬೊ ರಸದಾಳಿ ಕಬ್ಬು ಕೂಲಿಗೆ ।
ಎಸೆಹ ಮೆದ್ದಂತೆ ಕಾಣೊ ಅಸುರಾರಿ ನಿನ್ನ ನಾ-।
ಮ ಸುಧೆಯ ಕುಡಿಸಿ ಕೂಲಿಗೆ ಅಸಮ ಸಂಪದವಿನೀವೆ ।
ಅಸಂಭಾವಿತರಾಗದಂತೆ ವೃಷಯ ವಿಜಯ ವಿಠ್ಠಲ ।
ಅಸಮ ದೈವವೆ ನೀನು ಹಸುಗಳ ಪಾಲಿಸುತ ।
ಪೆಸರ ಪಡೆವನಂತೇ ॥೫॥

**ಜತೆ**

ದಾಸರಾಡಿದ ಲೀಲೆ ನಿನಗೆ ಸಂತೃಪ್ತಿಯೊ ।
ಭೂಷಣ ನಾಮ ಸಿರಿ ವಿಜಯ ವಿಠ್ಠಲ ವೊಡಿಯಾ ॥೬॥

* * *

## ಸುಳಾದಿ – ೪೬

ರುಕ್ಮಿಣಿ ಮನೋಹರನೇ, ನಿನ್ನ ಚರಣಕಮಲಗಳನ್ನು ಅಂತರಂಗದಲ್ಲಿ ನಿರಂತರ ಧ್ಯಾನಿಸುವ ಭಕುತರಿಗೆ ಇಹಪರಗಳ ಸುಖವು ನೀರು ಕುಡಿದಂತೆ. ನಿನ್ನ ನಂಬಿ ಇಂಬುಗೊಂಡ ಭಕುತರು ದಿಗ್ಗಜದಂತೆ ಮದವೇರಿ ಸಂಚರಿಸುತ್ತಾರೆ. ನಿನ್ನ ಪಾದಕಮಲವನ್ನು ಕಂಡು ಸುಜ್ಞಾನಿಗೆ ಎಲ್ಲಿದ್ದರೂ ಪುಣ್ಯಮೂರ್ತಿಯಾಗುವುದು. ನಿಜ ಭಕುತರನ್ನು ಸದಾಗೆಲಿಸಿ ಮುದವೀವ ಕರುಣಾಕರ ನೀನು.

ನಾರಾಯಣನೇ, ನಿನ್ನ ಸೇರದ ಪಾಪಿಗೆ ಘೋರತನವೆಲ್ಲಿ ಬಂಡಟ್ಟುವುದು. ನಿನ್ನ ಸಾರಿದ ಮನುಜರಿಗೆ ಸರ್ವಪಾಪಗಳೂ ದೂರದಲ್ಲಿರುವವು. ಕಾರುಣ್ಯ ಸಿಂಧು ಆರಾಧಿಸುವವರಿಗೆ ನಿನ್ನ ನಾಮವೇ ತಾರಕ.

ಭಜಕರ ಕೂಡ ಸರಸವಾಡುವ ರಂಗಾ. ನಿರ್ಮಲ ಕಾಮುನಾದ, ಸಚ್ಚಿದಾನಂದಾತ್ಮಕನಾದ ಚಿಂತಾಮಣಿಯೇ ನಿನ್ನ ರಕ್ಷಣೆಗೆ ಪಡಿಗಾಣೆ. "ಪಕ್ಕೆಯೊಳಗೆ ಪಕ್ಕಿ ಮಕ್ಕಳ ಸಾಕಿದಂತೆ ।" ಅಕ್ಕರದಿಂದ ಭಕ್ತರನ್ನು ಕಾಯುವ ಸ್ವಭಾವ ನಿನ್ನದು.

**॥ ರಾಗ – ಭೈರವಿ – ಧ್ರುವ ತಾಳ ॥**

ವೆಗ್ಗಳವಲ್ಲವಯ್ಯಾ ನಿನ್ನಂಘ್ರಿದೇನಿಪ ಭ-।
ಕ್ತರ್ಗೆ ಇಹಸುಖ ಬಲುಪರಿನಿತ್ಯ ।

ಸ್ವರ್ಗಾಪವರ್ಗ ನಾನಾ ಲೋಕವಾವನು ।
ನೀರ್ಗುಡಿದಂತೆ ಅಲ್ಲವೇನೋ ಸುಲಭಾ ।
ಕೂರ್ಗಣಿಯದರು ಪೂವು ಶುಭವಂದಾದ ।
ಮೊಗ್ಗಿಯ ಮನಿಯಂತೆ ದಿನ ಪ್ರತಿದಿನ ।
ಮಗ್ಗುಲೊಳಗಿನ ಸುರತರುವೇ ।
ಬಗ್ಗ ಬಲ್ಲರೇನೊ ನಿನ ವರನ್ಯರಿಗೆ ।
ವೆಗ್ಗಳವೇನೊ ದುರ್ಗಮವಾಗಿದ್ದ ದುರಿತಕೋಟಿಗೆ ।
ಲಗ್ಗಿಗೆ ಬಿಟ್ಟು ಕುಡಿನೋಟದಲ್ಲಿ ನೋಡಿ ।
ಮುಗ್ಗು ಮಾಡುವ ವಿಷಯಂಗಳಿಗೀಮನ ।
ಒಗ್ಗಟ್ಟಿ ಕೊಂಡು ಪೋಗದಂತೆ ಒಂದಕ್ಕೆ ।
ಜಗ್ಗುವೆ ಜಗಜ್ಜನಕಾ ಜಲಧಿ ಶಯ್ಯಾ ।
ದುರ್ಗಮ ಅಗ್ಗಳಿಕೇ ನೆಂಬೆ ನಿನ್ನ ನಂಬಿದವರು ।
ದಿಗ್ಗಜರಂತೆ ಮದವೇರಿ ಸಂಚರಿಪರು ।
ಯೋಗ್ಯತಾ ವಾರದೊ ತೊಲಗ ತೊಬ್ಬಿದ ಜ್ಞಾನ ।
ಸುಗ್ಗಿಯೊಳಗೆ ನಿಂದಾಡೋದು ನೀನೆ ಬಲ್ಲಿ ।
ಅಗ್ಗಳಿಕೆ ಹಾಹಾ ಹಾಹಾ ಸೋಜಿಗಾ ।
ಜಿಜ್ಞಾಸ ವ್ಯಾತಕ್ಕೆ ನಿನ್ನ ಪಾದವ ಕಂಡ ।
ಸುಜ್ಞಾನಿಗೆ ಎಲ್ಲಿ ಆವಲ್ಲಿ ಇದ್ದರೂ ।
ತಗ್ಗಿ ಪೋಗದೆ ಪುಣ್ಯ ಪೂರತಿಯಾಗುವದು ।
ನೆಗ್ಗು ಬೀಳದು ಬೀಳದು ಬಹುಕಾಲಕ್ಕೆ ।
ಋಗ್ಗುವೇದಾದಿಗಳು ವಿಚಿತ್ರ ಬಗೆಯಿಂದ ।
ಒಗ್ಗೂಡಿಸಿ ಕೊಂಡಾಡಿ ನಿಲ್ಲುತಲಿವೇ ।
ಜಿಜ್ಞಾನಾಪ ರುಗ್ಮಿಣಿ ಮನೋಹರ ನೀನು ಮಾಡಿದ ಪ್ರ-।
ತಿಜ್ಞವ ಬಿಟ್ಟು ನಿಜಭಕ್ತರ ಗೆಲಿಸುವೆ ।
ಉಗ್ಗಡ ವಿವರಿಪೆ ದೇವಾ ನಿನ್ನ ಕೃಪೆಗೆ ।
ದಿಗ್ಗ ದೇಶದೊಳಗೆ ಯಧಿಕವು ಕಾಣೆ ।
ಕಗ್ಗತ್ತಲಿನೊಳು ಕಾರ್ಗಗನ ಮಿಂಚೆ ।
ಕುಗ್ಗು ಗೊಡದಂತೆ ಹೃದ್ಗತ ನಿವಾಸಾ ।
ವಿಜ್ಞಾನಾಮಯ ಮೂರುತಿ ವಿಜಯ ವಿಠ್ಠಲಾ ।
ದುರ್ಗಾರಮಣ ದುರ್ಜನ ವಿದಾರಣಾ ।
ವೆಗ್ಗಳವಲ್ಲ ವಯ್ಯಾ ॥೧॥

**ಮಟ್ಟ ತಾಳ**

ಆರಿಗೆ ದುರ್ಭಿಕ್ಷಾ ಆರಿಗೆ ಸುಭಿಕ್ಷಾ ।
ಆರಿಗೆ ಅರಿಷ್ಟಾ ಆರಿಗೆ ಮಹಾಕಷ್ಟಾ ।
ಆರಿಗೆ ಸಂತಾಪಾ ಆರಿಗೆ ದುರ್ಲೇಪಾ ।
ಆರಿಗೆ ವ್ಯಾಕುಲಾ ಆರಿಗನಕೂಲಾ ।
ಆರಿಗೆ ದಾರಿದ್ರಾ ಆರಿಗೆ ಗುಣಛಿದ್ರಾ ।
ಆರಿಗೆ ಅವಸತ್ಯಾ ಆರಿಗೆ ವೈಪರೀತ್ಯಾ ।
ಆರಿಗಾರಯ್ಯಾ ಈರೀತಿ ದುಃಶ್ಚಿತ್ತಾ ।
ನಾರಾಯಣ ನಿನ್ನ ಸೇರದ ಪಾಪಿಗೆ ।
ಪೋರತನವೆಲ್ಲ ಬಂದಟ್ಟುವದು ।
ಸಾರಿಸಾರಿಗೆ ನಿನ್ನ ಸಾರಿದ ಮನುಜಂಗೆ ।
ಸರುವಪಾಪಗಳು ದೂರದಲ್ಲಿಪ್ಪವು ।
ಕಾರುಣ್ಯಸಿಂಧು ವಿಜಯ ವಿಠ್ಠಲರೇಯಾ ।
ಆರಾಧಿಸುವರಿಗೆ ಸೂರೆ ನಿನ್ನ ನಾಮಾ ॥೨॥

**ತ್ರಿವಿಡಿ ತಾಳ**

ಕಠಿಣವಾಗಿಪ್ಪದು ಯಮಪುರದಾ ಬಟ್ಟೆ ।
ಕಠಿಣವಾಗಿಪ್ಪದು ಯಮಯಾತನೆ ।
ಕಠಿಣವಾಗಿಪ್ಪದು ಯಮದೂತರ ನೋಟಾ ।
ಕಠಿಣವಾಗಿಪ್ಪದು ಯಮದರುಶನಾ ।
ಸಟೆಯಲ್ಲಾ ಈ ಮಾತು ಸಿದ್ಧಾಂತವೆ ಸರಿ ।
ಶಠನಿಗಲ್ಲದೆ ನಿನ್ನವರಿಗುಂಟೇ ।
ಘಟದೊಳಗೆ ಉದಕ ಇದ್ದ ತೆರದಿ ನಿನ್ನ ।
ಜಠರದೊಳಗೆ ಲೋಕಾದಿರಲದರಲ್ಲಿ ।
ತೃಟಿಯಾದರು ಬಿಡದೆ ನಾನಾ ಸುಖದಿಂದ ।
ನಟನೆ ಮಾಡುತಲಿಪ್ಪ ತೋಂಡನಿಗೆ ।
ತುಟಿ ಮಿಸಕಲು ಸರ್ವತಾತ್ವಿಕರು ಬಂದು ।
ಘಟಕರಾಗುವರು ನಿನ್ನ ಭೀತಿಯಲ್ಲಿ ।
ಕಠಿಣವಾವದು ಕಾಣೊ ಯಾವ ವ್ಯಾಪಾರದಲ್ಲಿ ।
ಕಟಕಟಾ ಧರ್ಮರಾಯಾ ಹೊಲ್ಲೆನೆಲ್ಲಾ ।
ಪಟುಮೂರುತಿ ನಮ್ಮ ವಿಜಯವಿಠಲ ನಿ-।
ಚ್ಚಟಲ ಭಜಕರಕೂಡ ಸರಸವಾಡುವ ರಂಗಾ ॥೩॥

**ಅಟ್ಟ ತಾಳ**

ಎಂಥಾದೊ ನಿನ್ನ ರಕ್ಷಣೆಗೆ ಪಡಿಗಾಣೆ ।
ಅಂತುಗಾಣದು ಕಾಣೆ ನಿನ್ನಂಘ್ರಿಗಳಾಣೆ ।
ಸಂತರ ಸಂತರಿಸಿ ನಿರಂತರ ।
ಸಂತಾಪಕಳೆದು ಆದ್ಯಂತಕಾಲದಲ್ಲಿ ।
ಅಂತರಂಗದಲ್ಲಿ ಸಂತತವಾಸನೆ ।
ಸಂತೋಷವಾಗಿಪ್ಪ ಚಿಂತೆಯೊಳಗಿಟ್ಟು ।
ಅಂತಕನ ಭೀತಿ ಪಿಂತಿಮಾಡಿಸುವ ಶ್ರೀ-।
ಕಾಂತ ವಿಜಯ ವಿಠ್ಠಲರೇಯ ನಿರ್ಮಳಕಾಯ ।
ಚಿಂತಾಮಣಿಯ ಸಚ್ಚಿದಾನಂದಾತ್ಮಕಾ ॥೪॥

**ಆದಿ ತಾಳ**

ಭಕ್ತರ ನೋಡಿ ನಗುವ ಪರಮ ನಿನ್ನ ವ್ಯಾಪಾರ ।
ವ್ಯಕ್ತಾವ್ಯಕ್ತವೆಂದು ತಿಳಿದರೆ ಅವನೆ ಅಪಾರಾ ।
ಉಕ್ತಿವಂತನಹುದೋ ಸಿದ್ಧಾಂತ ಅವನೆ ಪ್ರಸಿದ್ಧಾ ।
ಶಕ್ತಸುಕಾಣೊ ಅವನಿಯೊಳಗೆ ತಾರೊಮನಸಿಗೆ ।
ಮುಕ್ತಿಯಪೇಕ್ಷಾ ಒಮ್ಮಿಗೆಮಾಡ ಹರಿಯನ್ನೆಬಿಡಾ ।
ಭೋಕ್ತಿಗೆ ಆವಾನು ಆವಪರಿಯ ನೋಡಿವನ ಪರಿಯಾ ।
ಭಕ್ತಿ ಜ್ಞಾನ ವಿರಕ್ತಿಯಲ್ಲಿ ಲೋಲಾಡುವನಲ್ಲಿ ।
ತ್ಯಕ್ತ ದೇಹಸಂಬಂಧದ ಮೋಹ ಸುಜನರಲ್ಲಿ ಸ್ನೇಹಾ ।
ಮುಕ್ತಿದಾತಾ ವಿಜಯವಿಠ್ಠಲನಾ ದೇವ ಸಂಜೀವಾ-।
ಸಕ್ತನಾಗಿದ್ದವಗೆ ಬರುವ ಎದುರಿಗೆ ॥೫॥

**ಜತೆ**

ಪಕ್ಕೆಯೊಳಗೆ ಪಕ್ಕಿ ಮಕ್ಕಳ ಸಾಕಿದಂತೆ ।
ಅಕ್ಕರದಲಿ ವಿಜಯವಿಠ್ಠಲ ಭಕ್ತರಕಾವೇ ॥೬॥

* * *

## ೪ - ಶ್ರೀ ಹರಿನಾಮ ಪ್ರಶಂಸೆ

**ಪರಮಾತ್ಮನ ನಾಮವನ್ನು ಅರ್ಥಾನುಸಂಧಾನುಪೂರ್ವಕವಾಗಿ ಭಕ್ತಿಯಿಂದ ಉಚ್ಚರಿಸಿದರೆ ಅದು ನಾಶಮಾಡುವಷ್ಟು ಪಾಪವನ್ನು ಪಾಪಿಯಾದವನು ಮಾಡಲಾರ ಎಂದರೆ ಮಹಾಪಾಪ ಪರಿಹಾರಕ ಶಕ್ತಿಯು ಶ್ರೀಹರಿಯ ನಾಮೋಚ್ಚಾರಣೆಯಲ್ಲಿದೆ.**

ಅಲ್ಲದೇ ಪಾಪವು ನಶಿಸಿ ಇನ್ನೂ ಪುಣ್ಯವು ನಮಗೇ ಉಳಿಯುತ್ತದೆ ಎನ್ನುವಷ್ಟು ನಮ್ಮ ಹರಿನಾಮ ಮಹಿಮೆ.

ಶ್ರೀಹರಿ ನಾಮೋಚ್ಚಾರಣರೂಪ ಪ್ರಾಯಶ್ಚಿತ್ತವೇ ಎಲ್ಲ ಪಾಪಗಳಿಗೆ ಪರಮೋತ್ಕೃಷ್ಟವಾದದ್ದು. ಇದರಿಂದ ಸಕಲ ಇಷ್ಟಾರ್ಥಗಳೂ ಫಲಿಸುತ್ತವೆ.

ಕಲಿಕಾಲದಲ್ಲಿ ಹುಟ್ಟಿರುವ ನಾವು ಕಲಿಯ ಬಾಧೆಗೆ ಒಳಗಾಗದಂತೆ ಬಾಳಲು ಒಂದೇ ಸಾಧನವೆಂದರೆ ಸದಾಕಾಲ ಹರಿನಾಮ ಸ್ಮರಣೆ ಮಾಡುವುದು. ಈ ಸಾಧನೆಗೆ ಯಾವ ನಿರ್ಬಂಧವೂ ಇಲ್ಲ. ತಪ್ಪದಲೆ ಹರಿನಾಮವನ್ನು ಗುಪ್ತದಲಿ ನೆನೆದರೆ ಶ್ರೀಹರಿಯು ಒಳ ಹೊರಗಿದ್ದು ಆನಂದ ಬಡಿಸುತ್ತಾನೆಂಬ ಮಾತು ತ್ರಿಕಾಲಕ್ಕೂ ಸತ್ಯ.

ಶ್ರೀಹರಿ ನಾಮದ ಮಹತ್ವ ಹಾಗೂ ಇದರಿಂದ ಅನೇಕ ಭಕ್ತರು ಉದ್ಧಾರವಾದ ವಿಷಯವನ್ನು ಶ್ರೀ ದಾಸರಾಯರು ಈ ಭಾಗದ ಸುಳಾದಿಗಳಲ್ಲಿ ಸೂಚ್ಯವಾಗಿ, ವಾಚ್ಯವಾಗಿ ವಿವರಿಸಿದ್ದಾರೆ. ಇವುಗಳ ನಿತ್ಯ ಪಾರಾಯಣದಿಂದ ಮನಸ್ಸಿಗೆ ನಿಜವಾದ ಶಾಂತಿ ದೊರೆಯುತ್ತದೆ.

* * *

## ಸುಳಾದಿ – ೪೭

ಶ್ರೀಹರೇ, ನೀನು ಪರಿಪೂರ್ಣ ಗುಣನಿಧಿಯು, ಆಶಾ, ಕ್ಲೇಶರಹಿತನು, ಸರ್ವತ್ರವ್ಯಾಪ್ತನು, ದೋಷ ವರ್ಜಿತ ಸರ್ವೋತ್ತಮನು ಪತಿತ ಪಾವನನು, ನಾನು ನಿರ್ಗುಣ, ಆಶಬಡಕ, ಕ್ಲೇಶಯುಕ್ತ ದೋಷಕಾರಿ, ಸರ್ವರ ದಾಸನು.

ಸ್ವಾಮಿ ಜನುಮ ಸಾರ್ಥಕವಾಗುವ ಸಾಧನ ಮಾಡಬೇಕೆಂದು ಬಯಸಿ ಬಂದಿದ್ದೇನೆ. ಆದರೆ ಮನ ಸ್ಥಿರ ಮಾಡದೇ ವಿಷಯ ಸೇವನೆಗೆ ಹರಿಬಿಡಬಹುದೇ? ದಣಿದಿದ್ದೇನೆ, ಮಣಿದು ಬೇಡುವೆ ನಿನ್ನಾಧೀನ ಮನುಜ ನಾನು. ಮಾತು ಮನ್ನಿಸಿ ಪಾವನಗೊಳಿಸು. "ಕಣ್ಣು ತೆರೆಯದ ಕುನ್ನಿ ಹುಲಿಯ ಕೂಡಾ ಹಣ್ಣೆಕೊಂಡು ಯುದ್ಧವನ್ನು ಮಾಡಿದರುಂಟೆ!"

ನಾನು ಎಷ್ಟು ಪಾತಕಿಯಾದರೂ ಸರಿ ನಿನ್ನ ನಾಮವು ನನ್ನನ್ನು ಪಾವನ ಮಾಡುತ್ತದೆ ಎಂದು ನಂಬಿ ನತಿಸಿದ್ದೇನೆ.

॥ ರಾಗ–ವರಾಳಿ–ಧ್ರುವ ತಾಳ ॥

ಪರಮ ಪಾಪಿಗನಾನು ಪತಿತ ಪಾಮರ ನಾನು ।
ದುರುಳರೊಳಗೆ ಬಲು ದುರುಳಮಾನವನಾಗು ।
ಪರಮ ಪುಣ್ಯಾತ್ಮಾನೀನು ಪತಿತಪಾವನ ನೀನು ।
ಗುರುವಾದೇವನು ನೀನು ಗಾಂಭೀರ್ಯ ನೀನು ।
ನಿರುತ ಕಠಿಣನಾನು ನಿರಿಯದನುಭವ ನಾನು ।

ಪರಿಪರಿ ಸುಜನರ ನಿಂದಕ್ಕ ನಾನು ।
ಹರಿಯೆ ಸುಲಭನೀನು ನಿರಿಯವಿದೂರ ನೀನು ।
ಚರಿತ ಸುಚರಿತ ನೀನು ವಮಿಲ ನೀನು ।
ಮರವುವುಳ್ಳವನು ನಾನು, ಬಲು ಕ್ಷುಧಾತುರ ನಾನು ।
ಪರಮ ದಾರಿದ್ರ ನಾನು, ದೀನವಂತನು ನಾನು ।
ಮರಹುರಹಿತ ನೀನು, ನಿತ್ಯತೃಪ್ತನು ನೀನು ।
ಸಿರಿವಂತನು ನೀನು, ಔದಾರ್ಯನು ನೀನು ।
ಜರಾಮರಣ ಭಯ ನಾನು, ಜಡ ಮಂದಮತಿ ನಾನು
ನರಕಾ ನರಕದಲ್ಲಿ ಚರಿಪೆ ನಾನು ।
ಜರಾಮರಣಶೂನ್ಯ ನೀನು ನಿರಭಯವಂತ ನೀನು ।
ಹಿರಿದಾದಮತಿ ನೀನು, ನರಕಾನರಕಗಳ ಸಂಹಾರಕ ನೀನು ।
ಶರಣಪಾಲಕ ನಮ್ಮ ವಿಜಯ ವಿಠ್ಠಲರೇಯಾ ।
ಪರಿಪೂರ್ಣ ಗುಣನಿಧಿ ನೀನು, ನಿರ್ಗುಣ ನಾನು ॥

### ಮಟ್ಟ ತಾಳ

ಲೇಸವುಳ್ಳವ ನೀನು, ಲೇಸಬಯಪೆ ನಾನು ।
ದೇಶವ್ಯಾಪುತ ನೀನು, ದೇಶಿಗನು ನಾನು ।
ಆಶೆಬಿಟ್ಟವ ನೀನು, ಆಶೆಬಡುಕ ನಾನು ।
ದೋಷವರ್ಜಿತ ನೀನು, ದೋಷಕಾರಿ ನಾನು ।
ದ್ವೇಷಿಗಳಗಂಡ ವಿಜಯ ವಿಠ್ಠಲರೇಯಾ ।
ನೀ ಸರ್ವೋತ್ತಮಾ ನಾ ಸರ್ವರದಾಸಾ ॥೨॥

### ತ್ರಿವಿಡಿ ತಾಳ

ಮನೆಮನೆಗಳಿಗಾನು ಉಣಲಿ ಬಂದವನೆಲ್ಲಾ ।
ಜನುಮಸಾರ್ಥಕ ಸಾಧನಮಾಡಬೇಕೆಂದು ಅನು-।
ದಿನದಲಿ ಬಯಸಿ ಭಣಗು ಕರ್ಮಗಳು ನಾ-।
ಶನ ಗೈಸುವವೆ ಎಂದು ಗುಣದಲಿ ಬಂದಿರಲು ।
ಮನ ಸ್ಥಿರ ಮಾಡದೆ ಕಂಡಕಂಡಾ ವಂಚನೆಯಿಂದ ಎನ್ನನು ।
ಇನಿತು ನಡಿಸಿ ಪ್ರಣವಾದಿಗಳಿಗೆ ಪ್ರೇರಣೆಯಾಗಿದೆ ನಿತ್ಯ ।
ಮನೆ ಮನೆ ಸವಿದುಂ ಬೋದನೆ ನೇಮಿಸಿ ।
ಎನಗೊಂದು ಸತ್ಕರ್ಮದಕ್ಕದಂತೆ ಯೋ-।
ಚನೆ ಮಾಡಿದಿಯೇನೊ ಮನದೊಡಿಯಾ ।
ತನಜಗರ್ಭನು ಎನ್ನ ಫಣಿಯಲ್ಲಿ ಈಲಿಪಿ-।

ಯನು ಬರದನೇನೊ ಕರುಣವಿಲ್ಲದೆ ।
ಋಣವ ತೀರಿಸುವೆನೋ ಮುಂದೆ ಜನಿಸಿ ಬಂದು ।
ಋಣವ ತಿದ್ದಿಪುದುಂಟೇ ದನುಜಾಂತಕಾ ।
ಶುನಕನು ನಾನು ಹಿಂದಿನ ದೇಹದಲ್ಲಿ ಪಾ-।
ವನಮತಪೊಂದಿದ್ದ ಜನರುಂಡ ಎಂಜಲಾ ।
ಗಣನೆಇಯಲ್ಲದ ಎಡೆ ಬಿದ್ದಿರಲು ನೆಕ್ಕಿದ ಕಾ-।
ರಣದಿಂದ ಈ ಜನ್ಮ ಪ್ರಾಪ್ತವಾಗಿ ।
ದಿನದಿನದಲಿ ಸಂಪದನ ಷಡುರಸಗಳು ।
ಎಣಿಕೆಯಿಲ್ಲದೆ ನೀನು ಉಣಲಿತ್ತದೋ ।
ಎನಗಾವದು ಇದರ ಕೊನೆಮೊದಲು ದೊರೆಯದು ।
ಹೊಣೆಗಾರ ನೀನೆ ಎಲ್ಲವನು ಬಲ್ಲವ ।
ಕ್ಷಣದೊಳು ಗತಿಈವ ವಿಜಯವಿಠ್ಠಲರೇಯಾ ।
ಮಣಿದು ಬೇಡಿಕೊಂಬೆ ಎನಗಾವದೋ ಪುಣ್ಯ ॥೧॥

**ಅಟ್ಟ ತಾಳ**

ನಿನ್ನಾಧೀನದವ ಮನ್ನುಜನು ನಾನು ।
ಮನ್ನಿಸಿ ಮಾತುಪಾವನ್ನು ಮಾಡಿದರೊಳಿತೆ ।
ಎನ್ನಿಂದಲಾಗುವ ಅನ್ಯಥಾ ಬಂದಲ್ಲಾ ।
ಕಣ್ಣು ತೆರಿಯದ ಕುನ್ನಿ ಹುಲಿಯ ಕೂಡಾ ।
ಹಣ್ಣಿಕೊಂಡು ಯುದ್ಧವನ್ನು ಮಾಡಿದರುಂಟೆ ।
ಪುಣ್ಯಶ್ಲೋಕರಾಯಾ ವಿಜಯ ವಿಠ್ಠಲರೇಯಾ ।
ಎನ್ನಿಂದ ಅಘಾದ ನಿನ್ನ ಮಹಿಮೆ ಪೇಳಿಸೊ ॥೨॥

**ಆದಿ ತಾಳ**

ಜನರಿಗೆ ನೀನೆ ಪ್ರೇರಣೆಯಾಗದಿದ್ದರೆ ।
ಎನಗವರಿಗೆ ಮಾತಿನ ಸಂಬಂಧವೇನೋ ।
ದಿನದಿನದಲಿ ಪರರ ಮನಿಗಳಿಗೆ ಪೋದವನು-।
ನಾನಲ್ಲವೊ ಎನಗ್ಯಾತರ ದೋಷಾ ।
ಜನರಿಗೆ ಎನಗೆ ಪ್ರೇರಣೆಯಾಗದಿದ್ದರೆ ಸುಮ್ಮ-।
ನೆ ನಮಗೆ ನಾವೇ ಉಣಬಲ್ಲೆವೇನೋ ।
ಕನಸಿನೊಳಗಾದರು ಎನಗೆ ಸ್ವತಂತ್ರವೆಂಬೊ-।
ದನು ಕಾಣೆ ಅನಂತ ಜನ್ಮದಲ್ಲಿ ನೋಡಲು।
ನಿನಗೆ ನೀನೆಬಲ್ಲಿ ವಿಜಯ ವಿಠ್ಠಲರೇಯಾ ।
ಎನಗೆ ಗುಣಾವದು ಗುಣವಿಲ್ಲದಾವದೂ ॥೩॥

**ಜತೆ**

ಎಷ್ಟು ಪಾತಕದವ ನಾನಾದರೂ ವಿಜಯ–।
ವಿಠ್ಠಲ ನಿನ್ನ ನಾಮ ಪಾವನ್ನ ಮಾಡುವದು ॥೬॥

* * *

## ಸುಳಾದಿ – ೪೮

ಹರಿನಾಮ ದೊರಕುವುದೇ ಕಠಿಣ, ದೊರಕಿದರೂ ನಿಲುಕದು, ನಿಲ್ಲದು. ಹರಿನಾಮ ದೊರಕಿದವನು ಸಪ್ತದ್ವೀಪಾಧಿಪತಿಗಿಂತಲೂ ಸುಖಿಯು. ಹರಿನಾಮ ನೆನೆದವನ ವಂಶಿಕರು ನರಕದಲ್ಲಿದ್ದರೂ ಪಾರಾಗುತ್ತಾರೆ.

ನಿಷ್ಕಾಮನಾಗಿ ಹರಿನಾಮವನ್ನು ನೆನೆದರೆ ಜೀವನ, ಪಾವನ, ತುಪ್ಪ ಸಕ್ಕರೆಗಿಂತ ಸವಿಯಾದ ಹರಿನಾಮವನ್ನು, ತಪ್ಪದಲೆ ಗುಪ್ತದಲ್ಲಿ ನೆನೆದರೆ, ರೋಮರೋಮದಲ್ಲಿದ್ದ ದುರಿತಗಳು ದೂರವಾಗುವವು. ಹರಿನಾಮಕ್ಕೆ ಸರಿಯಾದ ಕುರುಹು ಬೇರೊಂದಿಲ್ಲ ಎಂಬ ಮುಂತಾದ ವಿಷಯವನ್ನು ಈ ಸುಳಾದಿಯಲ್ಲಿ ನೋಡಬಹುದು.

**॥ ರಾಗ – ತೋಡಿ – ಝಂಪೆ ತಾಳ ॥**

ದೊರಕುವದೆ ಹರಿನಾಮಾ ದೊರಕಿದರೆ ನಿಲಕದು ।
ದೊರಕಿದರೆ ಅವ ಬಲುಧೊರಿಯೇ ಧೊರಿಯೇ ।
ದೊರಕುವದನಂತ ಧರಣಿಸುರ ಜನ್ಮಗಳು ।
ದೊರಕದಲ್ಲದೆ ನಾಮ ದೊರಿಯದಯ್ಯಾ ।
ದೊರೆತವನ ಸುಖಕೆ ವಿಸ್ತರಿಸಲೇನು ಸಪ್ತ – ।
ಶರಧಿ ದ್ವೀಪಸಹಿತ ಆಳುವಂಥ ।
ದೊರಿಯ ಸುಖಕಿಂತ ನೂರ್ಮಡಿ ಮಿಗಿಲು ಅಧಿಕವು ।
ಮೊರೆಮೊರೆದು ಕೂಗುತಿವೆ ಬಿರಿದು ಘೋಷಾ ।
ದೊರಿಯದೊ ದೊರಿಯದೊ ಧರಣಿಯೊಳು ಹರಿನಾಮ ।
ಸ್ಮರಣೆ ಮಾಡಿದನ ನೋಡಲಾಗಿ ಧರಾಧರ ಬಲ್ಲ ।
ಧರಧರನ ನಾಮಾರುಚಿಕರವಾಗಿ ಸವಿದು ಸುಂ ।
ದರವೆಂಬುದು ಅರಿಧರ ಸಂಕ್ಷಿಪ್ತ ವಿಜಯವಿಠಲನ್ನ ।
ಸ್ಮರಣೆ ಒಂದಕ್ಕೆ ಎಲ್ಲ ಸರಿ ಎಂದೆನಿಸಾದು ॥೧॥

**ಮಟ್ಟ ತಾಳ**

ಕಾಲಸೂತ್ರವಾದ ಮೇಲಾದ ನರಕದಲಿ ।
ಘೋಳಿಡುತಲಿ ವಂಶಾವಳಿ ಮಿಡುಕುತಿರೆ ।

ಭೂಲೋಕದಲಿ ಓರ್ವ ಬಾಲಕನು ಪುಟ್ಟಿ ।
ಶೀಲಗುಣನಾಗಿ ಕಾಲಕಾಲಕೆ ಹರಿಯಾ ।
ನಾಲಿಗಿಂದಲಿ ನೆನೆಸಿ ಶ್ರೀಲೋಲಾರ್ಪಿತವ ।
ವ್ಯಾಳೆವ್ಯಾಳೆಗೆ ಯಂದ ಘಾಳಿ ಬೀಸಲು ನಾಕಾ ।
ಶೀಳಿ ಅವನಕುಲಕೆ ವಾಲಯವಾಗುವುದು ।
ವಾಲಯದಲ್ಲಿ ವಿಶಾಲ ವೈಕುಂಠದಲಿ ।
ಶೀಲ ಬ್ರಹ್ಮನ ಪ್ರೀಯಾ ವಿಜಯವಿಠ್ಠಲರೇಯಾ ।
ಬೀಳಿಸಲೇನು ತನ್ನ ಆಳುಗಳಾವರ್ನಾ ॥೨॥

**ತ್ರಿವಿಡಿ ತಾಳ**

ನಾಮವೆ ಜೀವನಾ ನಾಮವೆ ಪಾವನಾ ।
ನಾಮವೆ ಸಕಲಘಾ ಹೋಮವೆವೆಂಬೋದು ।
ನಾಮವೆನಲು ಸುರಸ್ತೋಮವೆ ಭಜಿಸುವದು ।
ನೇಮವೆ ತಿಳಿವದು ಪ್ರೇಮವೆ ಎನುತಲಿ ।
ನಾಮವೆ ಉತ್ತಮ ಹೇಮವೆಂದು ಕಾಯಾ ।
ಧಾಮವೆ ಮಾಡಿ ಸಕಾಮವೆ ಬಯಸದೆ ।
ಸಾಮವೇದಲೋಲ ವಿಜಯವಿಠ್ಠಲನ್ನ ।
ನಾಮವೆ ನೆನಿಯ ನಿಷ್ಕಾಮವೆ ನುಡಿವುತ್ತಾ ॥೩॥

**ಅಟ್ಟ ತಾಳ**

ಅಪ್ಪ ತಿಮ್ಮಪ್ಪನೆ ನಾಮವೆ ನೆನಿಸಲು ।
ತುಪ್ಪ ಸಕ್ಕರೆ ಹಣ್ಣು ಹರಿವಾಣದಲ್ಲಿ ।
ಒಪ್ಪಾಚಾರದಿಂದ ಸವಿದಂತೆ ಕಾಣಿರೋ ।
ಅಪ್ರಾಕೃತ ರಸಕೆ ಪಡಿಯುಂಟೆ ।
ಸುಪ್ರಸಾದನಾಮ ವಿಜಯವಿಠ್ಠಲನ್ನ ।
ತಪ್ಪದೆ ನಾಮಾ ಗುಪ್ತದಲಿ ನೆನಿಸೋ ॥೪॥

**ಆದಿ ತಾಳ**

ನಾಮ ಒಂದು ಬಲವಾಗಿ ಶೀಮೆಯೊಳಗುಳ್ಳ ಬಲು-।
ತಾಮಸರುಬಂದು ಎನ್ನ ರೋಮಬಾಗಿಸುವರೆ ।
ನಾಮಕ್ಕನಂತೆ ಕಡಿಮೆ ಫಲವದಿಕವಿಲ್ಲ ।
ಈ ಮಾತು ಮನ್ನಿಸೆ ಸುಕಾಮಿಸಿ ಹರಿಯ ಪಾದಾ ।
ನಾಮವೆ ಬಿಡದೆ ನೆನಿಸೆ ರೋಮರೋಮಾ ದುರಿತನಾಶ ।

ಕ್ಷೇಮಾಕೃತೆ ವಿಜಯ ವಿಠಲನನಾಮ ಮುದ್ರಾಂಕಿತದವಗೆ ।
ಭೂಮಿಯಾಕಾಶಕ್ಕೆ ಒಂದೇ ಸುಮಾರ್ಗವೆಂದು ಪೇಳೋ ॥೫॥

ಜತೆ

ಹರಿನಾಮ ಸರಿಯಾದ ಕುರುಹುನಾನರಿಯೆನು ।
ಅರಿದವರಿಗೆ ನಮೋ ಶ್ರೀಶ ವಿಜಯ ವಿಠಲಾ ॥೬॥

* * *

## ಸುಳಾದಿ – ೪೯

ಪರಮಾತ್ಮನ ನಾಮವೇ ಜ್ಞಾನಿಗಳಿಗೆ ಅಮೃತಾನ್ನವು. ಅನಂತಕಾಲದಲ್ಲಿ ಅದೇ ಶುಚಿಯಾದದ್ದು, ರುಚಿಯಾದದ್ದು. ಇದರ ರುಚಿಯನ್ನು ಬಲ್ಲವನು ಅನ್ಯರಸಕ್ಕೆ ಎಂದೂ ಮನಸ್ಸುಮಾಡನು. ಶ್ರೀಹರಿಯ ನಾಮದ ಮಹಿಮೆಯನ್ನು ಅರಿತವನು ತನ್ನೊಳಗೆ ನಲಿದಾಡುವನು. ಮೂರು ಲೋಕದಲ್ಲಿಯೂ ಧನನೆನಿಸುವನು.

ಪರಮಾತ್ಮನ ನಾಮರಸವನ್ನು ಕರಣ ಶುದ್ಧಿಯಿಂದ ಸುರಿದವನು ಸದಾ ಸುಖಿಸುವನು. ಕನಸಿನಲ್ಲಾದರೂ ಹಸಿವೆ ತೃಷೆಗಳು ಬಾಧಿಸವು, ಮನುಜೋತ್ತಮನಾಗಿ ಬಾಳಿ ಬೆಳಗುವನು.

ಘನ ಸಮರ್ಥನಾದ ಪರಮಾತ್ಮನ ನಾಮಸುಧೆಯನ್ನು ಉಂಡವನೇ ಧಿಟ್ಟನು. ಹಣಕೊಟ್ಟು ಶ್ರಮಬಟ್ಟು ಸಂಗ್ರಹಿಸುವ ವಸ್ತುವಿದಲ್ಲ. ಆರು ರಸಗಳಿಗಿಂತಲೂ ಹೆಚ್ಚು ರುಚಿಯಾದದ್ದು. ಈ ನಾಮಾಮೃತವನ್ನು ಎಷ್ಟುಂಡರೂ ಬೇಸರಿಕೆ ಬಾರದು. ಅಜೀರ್ಣವಾಗದು. ಎಂಬ ಮುಂತಾದ ಹರಿನಾಮಾಮೃತದ ಮಹತ್ವವನ್ನು ದಾಸರು ಈ ಸುಳಾದಿಯಲ್ಲಿ ಹೇಳುತ್ತಾರೆ.

॥ ರಾಗ–ಬಿಲಾರಿ–ಧ್ರುವ ತಾಳ ॥

ನಿನ್ನನಾಮ ಪೀಯೂಷನ್ನವೊ ಜ್ಞಾನಿಗಳಿಗೆ ।
ನಿನ್ನನಾಮವೆ ರುಚಿ ಅನಂತಕಾಲದಲ್ಲಿ ।
ನಿನ್ನನಾಮವೆ ಸವಿದುಣ್ಣಲು ಸುಖಾ ।
ನಿನ್ನನಾಮದ ನೆಲೆಯನ್ನು ಬಲ್ಲಮಾನವ ।
ಅನ್ಯರಸಗಳಿಗೆ ಮನಸು ಎರಗಸಾ ।
ನಿನ್ನ ನಾಮವೆ ತಿಳಿದು ತನ್ನೊಳಗೆ ತಾನೆನಲಿದು ।
ಚನ್ನಾಗಿ ನಾಮಸುಧೆಯನ್ನು ನಾಲಿಗೆಯಲ್ಲಿ
ಕಣ್ಣಿವೆ ಹಾಕುವ ಅನ್ನಿತದೊಳಾದರು ಮನ್ನಿಸಿ ಹರಿಯ ಕಾ–।
ರುಣ್ಯ ನಾಮಾಮೃತ ಬಿನ್ನಾಣದಲ್ಲಿ ಸುರಿದ–।

ವನ್ನ ಸೌಭಾಗ್ಯಕ್ಕೆ ಇನ್ನು ಎದಿರುಂಟೆ ಅನಂತ ಜೀವಿಯೊಳು ।
ಜನ್ಮಾದಿರಹಿತ ಶ್ರೀವಿಜಯ ವಿಠ್ಠಲರೇಯಾ ।
ನಿನ್ನ ಶರಣಾಗತರು ಧನ್ಯರೋ ತ್ರಿಜಗಕ್ಕೆ ॥೧॥

**ಮಟ್ಟ ತಾಳ**

ಹರಿ ನಿನ್ನ ನಾಮ ಕರಣ ಶುದ್ಧಿಯಲ್ಲಿ ಪರೀಕ್ಷಿಸಿ ಪ್ರತಿದಿನ ।
ಸುರಿಸುರಿದು ಬಹಳ ಹರುಷನಾಗುವ ನರನು ।
ಧರಣಿಯೊಳಗೆವುಳ್ಳ ಚರಿಸುವ ರಸಂಗಳ ।
ಸರಕು ಮಾಡನು ಕಾಣೋ ಅರಿದುಬಿಡುವಾ ।
ನಿರಾಕರಣೆಯನು ಮಾಡಿ ಪರಲೋಕಕೆ ।
ಸುಖಕರವಿದು ಅಲ್ಲೆಂದು ಹರಿ ನಿನ್ನ ಸಿರಿಚರಣ ।
ಶರಣರ ಮನೋಗತ ನರನಾದರೂ ಒಮ್ಮೆ ।
ಅರಿಯಲಾರರು ಕಾಣೊ ಪರತತ್ವ ।
ವರರಂಗ ವಿಜಯವಿಠ್ಠಲ ನಿನ್ನ-।
ಮರ ನಿರ್ಮಳ ನಾಮದಾರುರಸ ಬಲು ಸವಿಯೋ ॥೨॥

**ತ್ರಿವಿಡಿ ತಾಳ**

ಮನಸಾರ ಹರಿನಿನ್ನ ನಾಮಾಮೃತವು ಬಿಡದೆ ।
ನೆನೆಸುತ್ತ ಸವಿದುಂಡ ಮಾನವಗಾದರೂ ।
ಕನಸಿನೊಳಾದರೂ ಹಸಿವಿ ತೃಷಿಗಳಿಲ್ಲ ।
ಮನುಜೋತ್ತಮನಾಗಿ ಬಾಳುವನೋ ।
ಜನ ಸರತಿಯಲಧಿಕಾ ಕುಂದನುಡಿಗಳಿಲ್ಲ ।
ಮನಸಿಜನುಪಹತಿ ಇರಲಿಸಲ್ಲ ।
ಅನುಸರಿಸಿ ಅನ್ಯರನ್ನು ಬೇಡಿಕಾಡುವದಲ್ಲಿ ।
ಅನುಶುಚಿಯಲ್ಲದೆ ಕ್ಲೇಶವಿಲ್ಲಾ ।
ಅನಿಶಬಿಡದೆ ಕಾಯುವ ವಿಜಯವಿಠಲರೇಯಾ ।
ಘನ ಸಮರ್ಥನ ನಾಮಸುಧಿ ಉಂಡವನೀಧಿಟ್ಟಾ ॥೩॥

**ಅಟ್ಟ ತಾಳ**

ಧರೆಸುತ್ತಿ ಹಣವೀಸಾ ಕೊಟ್ಟು ತರುವದಲ್ಲ ।
ಮರಿಸಿ ಮೋಸದಲ್ಲಿ ವ್ಯವಹಾರ ಮಾಡುವದಲ್ಲ ।
ಇರಿಸಿದ ಪದಾರ್ಥ ಪೋಯಿತು ಎನಸಲ್ಲ ।
ಬೆರಿಸಿದಡೆಯಲ್ಲಿ ಅದೆ ಇಲ್ಲೆಂಬದಲ್ಲಿ ।
ತರಿಸುವದಲ್ಲ ಅನ್ಯರಿಂದ ಕೇಳಿ

ಧರಿಸುವದಲ್ಲ ಶಿರದಮೇಲೆ ಅನುದಿನ ।
ಅರಸರ ಬಾಗಿಲುಕಾಯಿದು ಕೇಳುವದಲ್ಲ ।
ಅರಸಿ ಭುವನವೆಲ್ಲ ತರುಗಿನೋಡುವದಲ್ಲ ।
ಮೆರೆವ ಸುರರೊಳು ವಿಜಯವಿಠಲನ್ನ ।
• ವರ ಸಮೀಪದಲ್ಲಿ ಸುಖಬಡಿಸುವದಿದು ॥೪॥

**ಆದಿ ತಾಳ**

ಒಗರು ವಿಷ ಖಾರ ಹುಳಿ ಕಟು ಷಡುರಸಕೆ ।
ಮಿಗಿಲೆನಿಸುವದು ಅನಂತಾನಂತಮಡಿ ।
ಹಗಲು ಇರಳು ಸವಿದುಣ್ಣಲು ಬೇಸರಿಕೆ ಇಲ್ಲ ।
ಹೊಗೆ ಉರಿಯಿಂದ ಪರಿಪಕ್ವವಾಗುವದಲ್ಲ ।
ಉಗಳಿ ಕಳೆವದಲ್ಲಾ ಹೇಶಿಕೆಪುಟ್ಟಿತೆಂದು ।
ತೆಗೆಯೆಂದು ಒಬ್ಬರಿಗೆ ದೈನ್ಯಬಡುವದಲ್ಲ ।
ಜಗದೊಳು ನಾಮರಸಸುರಿಯೆ ಅವನವಂಶ ।
ಅಘದಿಂದ ದೂರರಾಗಿ ನಿತ್ಯತೃಪ್ತಿ ಬಡುವರು ।
ಅಘದೂರ ವಿಜಯವಿಠಲನ ನಾಮಸುಧಿ ।
ವಿಗಡನಾಗದೆ ಸುರಿಯೇ ರಗಳೆ ಭವದನಿಗಳ ಹರ ॥೫॥

**ಜತೆ**

ಹರಿನಾಮಾಮೃತವನ್ನು ಉಣಬಲ್ಲ ಜ್ಞಾನಿಗೆ ।
ಬರಿದೆ ನೆಚ್ಚನು ವಿಷಯಾ ವಿಜಯವಿಠ್ಠಲವೊಲಿವ ॥೬॥

* * *

## ಸುಳಾದಿ – ೫೦

**ಹರಿನಾಮಮಸ್ಮರಣೆಯಿಂದ ಉದ್ಧೃತರಾದ ಪ್ರಹ್ಲಾದ, ಗಜೇಂದ್ರ, ಅಜಾಮಿಳ ಮುಂತಾದವರ ಹೆಸರನ್ನು ಈ ಸುಳಾದಿಯ ಧ್ರುವತಾಳದಲ್ಲಿ ದಾಸರಾಯರು ತಿಳಿಸಿದ್ದಾರೆ. ಪರಿಶುದ್ಧನಾಗಿ ಹರಿನಾಮವನ್ನು ಎಳ್ಳಿನಿತಾದರೂ ಮನದಲ್ಲಿಟ್ಟರೆ ಯಾವ ಭಯವೂ ಇಲ್ಲ. ಸರ್ವದಾ ಜಯವು ಎಂಬ ಮಾತು ಸ್ಫುಟವಾಗಿ ಮೂಡಿಬಂದಿದೆ.**

**ಹರಿನಾಮವೇ ನಮ್ಮ ವಶವಾದಾಗ ಮರೆತು ಕೆಡಬಾರದು. ಪರಮಾತ್ಮನ ಸ್ಮರಣೆಯಿಂದ ರೋಗ ನಾಶವಾಗುವುದು. ದುರಿತ ದೂರಾಗುವುದು. ಮಹಾ ಪ್ರತಿಬಂಧಕಗಳು ಹರಿದು ಎಂದೆಂದಿಗೂ ಹರುಷವಾಗುವುದು ಎಂಬ ಆಪ್ತವಾಕ್ಯವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.**

**॥ ರಾಗ – ಕಾಂಬೋಧಿ – ಧ್ರುವ ತಾಳ ॥**

ಹರಿನಾಮ ಪ್ರಹ್ಲಾದನ್ನ ಮೊರೆಕೇಳಿವೊದಗಿತು ।
ಹರಿನಾಮ ಗಜೇಂದ್ರನ್ನ ಆಪತ್ತು ಹರಿಸಿತು ।
ಹರಿನಾಮ ಅಜಮಿಳನ ಪಾತಕ ಕೆಡಿಸಿತು ।
ಹರಿನಾಮ ನಾರದನ ನೀಚಯೋನಿಬಿಡಿಸಿತು ।
ಹರಿನಾಮ ಭೀಷ್ಮನ್ನ ಪಂಥವ ಗೆಲಿಸಿತು ।
ಹರಿನಾಮ ಅಂಬರೀಷನ್ನ ವ್ರತವೆ ಸಂರಕ್ಷಿಸಿತು ।
ಹರಿನಾಮ ವಿಭೀಷಣನಿಗೆ ಪಟ್ಟದಲ್ಲಿಟ್ಟಿತು ।
ಹರಿನಾಮ ದ್ರೌಪದಿಯ ಮಾನವೆಪಾಲಿಸಿತು ।
ಹರಿನಾಮ ಧ್ರುವನ್ನ ತಪಸಿಗೆವೊಲಿಯಿತು ।
ಹರಿನಾಮ ಅಹಲ್ಯಾ ಶಾಪವ ಹಿಂಗಿಸಿತು ।
ಹರಿನಾಮ ಬಲಿನೃಪನ ಇಂದ್ರನ್ನಮಾಡಿತು ।
ಹರಿನಾಮ ಕುಚೇಲನ ದಾರಿದ್ರಕಳೆಯಿತು ।
ಹರಿನಾಮ ವಿದುರನ್ನ ಕ್ಷೀರಕ್ಕೆ ಹಿಗ್ಗಿತು ।
ಹರಿನಾಮ ದೇವಕಿಯ ಬಂಧನಬಿಡಿಸಿತು ।
ಹರಿನಾಮ ಪಾರ್ಥನ್ನ ಜೀವವೇ ಉಳಿಸಿತು ।
ಹರಿನಾಮ ಜನಕನ್ನ ದೃಢಮಾಡಿ ನೋಡಿತು ।
ಹರಿನಾಮ ಪುಂಡರೀಕನ ಭಕ್ತಿಗೆ ಮೆಚ್ಚಿತು ।
ಹರಿನಾಮ ಗುರುಪುತ್ರನ್ನ ತಿರುಗಿ ಬದುಕಿಸಿತು ।
ಹರಿನಾಮ ವಾಲ್ಮಿಕನ್ನ ಮುನಿಪನೆಂದೆನಿಸಿತು ।
ಹರಿನಾಮ ಭೂಮಿಯ ಉದ್ಧಾರಗೈಸಿತು ।
ಹರಿನಾಮ ಪರಿಪರಿ ಭಕ್ತರೊಡನಾಡಿತು ।
ಹರಿನಾಮ ಒಂದಿರಲು ಅನ್ಯ ಉಪಾಯವೇ ।
ಹರಿನಾಮ ಸಮಸ್ತ ಭಯನಿವಾರಣವಯ್ಯಾ ।
ಹರಿನಾಮ ಹರಿನಾಮ ಮನಸಿಗೆ ನಿರ್ಮಲ ಕಾರಣ ।
ಹರಿನಾಮ ಸರ್ವ ದೇವತಿಗಳಿಂದಧಿಕವೋ ।
ಹರಿನಾಮ ಜಗದೊಳ್ಳು ಅಖಂಡವಾಗಿಪ್ಪದೊ ।
ಹರಿನಾಮ ಅಜಭವಾದಿಗಳಿಗೆ ಗತಿಪ್ರದಾ ।
ಹರಿನಾಮ ಮಹಿಮೆ ಆರುಬಣ್ಣಿಪರಯ್ಯಾ ।
ಹರಿ ಹರಿ ಹರಿ ಎಂದು ನೆನೆದಡೆ ರೋಗಂಗಳು ।
ಉರುಳಿಪೋಗುವದು ನೀನುಕೇಳೋ ಎಲೋಕೇಳೋ ।
ಹರಿನಾಮ ಸಕಳ ಪ್ರಾಯಶ್ಚಿತ್ತಕ್ಕೆ ಮೊದಲು ।
ಹರಿನಾಮ ವಿರಲಾಗಿ ಮತ್ತೊಂದುಪೇಕ್ಷವೇ ।

ಹರಿನಾಮ ನಿಜಸ್ವಾಮಿ ವಿಜಯ ವಿಠ್ಠಲನಂಘ್ರಿ ।
ಪರಿಶುದ್ಧನಾಗಿ ಎಳ್ಳನಿತು ಮನದಲ್ಲಿಡೊ ॥೧॥

**ಮಟ್ಟ ತಾಳ**

ಹರಿನಾಮವೆ ನಮ್ಮ ಮನವಶವಾಗಿರಲು ।
ಮರದು ಪಾಮರನಾಗಿ ಕೆಟ್ಟುವೋಗುವದ್ಯಾಕೆ ।
ಹರಿನಾಮವೇ ನಿತ್ಯ ಎದುರಿಲಿ ನಿಡಿದಾ- ।
ಗುರುತಿನಂತಿರಲಾಗಿ ಬೆಸನೆಮಾಡುವದ್ಯಾಕೆ ।
ಮರುಳೆ ಮಾತನುಕೇಳೊ ಅನಂತರ ಕ್ಲೇಶವನ್ನು ।
ಇರಗೊಡದಿರು ನಿನಗೆ ತಿಳಿಪುವೆನು ಇನ್ನು ।
ಮುರಮರ್ದನ ನಮ್ಮ ವಿಜಯವಿಠಲನ್ನ ।
ಸ್ಮರಣೆಮಾಡಲು ಬಂದ ರೋಗವೆ ವಿನಾಶ ।

**ತ್ರಿವಿಡಿ ತಾಳ**

ಹರಿನಾಮವೆಂಬೋದು ದುರಿತ ಕಾನನ ಸಂ-।
ಹರಿಸುವ ಪ್ರಳಯಾಗ್ನಿ ಸೋಲಿಸುತಿಪ್ಪದು ।
ಹರಿನಾಮ ನೆನದವರ ಕುಲಕೋಟಿ ಉದ್ಧಾರ ।
ಹರಿನಾಮ ನಂಬಿದರೆ ಕೇಡಿಲ್ಲಾ ಕೇಡಿಲ್ಲಾ ।
ಹರಿನಾಮ ಜಗದೊಳು ಅಖಂಡವಾಗಿ ನಿಂ-।
ದಿರದೆ ವ್ಯಾಪಿಸಿಕೊಂಡು ಇಪ್ಪದಿದಕೋ ।
ಹರಿನಾಮವೇ ಮಹಾ ಪ್ರತಿಬಂಧಗಳ ಕಳೆದು ।
ಪೊರೆಯುತ್ತಲಿರೆ ನಮಗೆ ಚಿಂತೆಯಾಕೆ ।
ನರದೇಹಕ್ಕೆ ಬಂದ ಭಣಗು ಉಪದ್ರವ ।
ಪರಿಹರಿಸಿ ಬಿಡುವದು ಸೋಜಿಗವೇ ।
ವರದೊರದು ಜ್ಞಾನಿಗಳು ಪೇಳುವ ಕಥೆಕೇಳಿ ।
ಸ್ಥಿರಮಾಡುವದು ಚಿತ್ತ ಸುಖವೇ ಉಂಟೋ ।
ತಿರುಗಿ ಬಾರದು ವ್ಯಾಧೆ ಪೋಯಿತೆಂದುತಿಳಿ ।
ಹರಿನಾಮದ ಶೌರ್ಯ ಸತತದಲ್ಲಿ ।
ಜ್ವರ ತಾಪ ನಿವಾರಿಸಿ ವಿಜಯವಿಠಲ ಸಜ್ಜ-।
ನರ ಮಾತನು ಪುಸಿಯಾಗಗೊಡ ನಿಜವೋ ॥೩॥

**ಅಟ್ಟ ತಾಳ**

ಹರಿನಾಮಯಿದ್ದಲ್ಲಿ ಹರುಷವೇ ಎಂದಿಗೂ ।
ಸುರರಾದಿಗಳು ಬಲ್ಲರು ಬಹುಕಾಲದಿ ।

ನಿರಿಯಾದೊಳಿದ್ದರೂ ಕಡೆಹಾಕುವದು ಅ-।
ದರಿಂದ ಪಾಲಿಸಿ ಪರಮಪ್ರೀತಿಯಿಂದ ।
ನಿರುತ ಜ್ಞಾನ ಭಕ್ತಿ ವೈರಾಗ್ಯ ಕೊಡುವದು ।
ಬರಿದಾಗದು ಕಾಣೊ ತುಂಬಿದ ಭಂಡಾರ ।
ಪಿರಿದಾಗಿ ಎಂತೆಂಥ ರಾಯರಾಯರನೆಲ್ಲ ।
ಅರೆಕ್ಷಣದಲ್ಲೀಗ ಕಾಯಿತುಕಾಯಿತು ।
ಧರಣಿಪಾಲಕ ರಂಗ ವಿಜಯವಿಠ್ಠಲರೇಯಾ ।
ಹೊರಗೆ ಒಳಗೆ ಇದ್ದು ಆನಂದಬಡಿಸುವ ನಿಜವೋ ॥೪॥

**ಆದಿ ತಾಳ**

ಒಂದೊಂದು ಹರಿನಾಮ ನೆನಿಸಿದರೆ ನಮಗೆ ।
ಸಂಧಿ ಸಂಧಿಯಲ್ಲಿದ್ದ ರೋಗಗಳೆ ಸಂಹಾರ ।
ಕುಂದು ಎಣಿಸದಿರು ಕುಚ್ಛಿತಯೋಚನೆ ಬಿಡು ।
ಪೊಂದುತಿರುಗಿ ಪೂಂದು ಹರಿನಾಮ ಸ್ಮರಣೆಯನ್ನು ।
ನಿಂದಲ್ಲಿ ಕುಳಿತಲ್ಲಿ ನಡೆದಾಡುವಲ್ಲಿ
ಮಂದಮತಿಯಲ್ಲಿ ಮದಡನಾಗಿದ್ದಲ್ಲಿ ।
ಸಂದೇಹ ಬಡದಲೆ ಸರ್ವೋತ್ತಮನ ಮನ-।
ದಿಂದ ತೊಲಗಲೀಯದೆ ಮುಂದುಗೆಡದ ನೆನೆಸೊ ।
ಮಂದರಧರ ನಮ್ಮ ವಿಜಯವಿಠ್ಠಲರೇಯಾ ।
ಬಂದು ಭಕ್ತಿಗೆ ಒಲಿದು ಮನೋಭೀಷ್ಟವ ಕೊಡುವನು ॥೫॥

**ಜತೆ**

ಇತ್ತಾ ಮುಂದಾಗಿ ನಮಗೆ ಮುನ್ನಾವಭಯ ನಮಗಿಲ್ಲ ।
ಚಿತ್ತಜಪತಿ ವಿಜಯವಿಠ್ಠಲನೇ ಗತಿ ಎನ್ನೋ ॥೬॥

* * *

## ಸುಳಾದಿ – ೫೧

ಹರಿನಾಮವು ದರಿದ್ರರಿಗೆ ಲಕ್ಷ್ಮೀ, ಅಲ್ಪಾಯುಗಳಿಗೆ ಬ್ರಹ್ಮ, ದುರಿತ ರಾಶಿಗೆ ಪವನ, ಕಾಲಾಖ್ಯ ಸರ್ಪಕ್ಕೆ ಗರುಡ, ಜ್ಞಾನ ಸಾಧನೆಗೆ ಶೇಷ, ಭವವೆಂಬ ಮೃತ್ಯುವಿಗೆ ರುದ್ರ, ಹೀಗೆ ಸುಜೀವಿಯ ಗೆಲುವಿನ ಏಕೈಕ ಚಿಂತಾಮಣಿಯಾಗಿದೆ.

ವಿಠ್ಠಲನೆಂಬೊ ತಾಯಿಯಿರುವಾಗ ಭಕುತನು ಕಷ್ಟ ಪಡಬೇಕಾದುದಿಲ್ಲ. ಒಂದೇ ನಾಮದಿಂದ ಪರಮಾತ್ಮನ ಪಟ್ಟಣ ಸೇರುತ್ತಾನೆ. ಅನುಭವದ ಜ್ಞಾನಕ್ಕೆ ವನಜನಾಭನು ಸಿಲುಕಿ ಚಿನುಮಯ ರೂಪ ತೋರಿ ಲಿಂಗ ದೇಹ ಭಂಗವಾಗುವಂತೆ ಮಾಡುತ್ತಾನೆ.

**ನಿರ್ಮಲಗಾತ್ರನಾದ ಶ್ರೀಹರಿಯ ನಾಮವೇ ಗತಿಯೆಂದು ಮಾತು ಮಾತಿಗೆ ನೆನೆಯಲು ಒಲಿವನು ಎಂಬ ವಿಷಯ ವೈವಿಧ್ಯತೆಯು ಈ ಸುಳಾದಿಯಲ್ಲಿ ಪ್ರತಿಪಾದಿತವಾಗಿದೆ.**

**॥ ರಾಗ ರೇಗುಪ್ತಿ – ಧ್ರುವ ತಾಳ ॥**

ಹರಿನಾಮ ಲಕ್ಷ್ಮೀ ಕಾಣೋ ದಾರಿದ್ರ ಜನರಿಗೆ ।
ಹರಿನಾಮ ಬ್ರಹ್ಮಕಾಣೊ ಅಲ್ಪಾಯುಳ್ಳ ಜನಕೆ ।
ಹರಿನಾಮ ಪವನ ಕಾಣೊ ದುರಿತ ವಿಷಾವಳಿಗೆ ।
ಹರಿನಾಮ ಗರುಡಕಾಣೊ ದುರಿತ ವಿಷಾವಳಿಗೆ ।
ಹರಿನಾಮ ಶೇಷ ಕಾಣೊ ಜ್ಞಾನಸಾಧನ ಪಾಲಿಪದಕೆ ।
ಹರಿನಾಮ ರುದ್ರಕಾಣೊ ಭವವೆಂಬ ಮೃತ್ಯುವಿಗೆ ।
ಹರಿನಾಮ ಇಂದ್ರಕಾಣೊ ದುಷ್ಕರ್ಮ ಪರ್ವತಕ್ಕೆ ।
ಹರಿನಾಮ ಸೂರ್ಯಕಾಣೋ ಅಜ್ಞಾನಾಖ್ಯ ಕತ್ತಲೆಗೆ ।
ಹರಿನಾಮ ಚಂದ್ರಕಣೊ ಹೃತ್ತಾಪ ಮೂಲಸ್ಥಾನಕ್ಕೆ ।
ಹರಿನಾಮ ವರುಣಕಾಣೊ ವೃಷ್ಟಿ ಕೊಡುವದಕ್ಕೆ ।
ಹರಿನಾಮ ಅಗ್ನಿ ಕಾಣೊ ದುರಿತಕಾನನಕೆ ಮುಖ್ಯ ।
ಹರಿನಾಮ ವಡಬಾನಳನೊ ಮಹಾದುಃಖಸಾಗರಕ್ಕೆ ।
ಹರಿನಾಮ ಸಂಜೀವನವೊ ಮೃತ್ಯುಪ್ರಾಯಿ ಜೀವಿಗಳಿಗೆ ।
ಹರಿನಾಮ ವೈದ್ಯಕಾಣೊ ಭವರೋಗ ಕಳೆವದಕ್ಕೆ ।
ಹರಿನಾಮ ಗಂಗೆ ಕಾಣೊ ಮನಮಲಿನ ತೊಳವದಕ್ಕೆ ।
ಹರಿನಾಮ ಕವಿಯೆಕಾಣೊ ಅನಾಚಾರ ಬಿಡಿಸುವದಕ್ಕೆ
ಹರಿನಾಮ ಪ್ರಾಣಕಾಣೊ ಇಂದ್ರಿಯಗಳ ಒಲಕೆ ।
ಹರಿನಾಮ ವ್ಯಾಘ್ರಕಾಣೊ ಆಪತ್ತು ಮೃಗಂಗಳಿಗೆ ।
ಹರಿನಾಮ ಸಿಂಹಕಾಣೊ ಕ್ರೋಧವೆಂಬ ಗಜಕೆ ।
ಹರಿನಾಮ ಗಜಕಾಣೊ ಆಶಾವೆಂಬೋ ಕದಳಿಗೆ ।
ಹರಿನಾಮ ಶಸ್ತ್ರಕಾಣೊ ಕಾಮಬಲ ಖಂಡ್ರಿಪದಕ್ಕೆ ।
ಹರಿನಾಮ ವಿತ್ತಕಾಣೊ ಸತ್ಕರ್ಮಕೊಂಬೋದಕ್ಕೆ ।
ಹರಿನಾಮಾಭರಣ ಕಾಣೊ ಶರೀರಾಲಂಕಾರಕ್ಕೆ ।
ಹರಿನಾಮಾಂಬರಕಾಣೊ ಭವವೆಂಬ ಸೀತಕ್ಕೆ ।
ಹರಿನಾಮ ವಜ್ರಪಂಜರ ಶರಣರ ಕುಲಕೋಟಿಗೆ ।
ಹರಿನಾಮ ನೆನೆದವರ ಅಶುಭವೆ ಓಡಿಸುವದು ।
ಹರಿನಾಮ ನಂಬಿದರೆ ಸರ್ವವು ದೃಷ್ಟಿಗೋಚರ ।
ಹರಿನಾಮ ಆವಾವಾಷೇಷಾ ಕೊಡುವದು ।

ಹರಿಮೂರುತಿ ನಮ್ಮ ವಿಜಯ ವಿಠ್ಠಲರೇಯಾ ।
ಹರಿಯೆಂದ ಮನುಜಂಗೆ ಹರುಷ ಪ್ರವಾಹ ಎನ್ನು ॥೧॥

**ಮಟ್ಟ ತಾಳ**

ತೊಟ್ಟಲೊಳಗೆಯಿದ್ದ ಶಿಶುವಿನ ಮೊಗನೋಡಿ ।
ತುಷ್ಟಳಾಗಿ ಜನನೀ ತೆಗೆದೆತ್ತಿ ಮೊಲೆ–।
ಗೊಟ್ಟು ಸಂತೈಸುವಳಾತೆರದಿ ಎನಗೆ ।
ವಿಠ್ಠಲ ವಿಠ್ಠಲನೆಂಬೊ ಜನನಿ ಇರಲು ।
ಕಷ್ಟಬಡುವದ್ಯಾಕೆ ಕಂಡದ್ದು ಹಂಬಲಿಸಿ ।
ಇಷ್ಟಮೂರುತಿ ರಂಗ ವಿಜಯ ವಿಠ್ಠಲರೇಯನ ।
ಪಟ್ಟಣ ಸೇರುವದು ಒಂದೇನಾಮದಿಂದ ॥೨॥

**ತ್ರಿವಿಡಿ ತಾಳ**

ಹರಿನಾಮವೇನೆನಿಸೆ ಆವಾವ ವಿಪತ್ತು ।
ಪರಿಹಾರವಾಗೋವು ಪ್ರತಿಪ್ರತಿಕ್ಷಣದಲ್ಲಿ ।
ಹರಿನಾಮದಿಂದಲಿ ತತ್ವೇಶ ಮೊದಲಾದ ।
ಸುರರೆಲ್ಲ ವಶವಾಗಿ ಇರುತಿಪ್ಪರೋ ।
ಪರಲೋಕದ ಮಾರ್ಗ ಪುರದ ಬೀದಿಯಂತೆ ।
ಅರೆಮರೆ ಇಲ್ಲದಲೆ ಕಾಣಿಸುವದು ಸತ್ಯಾ ।
ಪರಬುದ್ಧಿ ಪ್ರತ್ಯಕ್ಷವಾಗುವದು ಸತ್ಯಾ ।
ಪರಮ ಜ್ಞಾನಿಯಾಗಿ ಸುಖಿಸುವನೋ ।
ಎರಡೆಂಟುದಿಕ್ಕಿನಲ್ಲಿ ಆಗುವ ವಿವರ ವಿ–।
ಸ್ತಾರವಾಗಿ ತಿಳಿದವದು ಗುಣಿಸಿದರೂ ।
ಹರಿನಾಮದಿಂದ ಬಂದ ಜ್ಞಾನಕೆ ಇನಿತು ।
ಚರಿಯಲಿಪ್ಪದೆಂದು ಶಂಕಿಸಾದಿರು ।
ಅರುಹುವೆ ಮನಕೆ ಅನುಭವವಾಗುವಂತೆ ನಿಂ–।
ದಿರದೆ ಲಾಲಿಸುವದು ಭಕುತಿಯಿಂದಾ ।
ನರನೊಬ್ಬ ಅಂಜನವಮಾಡಿದರಿಂದದು ।
ಕರತಳದಲ್ಲಿ ಪಚ್ಚಿಸಿಕೊಂಡರೆ ।
ಸರಿಸಾದೂರದಲ್ಲಿದ್ದ ವಸ್ತು ಕಾಣಿಸುವುದು ।
ಧರಿಯೊಳಗಿಂಥ ಈಜಡಕೆ ಈ ಸಾಮರ್ಥಿಕೆ
ಸ್ಥಿರವಾಗಿ ಇರಲಿಕ್ಕೆ ಜ್ಞಾನದೃಷ್ಟಿಗೆ ಕಾಂಬೋ –।
ದರಿದೇನೊ ಎಲೋಮನವೆ ಜಡ ಇಂದ್ರಿಯಂಗಳು ।

ನಿರುತಲಿದ್ದರೇನು ಜ್ಞಾನ ಅಧಿಕವಾಗೆ ।
ಹೊರಗೆ ಒಳಗೆ ಮಾಳ್ಪದೆಲ್ಲ ಜ್ಞಾತ ।
ಪರಮಪುರುಷ ರಂಗ ವಿಜಯವಿಠ್ಠಲರೇಯನ ।
ಚರಣ ಧ್ಯಾನವಮಾಳ್ಪ ಜ್ಞಾನೋಪಾಸನೆ ಬಲವೊ ॥೩॥

**ಅಟ್ಟ ತಾಳ**

ಅನುಭವವಿಲ್ಲದ ಜ್ಞಾನದ ಫಲವೇನು ।
ಅನುದಿನ ಜ್ಞಾನಕ್ಕೆ ಪ್ರತಿಷ್ಠೆಯಾತಕೆ ।
ಅನಿಮಿಷ ಮುನಿಜನ ಕೊಂಡಾಡಲ್ಯಾತಕೆ ।
ಘನತನವ್ಯಾತಕ್ಕೆ ಜ್ಞಾನಿಮನುಜನೆಂದು ।
ತೃಣ ಮಿಕ್ಕಾದದಕೆ ಸಾಧನಜನುಮ ವ್ಯಾತಕ್ಕೆ ।
ನಿನಗೆ ನೀನೆನೋಡು ಜ್ಞಾನಕ್ಕೆ ಶ್ರೇಷ್ಠತ್ವ ।
ವನಜನಾಭನೆ ತಾನೆ ಜ್ಞಾನಕ್ಕೆ ಸಿಲುಕುವ ।
ಚಿನುಮಯರೂಪಗಳು ತೋರಿಕೊಳುತ ಲಿಂಗ –।
ತನುವೆ ಪೋಗುವಂತೆ ಗುಣಾನಂತನ ಮಾಳ್ಪ ।
ಪ್ರಣತನಾಗಿರುವ ರಾಮಕೃಷ್ಣ ಗೋವಿಂದ ವಾ–।
ಮನ ಮಧುಸೂದನ ಮುಕ್ಕುಂದ ಜನಾ – ।
ರ್ದನ ಅಚ್ಯುತಾನಂತ ನಾಮ ಉಚ್ಚರಿಸಲು ।
ಉಣಲುಂಟು ಉಡಲುಂಟು ಏನೇನು ಬೇಡಿದ ।
ಮನೋಭಿಷ್ಟೆಯ ಉಂಟು ಮಾತು ಸತ್ಯವೆ ಉಂಟು ।
ಕನಸಿನೊಳಾದರು ಕಾಣಿಸವು ಪಾಪಾ–।
ಗಣಗಳೆಲ್ಲ ಕೇಳಿ ಜ್ಞಾನದ ಮಹಿಮಾ ।
ಜನನವಿದೂರ ನಮ್ಮ ವಿಜಯವಿಠ್ಠಲನಂಘ್ರಿ ।
ಮನದಲ್ಲಿ ನಿಲ್ಲಿಸಲು ಉತ್ಸಾಹ ಎಂದಿಗೂ ॥೪॥

**ಆದಿ ತಾಳ**

ವಿದ್ಯದ ಬಲಕೇಳೋ ಸುಯಜ್ಞ ಮುನಿ ಬಾಲಕ ।
ಶುದ್ಧಾತ್ಮ ಕಾನನದಲ್ಲಿ ಪೋಗುತಿರೆ ಮಹ ।
ಕ್ರುದ್ಧವತಾಳಿ ಇಪ್ಪತ್ತೆಂಟು ಪಿಶಾಚಿಗಳು ।
ಮದ್ದೆವೆಂದು ವೇಗಾಹರಿದದ್ದು ಓಡಿಬರಲು ।
ಖದ್ಯೋತವರ್ನದಂತೆ ಜ್ಞಾನಿಯ ಕಾಂತಿಯಿಂದ
ಪೊದ್ದಿ ಭೀತಿಯಿಂದ ವಂದನೆಮಾಡಿ ನಮ್ಮ – ।
ನುದ್ಧರಿಸು ಎಂದು ವಶವಾದರು ಕೇಳಿ ।

ಭದ್ರಗತಿಯ ಪಥವ ಸೇರಿದರು ಬಿಡದೆ ।
ಈ ಧರಿಯೊಳು ಭಕ್ಷಿಸಲಿ ಬಂದು ಕ್ರೂರರು ।
ಕ್ಷುದ್ರತನವಬಿಟ್ಟು ಗೆಳೆಯರಾದರು ನೋಡು ।
ಪದ್ಮನಾಭನ ಪೊಂದಿ ಜ್ಞಾನಸಂಪಾದಿಸಿದ ।
ಸದ್ಮನಿಗೆ ಸಮಸ್ತ ಜಗತ್ತು ವಶಕರವೊ ।
ಸಿದ್ಧಾಂತ ಪ್ರಮೇಯ ಇದೆ ಇದರಂತೆ ಚರಿಸಿದರೆ –
ಇದ್ದಲ್ಲಿ ಸೌಕರ್ಯವೂ ಆವಮನುಜಗಾಗೆ ।
ಬುದ್ಧಿಪಾಲಿಸುವ ಪಾವನ್ನ ವಿಜಯವಿಠಲನ್ನ ।
ಹೃದ್ಯದಲ್ಲಿ ಇಡಲು ನೆನೆದಂತೆ ಸಾಕಾರ್ಯ ॥೫॥

**ಜತೆ**

ಮಾತುಮಾತಿಗೆ ಹರಿನಾಮವೆ ಗತಿಯೆನ್ನು ।
ಗಾತುರ ನಿರ್ಮಲಿನಾ ವಿಜಯವಿಠ್ಠಲ ವೊಲಿವಾ ॥೬॥

* * *

## ಸುಳಾದಿ – ೫೨

**ಅಡಿಗಡಿಗೂ ಅರ್ಜುನಸಾರಥಿಯ ನಾಮವನ್ನು ಸ್ಮರಿಸು, ಗರ್ಜಿಸು. ಶ್ರೀಹರಿಯ ಪಾದಾಬ್ಜವನ್ನು ಸ್ಮರಿಸದ ದುರ್ಜೀವಿಗೆ ತಮಸು ನಿಶ್ಚಯ. ಸದಾಕಾಲ, ಸರ್ವತ್ರ ಜಗದೊಡೆಯನ ಅಮೃತನಾಮದೆಡೆಯನ್ನು ಉಣದವನ ಮಿಡುಕಿಗೆ ಕಡೆಯಿಲ್ಲ.**

**ಸ್ನಾನ, ಮೌನ, ಧ್ಯಾನ, ದಾನ, ಗಾನ, ಜ್ಞಾನ ಎಲ್ಲವೂ ಶ್ರೀಹರಿ ನಾಮವೇ. ಇದೇ ಸಾಧನ ಸಂಪತ್ತು. "ಹರಿನಾಮ ನೆನೆಯದಿರೆ। ಶರಧಿ ಬತ್ತಿದ ಮೀನು, ವರಲಿದಂತೆ ವರಲಿ ಹೀನನಾಗುವರು" ಎನ್ನುತ್ತಾರೆ ದಾಸರು.**

**ನರಕ ವಾಸಿಗಳನ್ನು ಉದ್ಧಾರಮಾಡಿದ, ಪರಿಪೂರ್ಣ ರಕ್ಷಕವಾದದ್ದು. ಶ್ರೀಹರಿನಾಮ ಎಂಬುದಾಗಿ ಹರಿನಾಮದ ಮಹತ್ವವನ್ನು, ಮಹಾತ್ಮ್ಯೆಯನ್ನು ಈ ಸುಳಾದಿ ತಿಳಿಸುತ್ತದೆ.**

**॥ ರಾಗ–ಭೈರವಿ–ಧ್ರುವ ತಾಳ ॥**

ಹೆಜ್ಜೆ ಹೆಜ್ಜೆಗೆ ಒಮ್ಮೆ ಅರ್ಜುನಸಾರಥಿ ಕೃಷ್ಣ ।
ಮೂರ್ಜಗದೊಡಿಯಾ ಧೂರ್ಜಟಿಯ ಪ್ರಿಯಾ ।
ನಿರ್ಜರರ ಪಾಲಾ ವಿವರ್ಜಿತಲಯ ಕಾಯಾ ।
ಸಜ್ಜನರ ಮನೋಹರ ದುರ್ಜನರ ಸಂಹಾರಾ ।
ವಜ್ಜರ ಪಂಜರ ಭಕುತಜನಕೆ ಎಂದು ।

ಲಜ್ಜೆಯನು ತೊರೆದು ನಿರ್ಲಜ್ಜರಾಗೀ ।
ಪರ್ಜನ್ಯಗರೆವ ಘನಗರ್ಜಿಸಿದೋಪಾದಿಯಲಿ ।
ಗರ್ಜನೆಯ ಮಾಡುತ್ತ ಈ ಜಗದೊಳಗೆ ।
ಪರ್ಜನ್ಯನಾಮ ಸಿರಿ ವಿಜಯ ವಿಠಲನ ಪಾ-।
ದಾಬ್ಜವನು ಸ್ಮರಿಸದ ದುರ್ಜೀವಿಗೆ ತಮಸು ॥೧॥

**ಮಟ್ಟ ತಾಳ**

ನಡೆನಡೆದು ದಾರಿ ವಿಡಿವಿಡಿದು ಪೋಗೊ-।
ತಡಿಗಡಿಗೆ ನಲಿದು ಅಡಿಗಡಿಗೆ ಬಿಡದೇ ।
ಒಡಲೊಳಗಾಡುವನ ವಡವಡನೆ ಶಬ್ದ ।
ನುಡಿನುಡಿದು ಹರುಷ ಪಡಪಡದು ಜನ-।
ದೊಡಿಯ ಅಮೃತನಾಮ ವಿಜಯವಿಠ್ಠಲನ್ನ ।
ಕಡುನಾಮಾಮೃತದೆಡೆಯಣ್ಣನದವನು ।
ಅಡಿ ಅಡಿ ಅಡಿಯಾಗಿ ಮಿಡಕೋದು ಕಡೆಗಾಣೆ ॥೨॥

**ತ್ರಿವಿಡಿ ತಾಳ**

ಹರಿನಾಮವೇ ಸ್ನಾನ, ಹರಿನಾಮವೇ ಮೌನ ।
ಹರಿನಾಮವೇ ಧ್ಯಾನಾ, ಹರಿನಾಮವೇ ದಾನ ।
ಹರಿನಾಮವೇ ಗಾನ, ಹರಿನಾಮವೇ ಜ್ಞಾನಾ ।
ಹರಿನಾಮವೇ ಸರ್ವ ತೀರ್ಥಯಾತ್ರೆಗಳು ।
ಹರಿನಾಮವೇ ಕೃತು ಹರಿನಾಮವೇ ವ್ರತ ।
ಹರಿನಾಮವೇ ಸಕಲ ಸಾಧನ ಸಂಪತ್ತು ।
ಹರಿನಾಮವೇ ಗತಿ ಹರಿನಾಮವೇ ಮತಿ ।
ಹರಿನಾಮವೇ ಹಿತ ಹರಿನಾಮಾಮೃತಾ ।
ಹರಿನಾಮ ನೆನಿಯದಿರೆ ಶರಧಿ ಬತ್ತಿದ ಮೀನು-।
ವರಲಿದಂತೆ ವರಲಿ ಹೀನರಾಗುವರು ।
ಹರಿನಾಮ ಒಂದೆ ಉಳ್ಳರೆ ಬಂದದುರಿತ ಪರಿ-।
ಹರ ಮಾಡುವನು ಗಂಭೀರ ವಿಜಯ ವಿಠ್ಠಲ್ಲಾ ॥೩॥

**ಅಟ್ಟ ತಾಳ**

ಹರಿಯೆಂದು ದಿನದಲ್ಲಿ ಸಮರಸದ ನರಗುರಿಯಾ ।
ಕರಿಯನೋ ಸಂಗಡ ನೆರೆಯೊನೊ ಬೆರೆಯೊನೋ ।
ಮರಳೆಸರಸದಲ್ಲಿ ಕುಳ್ಳಿರಿ ನಿಂದಿರೆ ।

ಸರಿದು ಪೋಗುವನತಿ ದೂರದಲ್ಲಿ ನೋಡಿ ।
ದುರುಳಗೆ ಶರಣೆಂದು ಎರಗಿದಾರೆ ಯಮ ।
ಕರವ ಉತ್ತಿರುಸವ ಕರುಣವಿಲ್ಲದಲೆ ।
ಹರಿನಾಮ ಮರೆದವ ಮರವನ್ನಿ ಮರವನ್ನಿ ।
ಮರಪುಟ್ಟಿ ಕುಲಕೆ ವಿರೋಧಿಯಾದನೆನ್ನಿ ।
ಸುರಪಾಲ ಮಹಿಧರ ವಿಜಯವಿಠಲನ್ನ ।
ಮರದು ತನ್ನಯ ಕುಲವ ನಿರಿಯಾದೂಳಿಡುವನು ॥೪॥

### ಆದಿ ತಾಳ

ಕೇಳಿ ಕೇಳಿ ಇಹಜನರು ಪೇಳುವೆನು ಕ್ಷೀತಿಯಲ್ಲಿ ।
ಕಾಲಾಕಾಲಾವೆನ್ನದೆ ಶ್ರೀ ಲೋಲನ್ನ ಕೊಂಡಾಡಿದರೆ ।
ಫಾಲದಲ್ಲಿ ಬರದ ಹೀನಲಿಖಿತಾ ತೊಡದೂ ।
ಪಾಲಿಸುವ ಪರಮ ಸಂಪದವನಿತ್ತು ಇವನ ।
ಪೀಳಿಗೆಯ ಲಾಲಿಸುವ ತಿಳಿನಿಂದಲಿ ಕರಿಸಿ ।
ಆಳುವ ಸಂಸ್ಥಾನ ನಾಮ ವಿಜಯ ವಿಠ್ಠಲ ಕರು ।
ಣಾಳಿಯ ನೆನೆಯದವನು ನಾಮಾನಾಮಾ ಇಟ್ಟರೇನು ॥೫॥

### ಜತೆ

ನರಕಾದವರ ಉದ್ಧಾರವಮಾಡಿದ ನಾಮಾ ।
ಪರಿಪೂರ್ಣ ರಕ್ಷಣ ವಿಜಯ ವಿಠಲನನಾಮಾ ॥೬॥

* * *

## ಸುಳಾದಿ – ೫೩

ಅನಾಥಬಂಧು, ದೀನದಯಾಳು, ಅನಾದಿದೈವನಾದ, ಜ್ಞಾನಾದಿ ಗುಣಪೂರ್ಣನಾದ ನಾರಾಯಣನ ನಾಮಕ್ಕೆ ಬೇರಾವುದೂ ಸರಿಯಿಲ್ಲ.

'ನಾರಾಯಣಾ' ಎಂಬ ನಾಮ ನುಡಿಯುವುದರಿಂದ ನಾನಾ ನರಕ ನಾಶ, ರಾಯ ಪದವಿ ದೊರೆತು ಎಲ್ಲ ಕಾಲದಲ್ಲಿಯೂ ಶ್ರೇಯಸ್ಸು ದೊರೆತು ಆನಂದಾಭಿವೃದ್ಧಿಯಾಗುವದು. ಇಂತಹ ನಾಮದ ಉನ್ನತವಾದ ಧ್ಯಾನವನ್ನು ಕೈಕೊಂಡವನ ಪುಣ್ಯ ಅನಂತ, ಈ ನಾಮಕ್ಕೆ ಬೇರಾವುದೂ ಸರಿಯಿಲ್ಲ.

ರಮಾ ಬ್ರಹ್ಮಾದಿ ದೇವತೆಗಳು ಈ ನಾಮವನ್ನು ಸ್ಮರಿಸಿ ಧನ್ಯರಾಗಿದ್ದಾರೆ. ಶ್ರೀಹರಿಯನ್ನು ಭಜಿಸಿ, ನಿಲಿಸಿ, ಒಲಿಸಿ ಎಂಬುದೇ ಈ ಸುಳಾದಿಯ ಮುಖ್ಯ ಸಂದೇಶ.

**॥ ರಾಗ–ವರಾಳಿ–ಧ್ರುವ ತಾಳ ॥**

ಅನಾಥ ಬಂಧು ದೀನದಯಾಳು ಅನಾದಿದೈವಾ ।
ಅನಿಮಿತ್ಯ ಜೀವಾ ಅನಾಮಯಾ ಅನಂತ ।
ಅನಂತಮೂರ್ತಿ ಪ್ರಧಾನ ಪುರುಷರ ಧ್ಯಾನಕ್ಕೆ ದೂರಾ ।
ಆನಂದಮಯಾನತಿ ಜ್ಞಾನಾದಿ ಪೂರ್ಣಾ ।
ವಾಣಿಯರಸನಯ್ಯಾ ಅನರ್ಪಿತನ್ನೇ ।
ಪ್ರಾಣಾಪಾನಾದಿ ಪಂಚ ಪ್ರಾಣಾಹುತಿಯಿಂದ ।
ತ್ರಾಣರನ್ನೆ ಮಾಡಿ ಮಾಣದೆ ನಡಿಸುವ ।
ಜಾಣ ಬೃಹದ್ಭಾನು ವಿಜಯವಿಠ್ಠಲ ನೀನು ।
ನಾನಾಲೀಲೆಯ ತೋರುವ ನಾರಾಯಣದೇವ ॥೧॥

**ಮಟ್ಟ ತಾಳ**

ಅಚ್ಯುತಾನಂತ ಗೋವಿಂದ ಕೃಷ್ಣ ।
ಸಚ್ಚಿದಾನಂದ ವೈಕುಂಠರರಮಣ ।
ಅಚ್ಚರ ಮಹಿಮ ಕಮಲಜಾಂಡ ।
ಮುಚ್ಚಿ ಬಿಚ್ಚುವಂಥ ಬಿಗಹುಪ್ರತಾಪಾ ।
ಅರ್ಚಿಷ್ಮಾನೆಂಬೊ ನಾಮದೊಡಿಯ ವಿಜಯವಿಠ್ಠಲನೆ ।
ಅಚ್ಚುತ ಪದವಿಗರುಹಾ ನೀನೇ ॥೨॥

**ತ್ರಿವಿಡಿ ತಾಳ**

**ನಾ** ಎಂದು ನುಡಿಯಲು ನಾನಾನರಕ ನಾಶ ।
**ರಾ** ಎಂದು ಪೇಳಲು ರಾಯ ಪದವಿಯಕ್ಕು ।
**ಯ** ಎಂದು ವರ್ಣಿಸಲು ಎಲ್ಲಕಾಲದಲ್ಲಿ ।
ಶ್ರೇಯಸ್ಸಿನಲ್ಲಿ ಆನಂದಕ್ಕೆ ಅಭಿವೃದ್ಧಿ ।
**ಣಾ** ಎಂದದರ ಫಲಾವಾರು ಪೇಳುವರಯ್ಯಾ ।
ಭೂವ್ಯೋಮ ಪಾತಾಳ ಮಧ್ಯದಲ್ಲಿ ।
ರಾಯಾ ಮಹಿಷ್ವಾಸಾ ವಿಜಯ ವಿಠ್ಠಲನ್ನ ।
ಗಾಯನ ಮಾಳ್ಪನ್ನ ಮತಿಗೆ ನಮೋನಮೋ ॥೩॥

**ಅಟ್ಟ ತಾಳ**

ಪನ್ನಗ ಮಥನನ್ನ ಚನ್ನಾಗಿ ಮನದಲ್ಲಿ ।
ಸನ್ನಿಲ್ಲಿಸಿಕೊಂಡು ಉನ್ನತಧ್ಯಾನವನು ಕೈಕೊಂಡ –।
ವನ್ನ ಪುಣ್ಯಕ್ಕೆ ಸರಿಯನ್ನು ಪೇಳುವರಾರು ।

ಭಿನ್ನವಾಡಿದರೆ ಸುಣ್ಣಪುಡಿಯಲಿಟ್ಟು-।
ತಣ್ಣೀರು ಪೊಯಿಸುವನು ಪನ್ನಗಮಥನನ ।
ಚನ್ನಾಗಿ ಮನದಲ್ಲಿಡೆ ।
ಘನ್ನ ಪ್ರಜಾಪತಿ ವಿಜಯ ವಿಠ್ಠಲ ಸಂ-।
ಪನ್ನ ನಾಮಕ್ಕೆ ಇನ್ನಾವದು ಸರಿ ॥೪॥

**ಆದಿ ತಾಳ**

ಅಜ ಸುರ ದಿಕ್ಪಾಲಕಾ ಪ್ರಜೆಸುರ ಸಮುದಾಯ ।
ಗಜ ಅಜಮಿಳ ಪರಮಾ ಭಜಕರ ಮನೋಹಂಸಾ ।
ತ್ರಿಜಗವಂದಿತ ಪಂಕಜಪತಿ ಮಹಾಮಾಯಾ ।
ವಿಜಯವಿಠ್ಠಲರೇಯಾ ನಿಜವಾದ ಮಹಾಮಹಿಮಾ ॥೫॥

**ಜತೆ**

ಕುಲವೆಂಬೊ ಪಾಪಕ್ಕೆ ಪಾವಕ ಹರಿನಾಮಾ ।
ತಿಳಿದು ಶ್ರೀಮತೆ ನಮ್ಮ ವಿಜಯವಿಠಲನೊಲಿಸೆ ॥೬॥

* * *

## ಸುಳಾದಿ – ೫೪

**ಮನಸ್ಸು ವಿಷಯಗಳಲ್ಲಿ ಚರಿಸಿದರೂ ಸರಿ. ಪ್ರತಿಕ್ಷಣ ಸರ್ವತಂತ್ರ ಸ್ವತಂತ್ರನಾದ, ಸರ್ವತ್ರವ್ಯಾಪ್ತನಾದ, ಕರುಣಾಳುವಾದ ಪರಮಾತ್ಮನ ನಾಮವನ್ನು ನೆನೆದರೆ ಅದೇ ಪುಣ್ಯ ಅವನ ವಿಸ್ಮರಣೆಯೇ ಪಾಪ ಎಂಬ ವಿಷಯದ ವಿವರಣೆಯನ್ನು ಈ ಸುಳಾದಿಯಲ್ಲಿ ನೋಡುತ್ತೇವೆ.**

**॥ ರಾಗ–ಭೈರವಿ–ಧ್ರುವ ತಾಳ ॥**

ಪೂರ್ಣಗಣ್ಯಾ ಗುಣಾರ್ಣವ ನವಮೋಹನ್ನಾ ।
ಸ್ವರ್ಣಜ್ಯೋತಿ ಸಕಲ ಜೀವಜಡರ ವೊಡಿಯಾ ।
ವರ್ಣಿಸಬಲ್ಲೆನೆ ನಿನ್ನ ಮಾಯಾ ನಿತ್ಯಾ ।
ವರ್ಣದಲ್ಲಿ ತತ್ತು ನಾಮದಲ್ಲಿ ವರ್ನಾ ।
ವರ್ಣದಿಂದ ಕರಿಸಿಕೊಂಬುವನೇ ಸೂ-।
ಪರ್ಣ ವಾಹನಾ ಧರ್ಮಸ್ಥಾಪ ಚತುರಾ ।
ವರ್ಣಾಶ್ರಮದಲ್ಲಿ ನೀನೆ ನೇಮನನಾಗಿ ।
ನಿರ್ಣಯ ಕರ್ಮಂಗಳ ಮಾಡಿಸುವೆ ।

ನಿರ್ಣಯದಲ್ಲಿ ನಿನ್ನ ಕ್ರೀಡೆಯ ತಿಳಿದು ಸಂ-।
ಕೀರ್ಣವುಳ್ಳವರ ಕೈಯ ಪಿಡಿದು ।
ದುರ್ನಡತಿಯ ಬಿಡಿಸಿ ಸಾಧನಸಂಪತ್ತು ।
ಪೂರ್ಣವಾಗಿ ಮಾಡಿಸುವ ಮಧುಸೂದನಾ ।
ಕರ್ಣದ್ವಾರದಿ ಪೊಕ್ಕು ಬಲುಕಾಲದ ಕರ್ಮ ।
ಚೂರ್ಣ ಮಾಡಿ ಕಳೆವ ಚತುರಾವಟದ -।
ಪರ್ನ ಪರಿಯಂಕ ವಿಜಯವಿಠ್ಠಲ ಸೂ-।
ವರ್ನ ಸಂತತ ಮುಖ್ಯಪ್ರತಿಪಾದ್ಯ ವೇದವೇದ್ಯಾ ॥೧॥

**ಮಟ್ಟ ತಾಳ**

ನಿನ್ನ ಕೀರುತಿ ನಿನ್ನ ಮೂರುತಿ ।
ನಿನ್ನ ಕೀರ್ತನೆ ನಿನ್ನ ಪ್ರಾರ್ಥನೆ ।
ನಿನ್ನ ಚರಿತೆ ನಿನ್ನ ವಾರಿತೆ । ನಿನ್ನ ಶಕುತಿ ನಿನ್ನ ಯುಕುತಿ ।
ನಿನ್ನ ವ್ಯಾಪುತಾ ನಿನ್ನ ಗುಪುತಾ । ನಿನ್ನ ವ್ಯಕುತಿ ನಿನ್ನ ಭಕುತಿ ।
ನಿನ್ನ ಧೈರ್ಯ ನಿನ್ನ ಶೌರ್ಯ ।
ನಿನ್ನ ಕಾರ್ಯ ನಿನ್ನ ಚರಿಯಾ ।
ನಿನ್ನ ದೊರೆತನ ನಿನ್ನ ಹಿರೇತನ ।
ನಿನ್ನ ರೂಪ ನಿನ್ನ ಸಲ್ಲಾಪ ।
ನಿನ್ನ ಮಾಯಾ ನಿನ್ನ ಸಹಾಯಾ ।
ನಿನ್ನ ಸ್ನೇಹಾ ನಿನ್ನ ಮೋಹಾ ।
ನಿನ್ನ ನಿರ್ಗುಣಾ ನಿನ್ನ ತ್ರಯಗುಣಾ ।
ನಿನ್ನ ಧರ್ಮಾ ನಿನ್ನ ಮರ್ಮಾ ।
ನಿನ್ನ ಧೈರ್ಯ ನಿನ್ನ ವೀರ್ಯಾ ।
ನಿನ್ನ ಸಿದ್ಧಿ ನಿನ್ನ ಬುದ್ಧಿ ।
ನಿನ್ನ ವಿನೋದಾ ನಿನ್ನ ಆನಂದಾ ।
ನಿನ್ನ ನೋಟಾ ನಿನ್ನ ಆಟಾ ।
ನಿನ್ನ ಭಯವು ನಿನ್ನ ಕಳವು ।
ನಿನ್ನ ಹಮ್ಮು ನಿನ್ನ ಸೊಮ್ಮು ।
ನಿನ್ನ ಕೋಪಾ ನಿನ್ನ ತಾಪಾ ।
ನಿನ್ನ ಕುರುಹು ನಿನ್ನ ಕರುಣಾ ।
ನಿನ್ನ ಕರುಣಾ ನಿನ್ನ ಕರುಣಾ ।
ನಿನ್ನ ನಗೆ ನಿನ್ನ ಬಗೆ ಇನ್ನು ಎಣಿಪರಾರು ।
ಅನಂತ ಅನಂತ ಆನಂದ ನಂದಾ ।

ಅನ್ನ ಆನಂದ ಪುಣ್ಯಾಗ್ರಗಣ್ಯ ಅನಿರ್ವಿಣ್ಯ ।
ಧನ್ಯಾ ವನಧಿ ಕನ್ಯಪತಿ ಸೌ-।
ಜನ್ಯ ಅನುಗಣ್ಯ ಮಾನ್ಯಮಾನ್ಯ ಚೇ-।
ಬೆನ್ನಾಗಿಪ್ಪ ವಿಜಯ ವಿಠ್ಠಲಾ ।
ಅನಂತ ರೂಪಾ ಅನಂತ ರಮಣಾ । ॥೨॥

### ತ್ರಿವಿಡಿ ತಾಳ

ಹಿಂದೆ ಈ ಶರೀರ ವಿದರೊಳು ಮನಹತ್ತು-
ಇಂದ್ರಿಯಂಗಳು ಅಲ್ಲೆ ತದ್ಗತವಾಗಿಪ್ಪಾ-।
ನಂದಾ ತಾತ್ವಿಕರಯ್ಯಾ ಬೊಮ್ಮಾದಿಗಳ ಸಹಿತ ।
ಒಂದೊಂದು ವ್ಯಾಪಾರದಲ್ಲಿ ಸ್ಥಿರವಾಗಿ ।
ಪೊಂದಿದ್ದರಲ್ಲದೆ ತೊಲಗಿ ಪೋದವರಲ್ಲ ।
ಅಂದೆ ಇಂಥಾದ್ಯಾಕೆ ಆಗದ್ದೇನೋ ।
ಇಂದಿರಾಪತಿ ನೀನೆ ಇದ್ದು ಇಲ್ಲದಂತೆ ।
ಮಂದಮತಿಗೆ ತಿಳುವದಲ್ಲಾಡಿದೋ ।
ಇಂದು ವ್ಯಕ್ತನಮಾಡಿ ಎನ್ನೊಳಗೆ ನೀನು ।
ನಿಂದು ಪೂಜೆಯಗೊಂಬೆನೆಂಬ ಹರುಷದಲ್ಲಿ ।
ಕುಂದದೆ ಜಗದೊಳು ತೋರಿದಂತಾಯಿತು ।
ಅಂದಿದ್ದವನಲ್ಲದೆ ಪೊಸದಾದಿನೇ ।
ಸಂದೇಹ ಸಲ್ಲದು ಎನಗೆ ನಿನ್ನ ಲೀಲೇ ।
ಬಿಂದುಮಾತುರ ನೀನೆ ತಿಳುಹಲಾಗಿ ।
ಗಂಧ ಕಸ್ತೂರಿಲೇಪ ವಿಜಯವಿಠ್ಠಲ ಹೃದಯ-।
ಮಂದಿರದೊಳಗಿಪ್ಪ ಪರಮಪಾವನ ರೂಪಾ ॥೩॥

### ಅಟ್ಟ ತಾಳ

ಇದರಂದದಲಿ ಶುದ್ಧ ಜನರು ಕರೆದುನಿತ್ಯಾ ।
ಮಧುರೋಕ್ತಿಯಿಂದ ಭೋಜನಮಾಡಿಸಿದರೆ ಹ-।
ತ್ತದು ಎಂದು ನಾನಿದು ಜರಿದುಬಿಟ್ಟಿದ್ದೇನೆ ।
ಮೊದಲಿಗೆ ಸುಖಬಂದು ಪ್ರಾಪುತವಾದರೆ ।
ಅದನು ಬಲ್ಲೆನೆಂಬ ಮನುಜ ಮತ್ತಾವವಾ ।
ಚದುರಾ ನೀನಹುದೋ ಏನೆಂಬೆ ನೀನು ವಯಾ-।
ಡಿದ ಮಾಟಕ್ಕೆ ಬಲು ಸೋಜಿವಾಗಿದೆ ।
ಇದೆ ಸುಖ ಬೇಕೆಂದು ಹಾರೈಸಿದವನಲ್ಲಾ ।

ಅಧಿಷ್ಠಾನದಲ್ಲಿ ನಿಂದು ಮಾಡಿ ಮಾಡಿಸುವೆ ।
ಸದರವಿಲ್ಲದೆ ಸುಖತರವಾದರೇನು ಮ-।
ತ್ತದು ದುಃಖವಾದರೂ ಮಹಾವಳಿತಯ್ಯಾ ।
ಇದು ಅದು ಎನ್ನ ಸ್ವಾತಂತ್ರವೆಂದೆನದಲೆ ।
ಒದಗಲಾರವು ಕೇಳು ಪಾಪಪುಣ್ಯವೆರಡು ।
ಪದುಮೇಶ ವಿಜಯವಿಠ್ಠಲ ವಿಶ್ವರೂಪಾ ।
ಸದಮಲಾನಂದ ಸಜ್ಜನ ಪ್ರಿಯಾ ಮುನಿಗೇಯಾ ॥೪॥

**ಆದಿ ತಾಳ**

ಒಂದು ಹೆಜ್ಜೆಯಿಡಲು ಒಂದುಮಾತಾಡಲು ।
ಒಂದು ವಸ್ತುಪಿಡಿಯಲು ಒಂದು ಪರಿಮಳಕೊಳ್ಳಲು ।
ಒಂದು ಸಂಗತಿ ಐದಲು ಒಂದು ತುತ್ತುಮೆಲ್ಲಲು ।
ಒಂದೊಂದು ಈಪರಿ ಅಂದವಾದರು ನ-।
ನ್ನಿಂದ ವಾದದೇನೋ ಚಂದವಾಗಿ ನೋಡು ।
ಒಂದೊಂದರೊಳಗೆ ಬಹುಮಂದಿಯ ವ್ಯಾಪಾರಾ ।
ಪೊಂದಿರಲಾಗಿ ನೀನಂದ ಬಗೆಯೇನು ।
ವಂದಿಸುವೆನು ನಮ್ಮ ವಿಜಯವಿಠ್ಠಲರೇಯಾ ।
ಮಂದನಾದವನಿಗೆ ಬಂಧನದೊಳಗಿಡುವೆ ॥೫॥

**ಜತೆ**

ವಿಷಯಂಗಳಲ್ಲಿ ಚರಿಸಿದರೇನು ನಿನ್ನ ।
ಪೆಸರುಗೊಂಡರೆ ಪುಣ್ಯ ವಿಜಯವಿಠ್ಠಲರೇಯಾ ॥೬॥

* * *

## ಸುಳಾದಿ – ೫೫

**ಶ್ರೀ ಧನ್ವಂತ್ರಿದೇವರ ಸ್ತೋತ್ರ ಸುಳಾದಿ ಇದು. ೧೦ನೆಯ ಸುಳಾದಿಯ ಜೊತೆಗೆ ಇದನ್ನೂ ಪಾರಾಯಣ ಮಾಡಿದರೆ ಪೂರ್ಣ ಫಲವೆಂದು ಬಲ್ಲವರು ಹೇಳುತ್ತಾರೆ.**

**ವಾಗೀಶ ಪಿತನನ್ನು ಲೇಸಾಗಿ ನೆನೆದರೆ ಅಘನಾಶವೆಂದು ಯೋಗಿಗಳೆಲ್ಲರ ಅನುಭವದ ನುಡಿ, ನಡಿ.**

**ಶ್ರೀಹರಿನಾಮ ಸಂಸಾರ ಸಾಗರದಿಂದ ಪಾರುಗಾಣಿಸುತ್ತದೆ. ಭವರೋಗ ನಿವಾರಣೆಗೆ ಇದು ದಿವ್ಯವಾದ ಔಷಧವು. ಕುಡಿಯಬಲ್ಲವರಿಗೆ ಬಲು ರುಚಿಯಾದದ್ದು. ಬುದ್ಧಿವಂತರೆಲ್ಲರೂ ಮೆದ್ದು ಉದ್ಧಾರವಾಗಿದ್ದಾರೆ, ಉದ್ಧಾರವಾಗುತ್ತಾರೆ.**

**ಪರಮಾತ್ಮನ ನಾಮವೆಂಬ ಔಷಧಕ್ಕೆ ಬಹಿರಂತರ ರೋಗ ನಿವಾರಣವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಇದೇ ಈ ಸುಳಾದಿಯಲ್ಲಿ ಪ್ರತಿಪಾದಿತವಾದ ಮುಖ್ಯ ವಿಷಯ.**

**॥ ರಾಗ–ಮಧ್ಯಮಾವತಿ–ಧ್ರುವ ತಾಳ ॥**

ರೋಗ ನಿವಾರಣವಾಗುವದಿದು ಮಹಾ ।
ರೋಗಿಗಳು ನೆರೆದು ನಿಮಗ ಸುಪುರಾಣ ।
ಭಾಗವತ ಪಂಚರಾತ್ರಾಗಮವ ಶೋಧಿಸಿ ।
ವೇಗದಿಂದಲಿ ದುಗ್ಧಸಾಗರ ಮಧ್ಯದೊಳಗೆ ।
ನಾಗರಾಜನ ಮೇಲೆ ಯೋಗನಿದ್ರೆಯೊಳಿಪ್ಪ ।
ವಾಗೀಶ ಪಿತನ ಇಂಬಾಗಿ ನೆನಿಸಲು ।
ಪೋಗುವದಘವೆಂದು ಯೋಗೀಶ್ವರನು ಶಿರ–।
ದೂಗಿ ಸಾಕುವರೊ ಚನ್ನಾಗಿ ಶ್ರೀಹರಿಯ ನಾಮ ।
ಈಗ ಸಂಸಾರವೆಂಬೊ ಬ್ಯಾಗಿ ಮಧ್ಯದ ನರರು ।
ಜಾಗುಮಾಡದೆ ಬಲು ಜಾಗರರಾಗಿ ತಂಬಲಾಗುವಂತೆ ಉಂಡು ।
ತೇಗಿ ತೃಪ್ತಿ ಬಡುವದು ಭೋಗಾನುದಾ ನಿಮಗೆ ।
ಯೋಗಾನಂದ ಹಾಗಾರಾ ಹಾಗಾವಿತ್ತು ಲೋಗರಕ್ಕೈಯಿಂದ ।
ತೂಗಿ ಬೆಲಿಗೆವಸ್ತಾ ವೇಗತರುವದಲ್ಲ ।
ಶ್ರೀಗುರು ಧನ್ವಂತ್ರಿ ವಿಜಯವಿಠ್ಠಲನಾಮ ದ್ವೇಷ–।
ಭಾಗಿಗಳಿಗೆ ಸಲ್ಲಾ ಶ್ರೀಗೌರಿಪತಿ ಬಲ್ಲಾ ॥೧॥

**ಮಟ್ಟ ತಾಳ**

ಅಡವಿ ಗಿಡವತುಕ್ಕಿ ಆಗಳಿ ತರುವದಲ್ಲ ।
ಕೊಡಲಿಯಲಿ ಕಡಿದು ಪೊತ್ತು ತರುವದಲ್ಲ ।
ಪುಡಿಮಾಡಿ ಅರದು ಮುದ್ದೆ ಮಾಡುವದಲ್ಲ ।
ಅಡಿಗಿಯನೆ ಮಾಡಿ ಪಾಕಕ್ಕಿಳಿಪದಲ್ಲ ।
ಅಡಿಗಡಿಗೆ ಬಾಯ್ದೆರೆದು ಬೇಡುವದು ಅಲ್ಲ ।
ಕೊಡರು ಪರರು ಎಂದು ದುಃಖಬಡುವದಲ್ಲ ।
ಬಡವ ಭಾಗ್ಯವಂತರೆಂಬ ವಚನ ಸಲ್ಲ ।
ಪೊಡವಿಯೊಳಗೆ ಬಲು ಸವಿಯಾದೌಷಧವೊ ।
ಕುಡಿಯಬಲ್ಲವರಿಗೆ ರುಚಿ ಬಲುರುಚಿ ಕಾಣೊ
ಕಡಲಶಯನೆ ನಮ್ಮ ವಿಜಯ ವಿಠ್ಠಲರೇಯನ ।
ಕಡುನಾಮಾಮೃತವು ಸರ್ವರೋಗಹರವು ॥೨॥

**ತ್ರಿವಿಡಿ ತಾಳ**

ಪಥ್ಯ ಮಾಡುವದಲ್ಲ ಅನುಪಾನ ಮೊದಲಿಲ್ಲ ।
ಪೈತ್ಯಹೆಚ್ಚಿತು ಎಂದು ಬಳಲಿಬೀಳುವದಲ್ಲ ।
ಶೈತ್ಯವಾತ ಭ್ರಮಣ ಮೇಹ ಹೆಚ್ಚುವದಲ್ಲ ಅ–।
ಪಥ್ಯವಾಯಿತು ಎಂದು ಶೋಕಿಸುವದು ಸಲ್ಲ ।
ನಿತ್ಯಕೊಳ್ಳಲು ಲೇಶರುಚಿ ಕೆಡುವದಲ್ಲಾ ।
ಸತ್ಯವಲ್ಲದೆ ಇದು ಎಂದಿಗೂ ಪುಶಿಯಲ್ಲಾ ।
ಮೃತ್ಯು ಮೃತ್ಯುವಿನದೂತರಿಗೆ ಕಕ್ಕಸವಾಗಿಪ್ಪದು ।
ಭೃತ್ಯರಾದವರಿದು ಪಾಲಿಸುತಿಪ್ಪದು ।
ಸತ್ಯವಲ್ಲಭ ಸಿರಿ ವಿಜಯವಿಠ್ಠಲ ರಂಗನ್ನ ।
ಸ್ತುತ್ಯಾಮಾಳ್ವರ ಮನಕೆ ಶೋಭಿಸುವುದು ॥೩॥

**ಅಟ್ಟ ತಾಳ**

ಸರಿ ಬಂದದುಣಲುಂಟು ಬಂದ ಕಾಲಕ್ಕೆ ।
ಸರಿ ಸರಿ ಬಂದಂತೆ ಸುರಿದು ಸಖಿಸೆತನ್ನ ।
ಜರೆ ಮರಣ ಜಡ ಜ್ವರ ರೋಗಗಳು ।
ಉರಳಿ ಪೋಗುವವಯ್ಯಾ ।
ಸುರಕ್ಷಿತವಾಗಿ ಪರದಲ್ಲಿ ಪೊರವದು ।
ಸುರಮುನಿನುತ ಸಿರಿ ವಿಜಯವಿಠ್ಠಲರೇಯನ ।
ನೆರೆನಂಬಿದವರಿಗೆ ಹಿರಿದಾಗಿ ವೊಲಿವದೂ ॥೪॥

**ಆದಿ ತಾಳ**

ಬುದ್ಧಿವಂತರೆಲ್ಲರಿದು ಮೆದ್ದು ಸವಿನೋಡಿ ಜಗಕೆ ।
ಶುದ್ಧ ಜೀವಿಗಳಿಗಿದು ಸಿದ್ಧವೆಂದು ಧರೆಗೆ ಬೀರೇ ।
ಎದ್ದು ಮಲಗಿ ಕುಳಿತು ಇದ್ದು ತಿರುಗಾಡುತ ।
ಇದ್ದಕಾಲಕೆ ಸಮೀಪ ಹೊದ್ದುಕೊಂಡು ಇಪ್ಪದು ।
ಉದ್ದಿನಷ್ಟು ಪಾಪಾವ ಹೊದ್ದುಗೊಡದೆ ಓಡಿಸಿ ಜ್ಞಾ–।
ನಾಬ್ಧಿಯೊಳಗಿಡುವದು ಶ್ರದ್ಧಾವೈರಾಗ್ಯವಿತ್ತು ।
ಮುದ್ದುರಂಗ ವಿಜಯವಿಠ್ಠಲಾ ।
ವೈದ್ಯನೆ ತಾನಾಗಿ ನಿಂದು ಬದ್ಧವಾಗಿದ್ದ ಭವಕೆ ।
ಮದ್ದುಯಿತ್ತು ಮಾಣಿಸುವಾ ॥೫॥

**ಜತೆ**

ಬಹಿರಂತರರೋಗ ನಿವಾರಣವಾಗುವದು ।
ಅಹಿಶಾಯಿ ವಿಜಯ ವಿಠ್ಠಲನನಾಮ ಔಷಧಕೆ ॥೬॥

* * *

## ಸುಳಾದಿ – ೫೬

**ಶ್ರೂ ಭೂವಲ್ಲಭನೇ, ನೀನು ಭಕುತರನ್ನು ಕಾಯುವ ಬಗೆಯು ಬಹುವಿಚಿತ್ರವಾಗಿದೆ. ನಿನ್ನ ಲೀಲೆಗೆ ನೆಲೆಯಿಲ್ಲ. ಭಾವಜ್ಞರೊಡೆಯನೇ, ಸತತ ಕಾಯುವ, ಕರುಣಿಯಾದ ನೀನೇ ನನಗೆ ಸಂಜೀವ. ನೀನು ಮುದದಿಂದ ಒಲಿದರೆ ಪುಣ್ಯ ತಾನೇತಾನಾಗಿ ಒದಗುತ್ತದೆ.**

**ಸ್ವಾಮಿ, ನಿನ್ನ ದಯವಾದರೆ "ಉಪ್ಪಿಲ್ಲದಂಬಲಿ ಕುಡಿವಾನರಗೆ ಕೋಟಿ ಕೊಪ್ಪರಿಗೆ ಧನ ಇದ್ದಲ್ಲಿ ಮರೆತಂತೆ ॥" ನೀನು ಕ್ಷಣಬಿಡದೆ ಇರಲು ನನಗೆ ಯಾವ ಆಯಾಸವೂ ಇಲ್ಲ.**

**॥ ರಾಗ–ತೋಡಿ–ಧ್ರುವ ತಾಳ ॥**

ಶ್ರೀವಲ್ಲಭ ನಿನ್ನ ಕಾವೊ ಘನವೋ ।
ಭೂವಲ್ಲಭ ನಿನ್ನ ಕಾವೊ ಘನವೋ ।
ಆವಾವನಾವನೋ ಈ ವಸುಧಿಯೊಳ–।
ಗಾವಲ್ಲಿ ನೋಡಲು ದೇವರೊಳಗೆ ಕಾಣೇ ।
ಸೇವಕರಲ್ಲಿದ್ದ ಆವಾವಾದ್ರವ್ಯವ ।
ಕಾವು ಕಟ್ಟಲಿಯಿಂದ ಜೀವ ಜತನಮಾಡಿ ।
ಅವರಿಗೆ ಪ್ರಾಪುತವ ಮಾಡುಕೊಡುವೆ ।
ದೇವಾ ನಿನ್ನ ಲೀಲೆಗೆ ಆವುದು ನೆಲೆಗಾಣೆ ।
ಭಾವಜ್ಞರೊಡಿಯಾ ವಿಜಯವಿಠ್ಠಲರೇಯಾ ।
ಕಾವ ಕರುಣಿ ಸಂಜೀವ ಸತತ ಎನಗೆ ॥೧॥

**ಮಟ್ಟ ತಾಳ**

ಪದುಮನಾಭ ಪರಮಪುರುಷಾ ।
ಸದಮಲಾನಂದಾ ಸಾತ್ಯಕೀ ಪ್ರೀಯಾ ।
ಸುದರಶನ ಪಾಣಿ ಸುಲಭಾ ದೇವಾ ।
ಅದುಭೂತ ಮಹಿಮಾ ಅನಾದಿಸಿದ್ಧ ।
ಪದೋಪದಿಗೆ ನಿನ್ನ ಪಾದವನಂಬಲು ।

ಇದು ಅದು ಎಂಬೋದು ಅನಿಸಲಿಲ್ಲಾ ।
ಚದುರಂಗ ವಿಜಯವಿಠ್ಠಲ್ಲಾ ।
ಮುದದಿಂದ ವೊಲಿಯೋ ವೊದಗುವದು ಪುಣ್ಯಾ ॥೨॥

**ತ್ರಿವಿಡಿ ತಾಳ**

ಉಪ್ಪಿಲ್ಲದಂಬಲಿ ಕುಡಿವಾ ನರಗೆ ಕೋಟಿ ।
ಕೊಪ್ಪರಿಗೆ ಧನ ಇದ್ದಲ್ಲಿ ದೊರೆತಂತೆ ।
ತಿಪ್ಪಿಮೇಲೆ ಹೊರಳಿಮಲಗುವ ಮನುಜಗೆ ।
ಉಪ್ಪರಗಿ ಮೇಲೆ ಸುಖಿಸುವಂತೇ ।
ಚಿಪ್ಪುಗೀರಿತೆಂಬ ದಟ್ಟದಾರಿದ್ರಗೆ ।
ತುಪ್ಪಾ ಸಕ್ಕರಿ ಪಾಲು ಹಣ್ಣು ಮೆಲಿಸಿದಂತೆ ।
ಸರ್ಪ ಶಯನ ನೀನು ತಪ್ಪದೆ ದಯಮಾಡು–।
ತಿಪ್ಪದು ಅರಿಯರೂ ಸರ್ಪಭೂಷಾದಿಗಳು ।
ಸರ್ಪಕೇತನ ಗರ್ವಹರ ವಿಜಯವಿಠ್ಠಲ ।
ಅಪ್ಪನೇ ಜಗದೇಕವಂದ್ಯ ಸರ್ವೇಶಾ ॥೩॥

**ಅಟ್ಟ ತಾಳ**

ಹಿಂದಿನ ದಿನದಲ್ಲಿ ವೈಶ್ಯ ಮಾದಮ್ಮನ ।
ನಂದನ ನಂಜುಂಡ ಯಮಲೋಕಕ್ಕೆ ಪೋಗಿ ।
ಬಂದು ಪುರಂದರದಾಸರು ನಿಲ್ಲಲು ।
ಸಂದೇಹಗೊಳಿಸದೆ ಅವನ ಎಬ್ಬಿಸಿಕೊಟ್ಟಾ–।
ನಂದಮೂರುತಿಯೇ ನಿನ್ನಂಘ್ರಿಗೆ ನಮೋ ನಮೋ ।
ಇಂದು ಪೋಗಿದ್ದ ಜಡಪದಾರ್ಥವ ।
ತಂದು ಇತ್ತದು ಬಲು ಸೋಜಿಗವಲ್ಲವೋ ।
ಮುಂದಾಗಿ ಸಾಕುವ ವಿಜಯ ವಿಠ್ಠಲದೇವಾ ।
ಎಂದೆಂದಿಗೆ ನಂಬಿದವರಂಗ ಸಂಗಾ ॥೪॥

**ಆದಿ ತಾಳ**

ಭೂಯೋಮ ಪಾತಾಳ ಪಯೋಜಜಾಂಡದೋಳು ।
ಶ್ರೀಯರಸ ನಿನ್ನ ಪ್ರೀಯರ ವಡಿವೆವಸ್ತಾ ।
ವಾಯು ಮಳೆ ಪಾವಕ ಮಿಕ್ಕಾಯದಲ್ಲಿ ಹಾಕಿದರು ।
ಬೇಯದೆ ತಿರುಗಿ ಬಂದು ನ್ಯಾಯದಲ್ಲಿ ಸೇರುವದು ।
ನೋಯದಂತೆ ಸಾಕುವದು ಪಾಯಗಾರ ನೀನಹುದೊ ।

ನಾಯಿಗೆ ವರವಿತ್ತ ವಿಜಯವಿಠ್ಠಲರೇಯಾ ।
ನೀ ಎಡೆಬಿಡದಿರಲು ಆಯಾಸ ಒಂದೂಕಾಣೆ ॥೫॥

**ಜತೆ**

ಬೊಮ್ಮಾಂಡನುಂಗಿ ಉಗಳುವ ಮಹಾದೈವವೆ ।
ಈಮ್ಮಹಿಮೆ ಅರಿದೆ ವಿಜಯವಿಠ್ಠಲ ನಿನಗೆ ॥೬॥

* * *

## ಸುಳಾದಿ – ೫೭

**ಭಕುತರ ಪಾಲಿಸಿ, ಅವರ ಬಂಧನವನ್ನು ಪರಿಹರಿಸಿ ಕಾಯುವೆನೆನ್ನುತ್ತ, ಮಂದಹಾಸದಿಂದ, ವೈಯಾರದಿಂದ, ನನ್ನ ಹೃನ್ಮಂದಿರದಲ್ಲಿ ನಿಂತವನು ಶ್ರೀ ಪುರಂದರ ದಾಸರಿಗೊಲಿದ ಸರ್ವೇಶನೇ ?**

**ಸುರರೊಡೆಯನಾದ ಪಂಢರಿನಾಥನೋ, ತಿರುವೆಂಗಳನೋ, ಗರುಡಾದ್ರೀಶನೋ, ಕಂಚೀ ವರದರಾಜನೋ, ಬದರಿ ನಾರಾಯಣನೋ, ಬಿಂದುಮಾಧವನೋ, ಸಿರಿರಂಗನೋ, ಉಡುಪಿ ಕೃಷ್ಣನೋ, ಸರ್ವಾಂತರ್ಯಾಮಿದೇವನೋ, ಇಲ್ಲವೇ ನನ್ನ ಗುರುಗಳಾದ ಶ್ರೀ ಪುರಂದರದಾಸರಿಗೂ ಆದ ಧೀರನೋ ?**

**ಎಂಥ ಕರುಣನಿಧಿ ಭಕ್ತರಂತರಂಗದೊಳು ನಿಂತಾಡುವ ದೈವನು. ಪುರಂದರದಾಸರಿಗೆ ನಿರುತ ಒಲಿದ ನಿರ್ಮಲ ರೂಪಿಯಾದ ಕರುಣೆಯನ್ನು ಕಂಡು ಧನ್ಯನಾದೆನು ಎಂದು ಮುಂತಾದ ವಿವರವನ್ನು ತಿಳಿಸುವ ಭಗವದಪರೋಕ್ಷಕರವಾದ ಸುಳಾದಿ ಇದು.**

**॥ ರಾಗ–ವರಾಳಿ–ಧ್ರುವ ತಾಳ ॥**

ಬಂದು ನಿಂದವನಾರು ಎನ್ನ ಹೃದಯಾಬ್ಜ–।
ಮಂದಿರದೊಳು ಮಹಾ ಅಣುವಾಗಿ ತೋರುತ ।
ಮಂದಹಾಸದಿಂದ ವೈಯಾರದಿಂದ ಅರ–।
ವಿಂದ ಕರಗಳನ್ನು ತಿರುಹಿ ಸನ್ನೆಯಲ್ಲಿ ।
ಪೊಂದಿದ ಭಕುತರನ ಪಾಲಿಸಿ ಅವರ ।
ಬಂಧನ ಪರಿಹರಿಸಿ ಸಾಕುವೆನೆನುತಲಿ ।
ಒಂದೆ ಸಾರಿಗೆಯಲಿ ನೆನಿಸಲು ನಿಲ್ಲದೆ ।
ಅಂದು ಇಂದೆನ್ನದಲೆ ಚನ್ನಾಗಿ ಬರುವೆ–।
ನೆಂದು ಕೃಪೆಯಿಂದ ಪೇಳುವ ಜಾಣನು ।
ಇಂದ್ರಾದಿಗಳ ಮನಕೆ ಸಿಗದಾ ಮಹಾಮಹಿಮನೊ ।

ಚಂದಿರವದನ ಸಿರಿ ವಿಜಯವಿಠ್ಠಲ ಪು-।
ರಂದರ ದಾಸರಿಗೆ ವೊಲಿದ ಸರ್ವೇಶನೋ ॥೧॥

**ಮಟ್ಟ ತಾಳ**

ಸುರರೊಡಿಯಾ ಪಂಢರಪುರ ವಾಸನೊ ।
ತಿರುವೆಂಗಳೇಶನೂ ಗಿರಿಯ ತಿರಮಲನೊ ।
ಗರುಡಾದ್ರೀಶನೊ ವರಕಾಂಚಿ ಪುರದಾ ।
ವರದರಾಜನೊ ಪುರುಷೋತ್ತಮನೊ ಬದರಿ-।
ನಾರಾಯಣನೊ ವಾರಣಾಶಿ ಮಧ್ಯದಲ್ಲಿ ।
ವರ ಬಿಂದುಮಾಧವನೋ ।
ಸಿರಿರಂಗನೊ ರಜಿತಪುರಿ ಯಾವನೊ ।
ಪರಮಾತ್ಮ ಸರ್ವಾಂತರ್ಯಾಮಿ ದೇವನೊ ।
ಪರಿಪೂರ್ಣಕರುಣಿ ವಿಜಯವಿಠ್ಠಲ ಎನ್ನ-।
ಗುರು ಪುರಂದರ ದಾಸರಿಗೊಲಿದ ಧೀರನೋ ॥೨॥

**ತ್ರಿವಿಡಿ ತಾಳ**

ಒಂದೊಂದು ರೂಪದಲಿ ಮೊಳೆದು ಪೊಳೆದು ಮೊದ-।
ಲಿಂದದಲಿ ರೂಪವ ತೋರಿ ನಗುವ ಚಲುವ ।
ನೊಂದೆನೊ ಭವಾಂಬುಧಿ ಮಡುವಿನೊಳಗೆ ಬಿದ್ದು ।
ಮುಂದೆ ಸೇರಲಾರೆ ಮಾಯಾದೊಳು ।
ಹಿಂದೆ ನೊಂದದ್ದೆ ಸಾಕು ಸಾಕುವದಾತಾರಾ ।
ಬಂದು ನಿನ್ನ ಪೊಳೆಯನಲಿನ್ನು ಸಂಶಯವುಂಟೆ ।
ಕಂದರ್ಪ ಕೋಟಿಲಾವಣ್ಯ ವಿಜಯ ವಿಠ್ಠಲಾ ।
ಅಂದು ಪುರಂದರರನ ಮುಂದೆ ಆಡಿದ ದೈವಾ ॥೩॥

**ಅಟ್ಟ ತಾಳ**

ಎಂಥ ಕರುಣನಿಧಿ ನೀನು ಎಂಥ ದಯಾವಂತಾ ।
ಎಂಥ ಕಾಯಾದೊಳಗಂತಂತ್ತೆ ಇಪ್ಪನೆ ।
ಪೀತೆ ದಾಸರಿಗೆ ಬಂತೆಂಬ ಪ್ರಾರಬ್ಧ ।
ಅಂತಿಜನಲ್ಲಿಗೆ ಸಂತೋಷದಲ್ಲಿ ಪೋಗಿ ।
ಅಂತರಗೊಳಿಸದೆ ಚಿಂತೆ ಯಾತಕೆನೆ ನೀ-।
ನೆಂತು ಪುರಹರಿಸಿದೆ ಅಂತು ಬಲ್ಲವರಾರು ।
ಶಾಂತಮೂರುತಿ ನಮ್ಮ ವಿಜಯವಿಠಲ ಭಕ್ತ ।
ರಂತ ರಂಗದೊಳು ನಿಂತಾಡುವದೈವಾ ॥೪॥

**ಆದಿ ತಾಳ**

ಕಿರೀಟ ಕುಂಡಲ ಕುರುಳ ಗೂದಲು ।
ಕೊರಳ ಹಾರ ಕೈ ಮುದ್ರೆ ಪರಿ–।
ಪರಿ ಭೂಷಣ ಶೋಬಣ ವಸನ ।
ಚರಣ ನೂಪುರ ಕಡಗಗೆಜ್ಜೆ ।
ಗುರುವದೇವರ ದೇವ ಸಾ–।
ವಿರನಯನ ವಿಜಯ ವಿಠಲ ।
ಕರುಣಿ ಪುರಂದರ ದಾಸರಿಗೆ ।
ನಿರುತ ವೊಲಿದ ನಿರ್ಮಳ ರೂಪ ॥೫॥

**ಜತೆ**

ಧನ್ಯನಾದೆನು ಇಂದು ದಾನವಾರಿಯ ಕಂಡು ।
ಪುಣ್ಯ ಸಂಪಾದಿಸಿದೆ ವಿಜಯ ವಿಠಲನಿಂದಾ ॥೬॥

* * *

## ಸುಳಾದಿ – ೫೮

**ಈ ಶರೀರವು ಕ್ರಿಮಿರಾಶಿಯೆಂಬುದನ್ನು ತಿಳಿಯಲಿಲ್ಲ. ಡಂಭಕ ದಾಸನಾಗಿ, ಹಣಕ್ಕಾಗಿ ಹೆಣಗಿ ಹಣವಾದೆ, ನಿನ್ನ ಸ್ಮರಣೆಗೆ ತಾರಕವೆಂಬುದನ್ನು ಮರೆತೆ, ನಾನು ದೋಷಕಾರಿ, ಬದ್ಧ, ಆಸೆಬುರುಕನಾದ ಹೇಸಿ ಮಾನವನು. ನನ್ನ ಪೋಷಣೆಯ ಭಾರ ನಿನಗೆ ಸೇರಿದ್ದು. ದೋಷಗಳನ್ನು ದೂರೋಡಿಸಿ ಸದಾ ಹೃದಯದಲ್ಲಿ ವಾಸವಾಗಿದ್ದ ನಿನ್ನ ಸ್ಮೃತಿಕೊಟ್ಟು ಭಕ್ತಿಗೆ ಭೂಷಣನಾಗು ಸ್ವಾಮೀ.**

**ಪ್ರಹ್ಲಾದ, ಶುಕ. ರುಕುಮಾಂಗದ, ನಾರದ ಮುಂತಾದ ಭಕುತರು ನಿನಗೆ ಕೊಟ್ಟದ್ದೇನು ?**

**ಆತ್ಮನಾಮಕ ಪ್ರಾಜ್ಞಮೂರ್ತಿಯೇ ನಿನ್ನ ಬಿಂಬಮೂರ್ತಿಯನ್ನು ತೋರಿ, ಭವಪಾಶ ಹರಿದು ಜ್ಞಾನ ಸಂಭವಿಸುವಂತೆ ಅನುಗ್ರಹಿಸು.**

**॥ ರಾಗ–ರೇಗುಪ್ತಿ – ಧ್ರುವ ತಾಳ ॥**

ಸುಳಿಕುಮಾಯದ ನಡುಸುಳಿಯಿಂದ ಕಡೆಮಾಡಿ ।
ಸುಳಿಸುವದಾಲಿಸು ಸುಲಭರೊಡಿಯಾ ।
ಸುಳಿಸದಿರಿಲ್ಲಿಯೆ ಸುಳಿಸಾದಿನವಿದ್ದರು ।
ಸುಳವಾಗಿ ಮಾಡಿ ತೀರಿಸುವದು ಜೀಯಾ ।
ಸುಳವು ಕಾಣದಿದ್ದ ಶುದ್ಧಮುಗ್ಧಗೊಲಿದು ।

ಸುಳಿಯೊ ಸುಹೃತ್ತಮನಾಮಾ ವಿಜಯವಿಠ್ಠಲರೇಯಾ ।
ಸುಳವಿನೊಳಿಗೆ ಇಂದು ದೀನ ಜನಬಂಧು ॥೧॥

**ಮಟ್ಟ ತಾಳ**

ಒಂದಾನು ಒಂದು ದಿನವಾದರು ನಿನ್ನ ।
ಬಿಂದುಮಾತುರ ನಾಲಿಗಿಂದ ನೆನೆದು ನಾಮ ।
ಪೊಂದೀಗಾ ಪೊಗಳದೆ ಇಂದು ಕಿಂಕರನೆಂದು ।
ಮಂದಿಯೊಳಗೆ ನೋಡಿದಂದ ತುದಿ ಫಲವ ।
ಬಂದು ಹೆಳವ ನೋಡಿ ತಿಂದೇನೆಂತೆಂಬೊ ।
ಮಂದಮತಿಯಾದ ಮುಂದೆ ಸೂಚಿಸದಂತೆ ।
ತಂದೆ ಸುಹೃತನಾಮ ವಿಜಯವಿಠ್ಠಲ ಆವಾ–।
ನಂದದಲೆ ಬಯಸಿ ವಂದಿಸಿದೆ ನಿನ್ನಾ ॥೨॥

**ರೂಪಕ ತಾಳ**

ಈ ಶರೀರವು ಕ್ರಿಮಿರಾಶಿ ಎನಗೆ ನಿನ್ನ ।
ಸಾಸಿರನಾಮಾ ಕಾಣಾಸಿಯಾಗಿರಲಿ ।
ಲೇಸುವುಳ್ಳನಕಾ ನಾವಾಸಾವಾಗಿಪ್ಪೆನೊ ।
ದೇಶದೊಳು ಡಂಭಕದ ದಾಸನಾಗಿ ।
ರಾಶಿ ಹಾಕಿದ ಹಣ ಏಸು ಇದ್ದರೇನು ।
ಕಾಸಿಗೆ ಪೋಗಾದಾದೊಂದಾರಿರದೆ ।
ಕೇಶವ ನಿನಗಿನ್ನು ಮೀಸಲಾದಾಸರು ।
ವಸೆಯಾಗಿದ್ದರು ಆ ಸರ್ವರೊಳಗೊಬ್ಬ ।
ದೋಷಕಾರಿ ನಾನು ಪಾಸಬದ್ಧಕ ನಾನು ।
ಹೇಸಿ ಮಾನವನಾನು ಆಸೆಬಡಕನಾನು ।
ಈಸುಗುಣವುಳ್ಳ ಕ್ಲೇಸೋಧಿನಾರನ್ನ ।
ಪೋಷಣೆ ನಿನ್ನಿದು ಬೀಸಿ ಬಿಸಾಟದಿರು ।
ನೀ ಸೇರಿವೊಳಗೆ ಪ್ರಕಾಶಮಾನನಾಗಿ ।
ಭೂಷಾ ವಿಜಯವಿಠ್ಠಲೇಶ ಕರುಣದಿಂದ ।
ವಾಸವಾಗಿದ್ದೆನ್ನ ದೊಷವ ಹಿಂಗಿಸಿ ।
ಸೂಸುವ ಭಕ್ತಿಗೆ ಭೂಷಣನಾಗೋ ॥೩॥

**ಝುಂಪಿ ತಾಳ**

ಭಕುತ ಪ್ರಲ್ಹಾದನು ನಿನಗೇನು ಇತ್ತನು ।
ಶುಕ ಮಹಾ ಮುನಿಪ ನಿನಗೇನು ತಂದುಕೊಟ್ಟ ।

ರುಕುಮಾಂಗದುಪಕಾರ ನಿನಗೇನು ಮಾಡಿದ ।
ಮಖಿಶತನು ನಿನಗೇನು ಊಟವನುಣಿಸಿದಾ ।
ಸುಖಬಡಿಸಿದನು ನಾರದಮುನಿ ನಿನಗೇನು ।
ಮಕರ ತೋರಣವ ಕಟ್ಟಿದನೇನೋ ನದಿಸುತಾ ।
ಶಿಖಿರವೆತ್ತಿದನೇನೋ ಲಂಕಾದೀಶನು ಬಂದು ।
ಸಕಲ ಸುರರು ನಿನ್ನ ವಕ್ಕಲಾಗ್ಯೆಸಿದರೆ ।
ಭಕುತ ಪ್ರಹ್ಲಾದ ಆಕಟ ನಾ ನಿನಗೇನು ।
ಭಕುತಿ ಮಾಡದೆ ಪೋದ ಲಕುಮಿ ವಲ್ಲಭ ಎನ್ನ ।
ವಿಕಳ ಮತಿಯೊಳಗದ್ದಿ ಕಕ್ಕಸ ಒಡಿಸೋದು ।
ಚಕಿತತನವೇ ದೇವ ।
ತ್ರಿಕಕುಬ್ಧನಾಮ ಸಿರಿ ವಿಜಯ ವಿಠ್ಠಲ ತಂದೆ ।
ವಿಕಸಿತ ಜ್ಞಾನಕ್ಕೆ ಅಂತರಂಗದಲ್ಲೀ ।
ಮಕರಂದನಾಗೋ ಪಾದಕ್ಕೆ ನಮಿಸುವೆನು ॥೪॥

**ತ್ರಿವಿಡಿ ತಾಳ**

ಅವರೀಗ ಕರಿಯಲು ಅಂತರ ಬಾಹೀರ ।
ಅವತಾರಗಳಿಂದಲ್ಲಿ ಪೊಳದುನಿಂದು ।
ಅವರವರ ವಾಸನಾತೀರಿಸಿ ಮನೋಭೀಷ್ಟೆ ।
ಅವರಿಗೆ ನೀವೇಯೋ ಅವರಂತೆ ನಾನಲ್ಲಾ ।
ಅವರಿಂದಲಾನಂತ ಸೇವೆ ನಿಮಗಾಯಿತು ।
ಆವತ್ತ ಗುಣದವನಿಂದ ಎಂದು ಪೂರ್ತಿ ।
ಅವರ ಸೇವಿಯಾದಿತು ಅವರಿಗೆ ಪ್ರೇರಿಸಿದ್ದಾ ।
ಅವರ ದಾಸಾನುದಾಸ ಎನ್ನ ಸೇವೆಯಾರೀತ್ಯಾ ।
ತವ ಬಿಂಬ ಮೂರ್ತಿಯ ತೋರೋ ಭೂತ ಭವ್ಯ ।
ಭವ್ಯನ್ನಾಥನಾಮ ಶ್ರೀ ವಿಜಯ ವಿಠ್ಠಲ ಎನ್ನ ।
ಭವಪಾಶವ ಹರಿದು ಸಂಭವಿಸಲಿ ಜ್ಞಾನಾ ॥೫॥

**ಅಟ್ಟ ತಾಳ**

ಆತುಮ ಮೂರುತಿ ಪ್ರಮಾಣವಂಗುಟಿ ।
ಮಾತುರ ಮೂರುತಿ ದೇಹ ದೇಹಿಯಲ್ಲಿ ।
ತತು ಪ್ರಮಾಣಾ ಶೋಭಿಸುತಿರೇ ।
ಆತು ಮನಾಮಕ ಪ್ರಾಜ್ಞಮೂರುತಿಯೇ ।
ಆತ ನಾನಾಬಿಂಬಮೂರುತಿಯಾಗಿ ಪೂಜಿಯ ।

ಪ್ರೀತಿಯಲ್ಲಿಗೊಂಬ ಆತುಮದೊಳಗೆ ।
ಪಾತಕ ಹರಿಸುತ್ತ ಪತಿತರ ಪೊರೆವುತ್ತ ।
ಆತುಮಯೋನಿ ವಿಜಯವಿಠ್ಠಲರೇಯಾ ।
ಯಾತರ ಭಯವಿಲ್ಲಾ ಪ್ರಾಯಶ್ಚಿತ್ತವೆಯಿಲ್ಲಾ ॥೬॥

**ಆದಿ ತಾಳ**

ಹೆಳವನು ಬಯಸಿದಾ ಫಲವು ಚಲಿಸದೆ ಇರುತಿದ್ದು ।
ಕೆಳಗೆ ಬೀಳೆ ಪಾವನದಿಂದ ಸಲೆಪಣ್ಣು ದೊರಕಿದಂತೆ ।
ಮಲಿನಗಳೆದು ಗುರುಗಳೆನಗೆ ।
ಒಲಿದು ತೋರಿಸಿದರಾದಳವಾಗೆ ।
ಸುಳಿದು ಸುಖದ ವಿಜಯ ವಿ-।
ಠಲ ಬಲುದೈವಾ ಕಾಯ್ವಾ ॥೭॥

**ಜತೆ**

ಸಾಸಿರಮೂರುತಿ ಶತಾನಂದ ಮೂರುತಿ ।
ಸಾಸಿರನಯನ ಶ್ರೀ ವಿಜಯವಿಠ್ಠಲ ಸುಳಿದಾ ॥೮॥

* * *

## ಸುಳಾದಿ – ೫೯

"ಚಂದ್ರನುದ್ಭುವನಾಗೆ ಚತುರಂಗಲದಷ್ಟು । ಸಿಂಧು ರಾಜನು ಉಬ್ಬಿ ಮೇಲಕ್ಕೆ ಸೂಸುವ । ಇಂದಿರೇಶನು ಎನ್ನ ಹೃದಯಾಂಬುಧಿಯೊಳು ಇಂದು ಸುಳಿದಂತೆ ಪರಿಪೂರ್ಣವಾಗೆ । ಇಂದೆನ್ನ ಸಂತೋಷ ಪಿಡಿಯಲಾರವಶ । ಅಂಧಕಗೆ ಕಣ್ಣು ಬಂದಂತಾಯಿತು" ಎನ್ನುತ್ತಾರೆ ದಾಸರಾಯರು.

ಹೃದಯ ಸದನದಲ್ಲಿ ಪದುಮನಾಭನನ್ನು ಕಂಡ ಶಬ್ದಚಿತ್ರ ಹೃದಯಂಗಮವಾಗಿ ಈ ಸುಳಾದಿಯಲ್ಲಿ ಮೂಡಿಬಂದಿದೆ. ಇದನ್ನು ಕಂಡ ಸುಜೀವಿಗೂ ಇದರ ಆನಂದಾನುಭವವಾಗುತ್ತದೆ.

ಪರಮಾತ್ಮನ ಒಂದು ನಖದ ದರ್ಶನದಿಂದ ಬರುವ ಫಲ ಅನಂತ ಎಂಬುದಾಗಿ ವೇದಗಳು ಸಾರುತ್ತವೆ.

"ಈತನ ದರ್ಶನದಿಂದ ಕೃತಕೃತ್ಯನಾದೆ", "ಕಂಡು ಧನ್ಯನಾದೆ ಕಮನೀಯ ಮೂರುತಿಯ" ಎನ್ನುತ್ತಾರೆ ದಾಸರು.

**॥ ರಾಗ–ವರಾಳಿ–ಧ್ರುವ ತಾಳ ॥**

ಸುಳಿದವನಾರೆನ್ನ ಕಣ್ಣ ಮುಂದೆ ।
ಪೊಳೆದವನಾರೆನ್ನ ಕಂಗಳಿಗೇ ।
ಥಳಥಳಿಸುವ ಪುತ್ಥಳಿ ಬೊಂಬಿಎಂದದಿ ।
ಎಳೆ ಮಿಂಚಿನಂತೆ ಕಂಗಳು ಥಳಥಳಿಸುವಂತೆ ।
ಸುಳಿಗುರುಳು ಭ್ರಮರಾವಳಿಯಂತೆ ವೊಪ್ಪಲು ।
ಗುಲಗುಂಜಿ ಸರ ಶಿರಕೆ ಪೊಳೆವಮುಕುಟಿ ಬಳ್ಳಿ–।
ಗಳ ಸುತ್ತಿ ಕಂಡಕಂಡೆಲಿಯ ತುರಾಯವು ।
ಹಲವಾಭರಣ ತಳಲಗಾವಿ ಪೊಂಬಟ್ಟೆ ।
ಶೆಳೆಗೋಲು ಕೈಯ ಕೊಳಲದ್ವನಿಗೈಸುತ್ತಾ–।
ಕಳ ಕಾಯದನೀತ ಗೆಳಿಯಗೋವಳರೊಳಗೆ–।
ಗೆಲ ಸೋಲಾಡಿದನೀತ ಬಲುಮಾಯಾದಾತಾ ।
ಹಲವಂಗ ಯಜ್ಞಾಂಗಕೃತ ನಾಮ ವಿಜಯ ವಿ–।
ಠ್ಠಲನೀತ ಮೇಲ್ಗಿರಿ ತಿರುವೆಂಗಳಾನೀತ ॥೧॥

**ಮಟ್ಟ ತಾಳ**

ಮುಗುಳುಮಲ್ಲಿಗೆ ಸಂಪಿಗೆ ಸುರಹೊನ್ನೆ ಮ–।
ರುಗು ಪಾರಿಜಾತ ಮಿಗೆ ಕೇತಕಿ ಶಾವಂ–।
ತಿಗೆ ಇರುವಂತಿ ಸುರಗಿ ಪಾರಿಭದ್ರಾ–।
ದಿಗಳು ಕುಸುಮ ತುರುಗಿ ತುರುಬಿನಲ್ಲಿ ।
ಮೃಗನಾಭಿ ಫಣೆಗೆ ನಾಮವನಿಟ್ಟು ।
ಮುಗುಳುನಗೆಯಿಂದ ಬಗೆ ಬಗೆ ಒಯ್ಯಾರ ।
ಸೊಗಸುತೋರುವ ಜಾಣ ನಗಧರ ಸರ್ವ–।
ದ್ರುಗ ವಿಜಯವಿಠ್ಠಲಯುಗಳ ಚರಣ ದಂ–।
ದಿಗೆ ರಭಸಗೈಯೋ ॥೨॥

**ತ್ರಿವಿಡಿ ತಾಳ**

ಪೂಸಿದಗರು ಚಂದನ ಶೋಭಿಸುವ ಗಂಧ ।
ಲೇಸಾದ ಕಸ್ತೂರಿ ಪುಣಗು ಜವ್ವಾದಿ ಸು–।
ವಾಸನೆಯಿಂದ ಪ್ರಕಾಶದಲ್ಲಿ ವಪ್ಪೆ ।
ಸೂಸುವ ಕರ್ಪೂರದ ಹಳಕು ತಾಂಬೂಲ ।
ಭೂಷಣ ಸಿರಿದೇವಿ ಉರದಲ್ಲಿನಲಿದಾಡೆ ।
ನಾಶರಹಿತ ಕಮಲಾಸನ ಜನಕ ।

ಮೋಸ ಪೋಗನು ತನ್ನ ದಾಸರ ವಿರಹಿತ ।
ಅಶತೃಘ್ನನಾಮ ವಿಜಯವಿಠ್ಠಲ ಎನ್ನ ।
ಮೀಸಲ ದೈವವು ಈ ಸುಲಭದಿಂದ ॥೩॥

**ಅಟ್ಟ ತಾಳ**

ಚಂದ್ರನುದ್ಭವನಾಗೆ ಚತುರಂಗುಲದಷ್ಟು ।
ಸಿಂಧುರಾಜನು ಉಬ್ಬಿ ಮೇಲಕ್ಕೆ ಸೂಸುವ ।
ಇಂದಿರೇಸನು ಎನ್ನ ಹೃದಯಾಂಬುಧಿಯೊಳು ।
ಇಂದು ಸುಳಿದಂತೆ ಪರಿಪೂರ್ಣವಾಗೆ ।
ಇಂದೆನ್ನ ಸುಳಿದಂತೆ ಪಿಡಿಯಲಾರವಶ ।
ಅಂಧಕಗೆ ಕಣ್ಣು ಬಂದಂತೆಯಾಯಿತು ।
ಸುಂದರ ಸುಮೇಧ ವಿಜಯವಿಠ್ಠಲರೇಯ ।
ಒಂದೊಂದು ಪರಿಯಲ್ಲಿ ನಿಂದು ನಿಂದೊಲಿದಾ ॥೪॥

**ಆದಿ ತಾಳ**

ಇಂದು ಮಂದಾಕಿನಿಯಲ್ಲಿ ಮಿಂದು ಫಲ ಉಪರಾಗ ।
ಬಂದಕಾಲದಲ್ಲಿ ಕೋಶ ತಂದು ದಾನವಿತ್ತು ಸಕಲ ।
ಸಿಂಧುನಲ್ಲಿ ಸ್ನಾನಮಾಡಿ ಒಂದುಬಿಡದೆ ಯಾತ್ರೆ ಚರಿಸಿ ।
ಮಂದರಧರನಾ ನಖ. ಒಂದು ಕಾಣಲದಕೆ ನೂ-।
ರೊಂದುಮಡಿ ಫಲವಹುದೆಂದು ವೇದ ಸಾರುತಿದೆ ।
ಇಂದು ಎನ್ನ ಭಾಗ್ಯವೇನೆಂದು ಪೇಳಿಕೊಂಬೆನಯ್ಯಾ ।
ವಂದಿಸಿ ವರ ಮನಕೆ ನಿಜಬಂಧು ವಿಜಯವಿಠ್ಠಲ ಸ-।
ನಂದನಾದಿ ವಂದ್ಯನೀತ ಇಂದು ಕೃತಕೃತ್ಯನಾನು ॥೫॥

**ಜತೆ**

ಕಂಡು ಧನ್ಯನಾದೆ ಕಮನೀಯ ಮೂರುತಿಯ ।
ಮಂಡಲೇಶನಯ್ಯಾ ವಿಜಯವಿಠ್ಠಲದೇವನ ॥೬॥

* * *

## ಸುಳಾದಿ - ೬೦

ಸ್ವಾಮಿ, ನಾನು ಜ್ಞಾನಿಯಲ್ಲ, ದಾನಿಯಲ್ಲ, ಸ್ನಾನ ಸಂಧ್ಯಾದಿ ಮೌನ ವ್ರತಗಳನ್ನು ಮಾಡಿ, ಉತ್ತಮರಿಂದ ನಿನ್ನ ಚರಿತ್ರೆಯನ್ನು ಕೇಳಿ ತಿಳಿದವನಲ್ಲ. ಹೀನವಾದ

**ಯೋನಿಗಳಲ್ಲಿ ಬಂದು ಹಾನಿ ವೃದ್ಧಿಗಳ ನಡುವೆ ಬೇನೆಯವನಾಗಿ, ಸತ್ಕರ್ಮ ಸದಾಚಾರಗಳನ್ನು ಬಿಟ್ಟ ದೀನ ನಾನು. ದೀನಬಂಧೂ ನಾನು ಎಳ್ಳಿನಷ್ಟೂ ಪುಣ್ಯವನ್ನು ಮಾಡಲಿಲ್ಲ.**

**ಕರುಣಾಳುವೇ, ನಿನ್ನನ್ನು ನಂಬಿದ್ದೇನೆ. ವೈಷಮ್ಯವಿಲ್ಲದ ದೈವವೇ, ನಿನ್ನ ಸೇರಿದವರ ಭಾಗ್ಯಕ್ಕೆ ಎಣೆಯುಂಟೇ ?"**

**"ಎನಗಲ್ಲಾ ಎನಗಲ್ಲಾ ಆರುಮಾಡಿದ ಮಾನ । ನಿನಗೆಂದು ಒಡಂಬಡುವೆ ಈಶ । ಲೋಕೇಶ, ಸರ್ವೇಶ" ಎಂಬ ಅಹಂಕಾರ ಖಂಡನಾಪೂರ್ವಕ ಶ್ರೀಹರಿಯ ಒಲುಮೆಯ ಸ್ತೋತ್ರವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.**

**॥ ರಾಗ–ಸಾರಂಗ–ಧ್ರುವ ತಾಳ ॥**

ಜ್ಞಾನಿಯೆ ನಾನಲ್ಲ ದಾನಿಯೆ ನಾನಲ್ಲ ।
ಸ್ನಾನ ಸಂಧ್ಯಾನದ ಮೌನಿಯೆ ನಾನಲ್ಲ ।
ನಾನಾ ಉತ್ತಮರ ಸ್ಥಾನದಲ್ಲಿ ಪೋಗಿ ।
ನೀನಾಡಿದ ಕಥೆಯನರಿಯದವನಲ್ಲಾ ।
ಹೀನ ಯೋನಿಗಳೊಳು ನಾನು ಪ್ರಾಕೃತವಿಡಿದು ।
ಹಾನಿವೃದ್ಧಿಯ ನಡುವೆ ಬೇನೆಯವನಾಗಿ ।
ಏನೇನು ಸತ್ಕರ್ಮದಾಚಾರವನ್ನು ಬಿಟ್ಟ ।
ದೀನನು ನಾನಯ್ಯ ದೀನಬಂಧೂ ।
ಅನಂತ ಪ್ರದೀಪವರ್ನ ವಿಜಯ ವಿಠ–।
ಲಾನುಮಾಡಿದ ಪುಣ್ಯ ಕಾಣೆನೊ ಎಳ್ಳಿನಿತೂ ॥೧॥

**ಮಟ್ಟ ತಾಳ**

ಪಾತಕದವನಾನು ಯಾತನೆಯವ ನಾನು ।
ಮಾತುಮಾತಿಗೆ ಧರ್ಮ ವೃತ ಮರೆದವನೊ ನಾನು ।
ಯಾತಕ್ಕೆ ಬಾರದ ಜಾತಿಹೀನನು ನಾನು ।
ಈ ತೆರಲಿದ್ದವಗೆ ವಿಜಯವಿಠ್ಠಲ ಸ್ವಾಮಿ ।
ಪ್ರೀತಿಬಡುವಂಥಾ ನೀತಿಗಳೇನಯ್ಯಾ ॥೧॥

**ತ್ರಿವಿಡಿ ತಾಳ**

ಇಂಥ ಮಂದಮತಿಯ ಕರುಣಾಳುಗಳು ನೋಡಿ ।
ಸಂತರಿಸೀ ಬಲು ಸಂತೋಷವಾಗುವದೇನೊ ।
ಚಿಂತಾಯಕ ನಿನ್ನ ನಂಬಿ ಬಿಡದೆ ಪಾದ–।
ಕ್ರಾಂತನಾದ ಶುದ್ಧ ಭಕ್ತರನ ।

ಎಂಥವರು ಕಂಡು ಸ್ನೇಹಿತರಾಗುವರು ।
ಎಂತು ಪೇಳಲಿ ನಿನ್ನ ಮಹಿಮೆಗಳ ।
ಅಂತುಗಾಣೆನೊ ಎಲ್ಲಿ ವಿಜಯವಿಠಲನೆ ನೀ ।
ಶಾಂತ ವೈಕುಂಠನೆ ವೈಷಮ್ಯವಿಲ್ಲದೆ ದೈವಾ ॥೩॥

**ಅಟ್ಟ ತಾಳ**

ದಾರಿದ್ರ ಕುರೂಪಿಯ ಅದುರುಷ್ಟ ವಶದಿಂದ ।
ಧಾರುಣಿಪತಿ ಕೈವಿಡಿದು ಮನ್ನಿಸಲು ।
ಧಾರುಣಿಯೊಳಗಿದ್ದ ನಾನಾ ಬಗೆಯವರು ।
ಊರು ಕೇರಿಯವರು ಮನ್ನಿಪರು ।
ಭೂರಮಣ ನಮ್ಮ ವಿಜಯವಿಠ್ಠಲ ನಿನ್ನ ।
ಸೇರಿದವರ ಭಾಗ್ಯವಾರು ಬಣ್ಣಿಸಿರೋ ॥೪॥

**ಆದಿ ತಾಳ**

ಸೋತ್ತುಮ ಮಿಕ್ಕಾದವರು ತುತಿಸಿವಂದನೆ ಗೈಯಲು ।
ನಿತ್ಯತೃಪ್ತ ನಿನಗೆನಿಸುತ್ತ ಎನ್ನವೆನಿಸಾದಿರೂ ।
ಎತ್ತಿ ಕರವಮುಗಿವೆ ಉತ್ತರೋತ್ತರಮಾಡು ।
ರತ್ನಗರ್ಭದೊಡಿಯ ವಿಜಯವಿಠ್ಠಲ ವಿಧಾತೃವಿನುತಾ ॥೫॥

**ಜತೆ**

ಎನಗಲ್ಲಾ ಎನಗಲ್ಲಾ ಆರುಮಾಡಿದ ಮಾನಾ ।
ನಿನಗೆಂದುವೊಡಂಬಡುವೆ ಈಶ ವಿಜಯವಿಠ್ಠಲಾ ॥೬॥

* * *

## ಸುಳಾದಿ – ೬೧

ನಮಗೆ ತಾಯಿ–ತಂದೆ, ಬಂಧು–ಬಳಗ, ಸರ್ವಸ್ವವೂ ಪರಮಾತ್ಮನೇ, ಅವನೇ ಪ್ರೇರಕನು, ನಮ್ಮಂತೆ ಆಡಿ, ನಮ್ಮ ನಮ್ಮಲ್ಲಿ ಪ್ರೇಮಸಂಬಂಧವನ್ನು ಮಾಡಿಸುವನು. ಒಳ ಹೊರಗಿದ್ದು ನಮ್ಮೊಡನೆ ಚರಿಸುವನು, ಬರುವನು.

ಸಿರಿ ಬೊಮ್ಮಾದಿಗಳಿಗೂ ಅಗೋಚರನಾದವನು. ವೇದಗಳಿಗೂ ನಿಲುಕದ ಮಹಾಮಹಿಮನು. ಶರಣರಾಭರಣನೆನಿಸಿ ಪರಿಪಾಲಿಸುವ ಅವನ ಕಾರುಣ್ಯ ಅವರ್ಣನೀಯ ಅವನ ಭಕ್ತವಾತ್ಸಲ್ಯಕ್ಕೆ ಸುರರೂ ಬೆರಗಾಗುತ್ತಾರೆ.

**"ಜಲಜನಾಭನೆ ನೀನೆ ಸವಿದಿತ್ತನ್ನ ಸವಿದು । ನಲಿದುಂಡು ಬೆಳೆದವಗೆ ದುರಿತಗಳಿಪ್ಪವೇನಯ್ಯಾ।" ಇಲ್ಲ. ಪರಮಾತ್ಮನ ಒಲುಮೆಗೆ ಪಾತ್ರನಾದವನನ್ನು ಯಾವ ಪಾಪವೂ ಲೇಪಿಸದು ಸಮೀಪಿಸದು ಎಂಬ ಮುಂತಾದ ವಿಷಯವನ್ನು ಈ ಸುಳಾದಿ ತಿಳಿಸುತ್ತದೆ.**

**॥ ರಾಗ–ಮಾರವಿ–ಧ್ರುವ ತಾಳ ॥**

ನಮ್ಮಪ್ಪ ನಮ್ಮೊಡಿಯಾ ನಮ್ಮಣ್ಣ ನಮ್ಮಯ್ಯಾ ।
ನಮ್ಮ ಗುರು ನಮ್ಮ ಬಾಂಧವನೆ ನಮ್ಮಾಯಿ ನಮ್ಮರಸೆ ।
ನಮ್ಮ ಕಟ್ಟುಕಾವುಲಿ ನಮ್ಮೊಳಗಿಪ್ಪ ನಿತ್ಯ–।
ನಮ್ಮೊಶೆ ನಮ್ಮೊಡವೆ ನಮ್ಮ ಸಂಬಂಧಿಗಾ ।
ನಮ್ಮ ಓವಿಗನೆ ನಮ್ಮ ಧಾರಕ ಕರ್ತಾ ।
ನಮ್ಮ ಕಾರ್ಯಕಾರಣ ನಮ್ಮಾನಂದವ ದೇವ ।
ನಮ್ಮೈಶ್ವರ್ಯವೆ ಬಲು ನಮ್ಮಜ್ಞಾನವೆ ಭಕುತಿ ।
ನಮ್ಮ ವೈರಾಗ್ಯಭಾಗ್ಯ ನಮ್ಮ ಪ್ರೇರಕ ಸ್ವಾಮಿ ।
ನಮ್ಮ ನೇಮವೆ ನೇಮ ನಮ್ಮಾಚಾರವೆ ಸಿದ್ಧ ।
ನಮ್ಮನುಕೂಲವೆ ನಮ್ಮ ಅಧೀನನೆ ।
ನಮ್ಮಂತೆ ಆಡುವನೆ ನಮ್ಮ ನಮ್ಮಗೆ ಸ್ನೇಹ – ।
ಸಮ್ಮಂಧ ಮಾಡಿಸುವನೆ ನಮ್ಮೊಳ ಹೊರಗಿರುವ ।
ನಮ್ಮ ಬಿಂಬ ಮೂರುತಿ ವಿಜಯ ವಿಠ್ಠಲರೇಯಾ ।
ನಮ್ಮೊಡನೆ ಇಪ್ಪನೆ ನಮ್ಮೊಡನೆ ಬಪ್ಪನೇ ॥೧॥

**ಮಟ್ಟ ತಾಳ**

ಸಿರಿಗಗೋಚರನೆ ಸರಸಿಜಸಂಭವ ಶಿವ ।
ಸುರರಿಗೆ ದೂರನೆ ಕರುಣ ಅಪಾರನೇ ।
ಪರಮ ಮುನಿಗಳ ಸ್ತೋತ್ತರಕಸಾಧ್ಯನೆ ।
ನಿರುತ ವೇದಗಳುತ್ತರಕೆ ನಿಲುಕದವನೆ ।
ಹರಿ ನಿನ್ನ ಮಾಯವು ಅರಿತವನಾಮವನು ।
ಅರಸುವರು ಕಡಿಗೆ ಅರಸಿನ ಮಹಾಮಹಿಮ ।
ಕುರುಹುತಿಳಿಯದೆಂದು ಚರಿಸುವರು ತಮಗೆ ।
ದೊರೆತನಿತು ಮನದಿ ನಿರೀಕ್ಷಿಸಿ ಪ್ರತಿದಿನ ।
ಶರಣರಾಭರಣವೆ ವಿಜಯ ವಿಠ್ಠಲ ನಿನ್ನ
ಪರಿಪಾಲಿಸುವ ಆತುರಕೆ ನಾನೇನೆಂಬೆ ॥೨॥

### ತ್ರಿವಿಡಿ ತಾಳ

ಭಕುತರಿಗುಣಿಸಿ ನೀ ಕಡೆಮಾದಲಿಲ್ಲದ ।
ಸುಖವೆ ತಂದುಕೊಟ್ಟು ನೋಳ್ಪೇನೆಂದು ।
ಮುಕುತಾಮುಕುತ ಭಾಗದಲ್ಲಿ ಈ ಪದಾರ್ಥ ।
ಸಕಲ ಬಗೆಯಿಂದ ನೋಡಿದಕಾಲಕ್ಕೂ ।
ಸಿಕ್ಕಲರಿಯದೆಂದು ಇಹಲೋಕದಲ್ಲಿ ಸೇ-।
ವಕರನ್ನ ಪುಟ್ಟಿಸಿ ಈತೆರದಲ್ಲಿ ।
ಅಕಟ ನೀನೇಪೋಗಿ ನೆರೆಯವರಿಗೆ ಪ್ರೇ-।
ರಕನಾಗಿ ಸರ್ವದಾ ಉಣಪೇಳಿಸೀ ।
ಭಕುತಿಗೆ ಎನ್ನನು ಸ್ವಾತಂತ್ರನೆನಿಸಿ ನೀ ಜ-।
ನಿಕೆ ತೋರಿಸಿಕೊಡುವಿ ಬಾಹಿರದಲ್ಲಿ ।
ಮುಕುತಾರ್ಥ ನೀನಿಲ್ಲದಿಲ್ಲದಾಗದುವೊಂದು ।
ಕಕ್ಕುಲಾತಿ ಇನ್ನುಂಟೆ ಎಲ್ಲ್ಯಾದರೂ ।
ಮುಕುಳಿತವಾಗಿದ್ದ ಕುಸುಮ ಇದ್ದರೆ ಇ-।
ದಕೆ ಪರಿಮಳ ತಾನೆ ಹೊರಬೀಳ್ವದೇ ।
ಲಕುಮಿರಮಣ ನೀನು ಸುಮ್ಮನಿದ್ದರೆ ಊ-।
ಟಕ್ಕೆ ಕರಿಯಲು ಅವರು ಸ್ವಾತಂತ್ರರೇ ।
ಅಖಿಳಜೀವರೊಳು ವ್ಯಾಪ್ತನೆಂಬುವ ।
ವಾಕುತಕ್ಕದಯ್ಯಾ ನಿನಗೀ ಪೊಗಳುವ ಬಿರಿದು ।
ಪ್ರಕಟವಮಾಡಿ ಎಲ್ಲೆಲ್ಲಿಗೆ ಕರೆದೊಯ್ದು ।
ಅಕಳಂಕವರ ಕೂಡ ಉಣಿಸಿ ಪೊರೆವೆ ।
ಸಕಲ ಕಾಲಗಳಲ್ಲಿ ಕ್ಷಣಬಿಡದೇ ।
ಭಕುತಿಗೆ ವಶವಾದ ವಿಜಯ ವಿಠ್ಠಲ ನಿನ್ನ ।
ಭಕುತವತ್ಸಲ ತನಕೆ ಸುರರು ಬೆರಗಾಗುವರು ॥ ೩ ॥

### ಅಟ್ಟ ತಾಳ

ಆರನ್ನ ಆರೋದಕ ಆರ ಮನ್ನಣೆ ।
ಆರೆಡೆ ಆರಸದನ ಆರಸಹಸವೊ ।
ಆರರ್ಥ ಆರಾಟ ಆರದಯವೋ ।
ಆರಾಲಾಪವೊ ಆರಾವಾಸಸ್ಥಾನವೋ ।
ಆರಟ್ಟಹಾಸವೊ ಆರಆನಂದತಿ ।
ಆರನಾ ಪೂರ್ವಕ ಆರದೊ ಮತ್ತಾರದೋ ।
ಆರದೊ ಇನ್ನು ಆರರಿತವರಿಲ್ಲ ।

ಆರಿಂದ ಅವರಿಗೆ ಕೊಡಿಸಿ ಅನುದಿನ ।
ಆರನ್ನಾಡಿಸುವೆ ಆರನ್ನುಬ್ಬಿಸಿ ।
ಆರನು ಪೊಗಳಿಸುವೆ ಆರಾರುಚಿತ್ತವಿದು ।
ಆರತಿಶಯವಿದು ಆರಿಂದಲಿ ।
ಆರಿಗೆ•ಮಾನ ಬಹುಮಾನವೋ ।
ಆರು ಮಾಡಿಸುವರು ಆರು ಕೈಕೊಂಬರೊ ।
ಆರಾದರು ಜಗ ಮೂರರೊಳಗೆ ಉಂಟೆ ।
ಆರದಲ್ಲಿ ಇದು ಆರಾರದಲ್ಲಿವೊ ।
ಆರರ್ಥಿ ಆರಿಂದ ಆದದೆನಸಲ್ಲಾ ।
ಆರಾರು ಬಯಸುವರೊ ಆರಂಗಿಕರಿಸೋರೋ ।
ಆರು ವರ್ಜಿತಕಾಯ ವಿಜಯವಿಠ್ಠಲರೇಯಾ ।
ಆರಂತರ ಬಹಿರದಲ್ಲಿ ನೀನೇ ॥ ೪ ॥

### ಆದಿ ತಾಳ

ಜಲಚರ ತೃಪ್ತಿಯಾಗಿ ಬಂದು ತನ್ನಯ ಕಂಗಳಿಂ-।
ದಲಿ ತನ್ನ ಮರಿಯ ನೋಡಲು ಅದು ।
ಸಲೆ ತೃಪ್ತಿಯಾಗಿ ಇಪ್ಪಾಸುರಾ ಕ್ಷುಧಾತುರ ।
ಕಳಕೊಂಡು ಹರುಷದಿಂದ ಬೆಳೆದು ಸಂಚರಿಸಿದಂತೆ ।
ಬಲುದಯದಲಿ ನೀನು ಅರ್ಪಿಸಿದ ಪದಾರ್ಥ ।
ಸುಲಭರಸಗಳೆಲ್ಲ ಕರುಣಾದೃಷ್ಟಿಯಿಂದ ।
ಒಲಿದು ಸ್ವೀಕರಿಸಿ ಪರಮಶಾಂತದಿ ನೋಡೆ ।
ಒಳಗಿದ್ದವರು ಸಹ ತೃಪ್ತಿಯಾಗುವುದು ।
ಕುಲಕೋಟಿ ಸಹವಾಗಿ ಎನಗೆ ತೃಪ್ತಿಯಾಗುವುದು ।
ಜಲಜನಾಭನೆ ನೀನೆ ಸವಿದಿತ್ತನ್ನವಸವಿದು ।
ನಲಿದುಂಡು ಬೆಳೆದವಗೆ ದುರಿತಗಳಿಪ್ಪವೇನಯ್ಯಾ ।
ಕಲಕಾಲಕೆ ನಿತ್ಯತೃಪ್ತಿ ವಿಜಯವಿಠ್ಠಲ ನಿನ್ನ ।
ವೊಲಿಮೆಯಾಗಲಿಬೇಕು ಮಿಗಿಲಾದಾದೇನುಕಾಣೇ ॥ ೫ ॥

### ಜತೆ

ಈ ಪರಿ ಇದ್ದವನು ಬತ್ತಲಚ್ಛಂದಿಯಾಡೇ ।
ಪಾಪಲೇಪವಿಲ್ಲ ವಿಜಯವಿಠ್ಠಲ ಅವಗೆ ॥ ೬ ॥

* * *

## ಸುಳಾದಿ – ೬೨

"ಉತ್ಪತ್ತಿಸ್ಥಿತಿಲಯಾದಿಗಳನ್ನು ಕಲ್ಪಿಸಿ ಕೊನೆಯವರೆಗೆ ತೊಲಗದಂತೆ ನೀನು ಮಾಡಿರುವಾಗ, ನಾನು ಚಿಂತಿಸಿ ಮಾಡುವುದೇನು? ಸದಾಕಾಲ ನಿನ್ನಾಧೀನನಾದ ಮದಡ ಮಾನವ ನಾನು, ನನಗಾವ ಸ್ವಾತಂತ್ರ್ಯವಿದೆ ಹೇಳು.

ನಾನು ಮಾಡಿದ ಕರ್ಮದಿಂದ ಪಾಪ ಪುಣ್ಯ ಜೋಡಾಗಿ ಉಣದಲೇ ಬಿಡದು ಎನ್ನುವೆಯಾ? ಕರ್ಮ ಜಡವಲ್ಲವೇ? ಅದಕ್ಕೆ ಲಾಭ–ಕೇಡು ಕೊಡುವ ಸ್ವಾತಂತ್ರ್ಯ ಉಂಟೇ? ಇಲ್ಲ. ಕರ್ಮಾಧಿಷ್ಠಾನದಲ್ಲಿ ನೀನಿದ್ದು ಪುಣ್ಯ ಪಾಪಗಳನ್ನಿತ್ತು, ಅನಿತ್ಯವಾದ ಬೀಡಿನೊಳಗಿಟ್ಟು ತಿರುಗಿಸುವೆ ಇದೇ ನಿನ್ನ ಲೀಲಾಜಾಲ.

ನೀನು ಪ್ರಕಾಶಿಸಿದರೆ ನನಗೆ ಪ್ರಕಾಶ. ನಿನ್ನ ಪ್ರೇರಣೆಯಿಂದಲೇ ನಾನು ಪ್ರಪಂಚದಲ್ಲಿದ್ದೇನೆ. ಸ್ವತಂತ್ರನಾಗಿ ನಾನೇ ಜನಿಸಿದ್ದರೆ ನಿನಗೇಕೆ ಮೊರೆಯಿಡುತ್ತಿದ್ದೆ. ಕರುಣೆ ಪಾಲಿಸು, ಪಯಸಾಗರಶಾಯಿ ಎಂದು ಬೇಡುತ್ತಿದ್ದೆ.

ಆತ್ಮದೊಳಗೆ ನೀನು ವ್ಯಾಪ್ತನಾಗಿದ್ದು, ಸೂತ್ರ ನಡಿಸಿದಂತೆ ಸಂಚರಿಸುವೆ.

"ಅಪವಾದದವನ ಮಾಡಿ ಅಪರಾಧ ಹೊರಿಸಿದರೂ । ನೃಪತಿ ಚರಿಸಿದಂತೆ ಪ್ರಜೆಗಳ ವ್ಯಾಪಾರ ।" ಎಂಬಂತೆ ನನಗಾವ ಭಯವಿಲ್ಲ. "ಅಗ್ನಿಸ್ಥಂಬನ ಬಲ್ಲ ಬಲವಂತನಿಗೆ ಅಪರಿಮಿತವಾದ ಕೊಳ್ಳಿಯ ಭೀತಿಯುಂಟೇ?"

ಸಕಲಕರ್ಮಗಳಿಗೂ ಶ್ರೀಹರಿಯಧೀನ ಎಂಬ ವಿಷಯವನ್ನು ಈ ಸುಳಾದಿಯಲ್ಲಿ ವಾಚ್ಯವಾಗಿಯೇ ಕಾಣುತ್ತೇವೆ.

### ॥ ರಾಗ – ಗೌಳ – ಧ್ರುವ ತಾಳ ॥

ನೀ ಪ್ರಕಾಶಿತನಾಗೆ ನಾ ಪ್ರಕಾಶನಾಗುವೆ ।
ನೀ ಪ್ರಕಟವಾಗೆ ನಾ ಪ್ರಕಟವಾಗುವೆ ।
ನೀ ಪ್ರಾಚುರ್ಯನಾಗೆ ನಾ ಪ್ರಾಚುರ್ಯನಾಗುವೆ ।
ನೀ ಪ್ರಜಾವಂತನಾಗೆ ನಾ ಪ್ರಜಾವಂತನಾಗುವೆ ।
ನೀ ಪ್ರಣುತನಾಗೆ ನಾ ಪ್ರಣುತನಾಗುವೆ ।
ನೀ ಪ್ರಾಣನಾಗೆ ನಾ ಪ್ರಾಣನಾಗುವೆ ।
ನೀ ಪ್ರತಿಕೂಲವಾಗೆ ನಾ ಪ್ರತಿಕೂಲನಾಗುವೆ ।
ನೀ ಪ್ರಧಾನನಾಗೆ ನಾ ಪ್ರಧಾನನಾಗುವೆ ।
ನೀ ಪ್ರತಿಷ್ಠನಾಗೆ ನಾ ಪ್ರತಿಷ್ಠನಾಗುವೆ ।
ನೀ ಪ್ರೀತನಾಗೆ ನಾ ಪ್ರೀತನಾಗುವೆ ।
ನೀ ಪ್ರದಾತನಾಗೆ ನಾ ಪ್ರದಾತನಾಗುವೆ ।
ನೀ ಪೂಜ್ಯನಾಗೆ ನಾ ಪ್ರಪೂಜ್ಯನಾಗುವೆ ।
ನೀ ಪ್ರಬಲನಾಗೆ ನಾ ಪ್ರಬಲನಾಗುವೆ ।
ನೀ ಪ್ರಭೂನಾಗೆ ನಾ ಪ್ರಭೂನಾಗುವೆ ।

ನೀ ಪ್ರಮುಖ್ಯನಾಗೆ ನಾ ಪ್ರಮುಖ್ಯನಾಗುವೆ ।
ನೀ ಪ್ರಥಮನಾಗೆ ನಾ ಪ್ರಥಮನಾಗುವೆ ।
ನೀ ಪ್ರಯಾಣನಾಗೆ ನಾ ಪ್ರಯಾಣನಾಗುವೆ ।
ನೀ ಪ್ರವರ್ತಕನಾಗೆ ನಾ ಪ್ರವರ್ತಕನಾಗುವೆ ।
ನೀ ಪ್ರವಾಸನಾಗೆ ನಾ ಪ್ರವಾಸನಾಗುವೆ ।
ನೀ ಪ್ರವೇಶನಾಗೆ ನಾ ಪ್ರವೇಶನಾಗುವೆ ।
ನೀ ಪ್ರಮೋದನಾಗೆ ನಾ ಪ್ರಮೋದನಾಗುವೆ ।
ನೀ ಪ್ರಶಾಂತನಾಗೆ ನಾ ಪ್ರಶಾಂತನಾಗುವೆ ।
ನೀ ಪ್ರಸಾದನಾಗೆ ನಾ ಪ್ರಸಾದನಾಗುವೆ ।
ನೀ ಪ್ರೌಢನಾಗೆ ನಾ ಪ್ರೌಢನಾಗುವೆ ।
ನೀ ಪ್ರೇರಿಸಿದಂತೆ ನಾ ಪ್ರೇರಣೆಯಿಂದ ।
ಈ ಪೃಥ್ವಿಯೊಳಗೆ ನಾ ಪ್ರಪಂಚದಲ್ಲಿ ಇಪ್ಪೆ ।
ಶ್ರೀ ಪ್ರಕೃತಿರಮಣ ವಿಜಯ ವಿಠ್ಠಲರೇಯ ।
ನೀ ಪ್ರತಿಭಟಿಸಲು ನಾ ಪ್ರತಾಪವುಳ್ಳವನೇ ॥ ೧ ॥

**ಮಟ್ಟ ತಾಳ**

ಸ್ವಾತಂತ್ರ ನಾನಾಗಿ ಜನಿಸಿ ಉಳ್ಳರೆ ನಿನಗೆ ।
ಯಾತಕೆ ಮೊರೆ ಇಡುವೆ ಕರುಣೆ ಪಾಲಿಪದೆಂದು ।
ಸ್ವಾತಂತ್ರ್ಯ ಎನಗಿಲ್ಲ ಸರ್ವದಾ ನೋಡಿದರು ।
ಯಾತನೆ ಬಡುವುದಕೆ ನಾನೇ ಎಂದುಕೊಂಬೆ ।
ಮಾತು ಪೇಳುವಾಗ ನಾರಿಗೆ ಕಡಕೊಂಡು ।
ಬಾತು ಬಸಿದು ಬಳಲಿ ಹಾಹಾ ಎಂಬೆನೇ ನೊ ।
ಗಾತುರ ರೋಗ ಬಂದು ಪ್ರಾಪುತವಾಗೆ ।
ಧಾತುಗೆಡುವೆನೊ ಹರಿಯೆ ಕಾಯೊ ಎಂದು ।
ಆತುಮದೊಳು ನೀನು ವ್ಯಾಪುತನಾಗಿದ್ದು ।
ಸೂತ್ರನಡಿಸಿದಂತೆ ನಾನು ಸಂಚರಿಸುವೆ ।
ನೇತುರ ಶ್ರವಣ ನಾಲಿಗಿ ನಾಸವದನ ।
ಪ್ರೀತಿಯಾದ ಹಸ್ತಚರಣ ಪಾಯೋಪಸ್ಥ ।
ಈತ್ವಕು ಮನಿಮಿಕ್ಕ ಇಂದ್ರಿಯ ಒಳವಳಗೆ ।
ನೀ ತಿರುಗದಲೇ ಅನ್ಯಥ ವ್ಯಾಪಾರವೆ ।
ವಾತ ಪೊರಡುವದು ತಿರುಗಿ ಬರುವುದು ।
ಜಾತನಾಗುವದು ಬಾಲ ಯೌವನ ವೃದ್ಧ ।
ಖ್ಯಾತಿಯಲ್ಲಿ ಇದ್ದು ಸತಿಸುತರೊಡನೆ ।

ಜಾತಿ ಉತ್ತಮನೆಂದು ಪರರು ಪೇಳುವದು ।
ಖ್ಯಾತಿಯಾಗುವದು ಸರ್ವಚೇಷ್ಟೆಗಳು ।
ಭೂತಳಾಧಿಪ ನಮ್ಮ ವಿಜಯವಿಠ್ಠಲ ನೀನೆ ।
ಆತುಮದೊಳಗಿದ್ದು ಪ್ರೇರಿಸದಲೆ ಇಲ್ಲಾ ॥ ೨ ॥

### ತ್ರಿವಿಡಿ ತಾಳ

ಮಾಡಿದಾ ಕರ್ಮದಿಂದಲಿ ಪಾಪಪುಣ್ಯವ ।
ಜೋಡಾಗಿ ಉಣದಲೆ ಬಿಡದೆಂಬಿಯಾ ।
ಆಡಲೇನು ಕರ್ಮಜಡವಲ್ಲದೆ ಲಾಭ ।
ಕೇಡು ಕೊಡುವುದಕ್ಕೆ ಸ್ವಾತಂತ್ರ್ಯವೇ ।
ನಾಡೊಳು ಹರಗೋಲು ಸರಿತೆಯೊಳಗೆ ನಿತ್ಯ ।
ಆಡುವದೆಂಬೋರು ಅದಕೆ ಒಂದು ।
ನಾಡಿಯಾದರು ಚೇತನ ವ್ಯಾಪಾರ ಉಂಟೇ ।
ನೋಡುವುದೊಬ್ಬರ ಅಧೀನವೋ ।
ಮೂಢ ಸದನದೊಳಗಲ್ಲಿಂದ ಅಲ್ಲಿಗೆ ।
ಓಡಾಡಿ ತಿರುಗಿದರೆ ಫಲವಹದೇ ।
ಈಡಾರ ನಿನಗೆ ಕರ್ಮಾಧಿಷ್ಠಾನದಲಿ ।
ಕೂಡಿಕೊಂಡು ಪುಣ್ಯಪಾಪಂಗಳ ।
ನೀಡಿ ಈ ಪರಿಯಿಂದ ಅನಿತ್ಯವಾಗಿದ್ದ ।
ಬೀಡಿನೊಳಗೆ ಇಟ್ಟು ತಿರುಗಿಸುವೆ ।
ಆಡಲೇನು ಅಂದು ಮರುತ ಪಾವಕರು ।
ಕೂಡಿ ಪ್ರತಾಪದಲ್ಲಿ ತೃಣ ಒಂದನು ಅ– ।
ಲ್ಲಾಡಿಸಲಾರದೆ ಸುಮ್ಮನಾದರು ದೇವ ।
ಬೇಡೆಂದು ನಿಲಿಪಾರೇ ನಿನ್ನ ಮಹಿಮೆ ।
ಆಡಿನ ಕೊರಳೊಳು ಸ್ತನವುಳ್ಳ ತೆರದಂತೆ ।
ನಾಡದೈವಂಗಳ ಮಹಾಬಿಂಕವು ।
ಜಾಡಮಯ್ಯನಂತೆ ಉಪಾಯದಲಿ ನೀ ।
ನಾಡುವ ಸೋಜಿಗ ಪೊಗಳಲಳುವೇ ।
ಬೇಡಿಕೊಂಡು ಪೊಟ್ಟೆಪೊರೆವ ಮಂದಮನುಜ ।
ಮಾಡಬಲ್ಲನೆ ನಿತ್ಯ ಸ್ವಾತಂತ್ರವ – ।
ರಾಡಿಕಲೆತ ನೀರಿನಂತೆ ನಾನಿಪ್ಪೆನೋ ।
ಗೂಡಿನೊಳಗೆ ಬಂದು ನೆಲೆಗಾಣದೆ ।
ಕೋಡಗದ ಮರಿ ನಾನು ನಿನಗೆ ನೀನು ।

ಬಿಡಾಲ ನಂದದಿ ಎನಗೆ ಕಾಣೋ ।
ಕಾಡದೆ ಬಿಡೆನಯ್ಯಾ ನಾಮಸ್ಮರಣೆಗಳು ।
ಪೀಡಿ ಪಿಡಿದವನಂತೆ ಕೂಗಾಡುವೆ ।
ಹಾಡು ಪಾಡುವಂಗೆ ಪಾಪಪುಣ್ಯಗಳೆರಡು ।
ಮಾಡಿಸಿದರೊಳಿತೆ ಏನಾದರೆ ಏನು ।
ಜಾಡಿಬೇಡುವರೊಡಿಯಾ ವಿಜಯ ವಿಠ್ಠಲರೇಯಾ ।
ಹೋಡಿನವ ನಾನಲ್ಲ ಪಡಿದೊತ್ತಿನ ತೊತ್ತಿನದಾಸ ॥ ೩ ॥

**ಅಟ್ಟ ತಾಳ**

ಮೊದಲಿಗೆ ಉತ್ಪತ್ತಿ ಸ್ಥಿತಿ ಲಯ ನೇಮವಾ ।
ಅದರ ತರುವಾಯ ಜ್ಞಾನ ಅಜ್ಞಾನ ವಿ – ;
ಮದ ಬಂಧ ಮೋಕ್ಷ ಈ ಪರಿಯಲ್ಲಿ ಕಲ್ಪಿಸಿ ।
ತುದಿ ಪರಿಯಂತ ತೊಲಗಿ ಪೋಗದಂತೆ ನೀ – ।
ನಿದನು ಮಾಡಿಯಿರಲಾಗಿ ನಾನು ಚಿಂತೆಪದೇನು ।
ತ್ರಿದಶ ಮಿಕ್ಕಾದ ಜನರೊಳಗೊಬ್ಬರು ।
ಎದಿರು ನಿನಗೆ ಮತ್ತಾರಾದರು ಇಲ್ಲ ।
ಇದೆ ಧೈರ್ಯದಲಿ ಎನ್ನನು ಬಳಲಿಸುತಿಪ್ಪೆ ।
ಪದುಮನಾಭನೆ ಧರ್ಮವಲ್ಲವು ಕೇಳು ।
ಹೃದಯದೊಳಗೆ ನೀನೆ ಪ್ರೇರಣೆಯಾಗದೆ ।
ವಿಧಿ ನಿಷೇಧವ ಮಾಡಬಲ್ಲೆನೋ ಸ್ವಾಮಿ ।
ಅದೃಷ್ಟ ಯೋಗ್ಯತೆ ಪ್ರಯತ್ನ ನಾನಾ– ।
ವಿಧ ನಿಷೇಧವ ಮಾಡಬಲ್ಲೆನೋ ಸ್ವಾಮಿ ।
ಅದೃಷ್ಟ ಯೋಗ್ಯತೆ ಪ್ರಯತ್ನ ನಾನಾ– ।
ವಿಧ ಕರ್ಮಗಳು ಭಕುತಿ ವಿರಕುತಿಯು ।
ಸದಾ ಕಾಲದಲ್ಲಿ ನಿನ್ನ ಅಧೀನವಾಗಿರೆ ।
ಮದಡ ಮಾನವ ಎನಗಾವದು ಸ್ವಾತಂತ್ರ ।
ಪದ ಬಂದಿಡಲು ಕಾಯ ಆರದಾರದು ತಿಳಿಯೋ ।
ಸುದರಶನ ಪಾಣಿ ವಿಜಯ ವಿಠ್ಠಲರೇಯಾ ।
ನಿಧಿಯೆ ಎನ್ನ ಕುಲಕೋಟಿಗೆ ನಿದಾನಾ ॥ ೪ ॥

**ಆದಿ ತಾಳ**

ಅಪವಾದದವನ ಮಾಡಿ ಅಪರಾಧ ಹೊರಿಸಿದರು ।
ನೃಪತಿ ಚರಿಸಿದಂತೆ ಪ್ರಜೆಗಳ ವ್ಯಾಪಾರ ।

ಚಪಲಾ ನೀನಹುದೋ ಎಲ್ಲರೊಳಗಿದ್ದರು ।
ಅಪಯನವಾದ ಪಾಪದ ಭಯವಿಲ್ಲಾ ।
ಸಪುತಾರ್ಚಿ ಸ್ಥಂಭ ಬಲ್ಲ ಬಲವಂತ ಮನುಜಗೆ ।
ಅಪರಿಮಿತವಾದ ಕೊಳ್ಳಿಯ ಭೀತಿಯುಂಟೆ ।
ಕಪಟನಾಟಕ ದೇವಾ ವಿಜಯ ವಿಠ್ಠಲರೇಯಾ ।
ಅಪವರ್ಗ ಸ್ವರ್ಗ ನರಕಾದಲ್ಲಿ ನೀನೇ ವ್ಯಾಪುತಾ ॥ ೫ ॥

**ಜತೆ**

ಪಾಪ ಪುಣ್ಯಗಳೆರಡು ನಿನ್ನಾಧೀನವಯ್ಯಾ ।
ಶ್ರೀಪತಿ ವಿಜಯ ವಿಠ್ಠಲ ವಿಶ್ವದಾಧಾರಾ ॥ ೬ ॥

* * *

## ಸುಳಾದಿ – ೬೩

**"ಭಯವ್ಯಾಕೆ ನಿನಗೆ ನಿರ್ಭಯನಾಗು ಎಲೆ ಪ್ರಾಣಿ" ಎಂದು ದಾಸರಾಯರು ಧೈರ್ಯ ಹೇಳುತ್ತ, ಭವಭಯ ದೂರ ಶ್ರೀಹರಿಯ ಕರುಣಾ ಕಟಾಕ್ಷ ಸರಿಯಾಗಿ ಸಹಾಯಕ್ಕೆ ಇದ್ದಾಗ ಮತ್ತೊಬ್ಬರನ್ನು ಬಯಸುವುದಿಲ್ಲ.**

**"ಕುದುರೆ ಏರಿದವನು ಕತ್ತೆಯನ್ನು ಬಯಸಿದಂತಾಗುತ್ತದೆ" ಎನ್ನುತ್ತಾರೆ.**

**ಶ್ರೀಹರಿನಾಮವೇ ಭಕ್ತರ ದುರಿತಗಿರಿಗೆ ವಜ್ರವಿದ್ದಂತೆ. ಅರಿಭಯಂಕರನಾದ ಪರಮಾತ್ಮನು ಸರಿಯದೇ ಸಮೀಪವಿರಲು ಭಯವೇ ಇಲ್ಲ ಎಂಬುದೇ ಈ ಸುಳಾದಿಯ ಸಂದೇಶ.**

**॥ ರಾಗ–ತೋಡಿ–ಧ್ರುವ ತಾಳ ॥**

ಭಯವ್ಯಾಕೆ ನಿನಗೆ ನಿರ್ಭಯನಾಗು ಎಲೋ ಪ್ರಾಣಿ ಭವ– ।
ಭಯದೂರ ಶ್ರೀಹರಿಯಾ ಕರುಣಾಕಟಾಕ್ಷ ।
ಸಯವಾಗಿ ಇರಲು ಸಹಾಯಕೆ ಮತ್ತೊಬ್ಬರನ್ನು ।
ಬಯಸುವದಲ್ಲ ಅಪಜಯಗಳು ಎಂದಿಗಿಲ್ಲ ।
ಹಯಗಮನನಾಗಿ ಕತ್ತೆಯನ್ನು ಹಾರೈಸುವಂಥ ।
ಬಯಲಾಶೆ ಬಿಡು ಬಿಡು ಹುಯಲಿಡಾದಿರು ದುರಮ– ।
ತಿಯಲಿಪ್ಪ ಮತಾಶ್ರಯ ಮಾಡಿ ಪರರಿಗೆ ನೊಯಿಸದಿರು ।
ತ್ರಯಲೋಕನುತ ವಿಜಯವಿಠ್ಠಲನೆಂಬೊ ಕ– ।
ರೆಯಮಣಿ ಕಟ್ಟಿರೆ ಭಯವೆತ್ತಣದೋ ಪೇಳು ॥ ೧ ॥

**ಮಟ್ಟ ತಾಳ**

ಆವಪಿತನು ಸಾಕಿದನು ಪ್ರಹ್ಲಾದನ್ನಾ ।
ಆವಜನನಿ ಸಾಕಿದಳು ಧ್ರುವನ್ನ ।
ಆವ ಅಣ್ಣ ಸಾಕಿದನು ವಿಭೀಷಣನ್ನ ।
ಆವ ಪುರುಷ ಸಾಕಿದ ಪಾಂಚಾಲಿಯ ।
ಆವ ಬಂಧು ಸಾಕಿದ ಪರೀಕ್ಷಿತನ್ನ ।
ಆವ ದೈವ ಸಾಕಿತು ಗಜೇಂದ್ರನ್ನ ।
ಆವ ಧೀರ ಸಾಕಿದ ಫಲ್ಗುಣನ್ನ ।
ಆವ ಭಟ ಸಾಕಿದ ಉಗ್ರೇಶನ್ನ ।
ಆವ ರಾಯ ನಾರಿಯರ ಬಿಡಿಸಿದವನು ।
ಆವ ಜಾತಿ ಸಾಕಿತು ಅಜಮಿಳನ ।
ಆವಾವನಾವವನೊ ನೋವು ಕಳದು ಭಕು– ।
ತಾವಳಿಗೆ ವೇಗ ಕೈವಲ್ಯಪಾಲಿಪ ।
ದೇವನೆಂಬವನು ಮತ್ತಾವವನಾವವನೊ ।
ಈ ವಿಚಾರವನ್ನು ಭಾವದಲ್ಲಿ ತಿಳಿದು ।
ಭಾವಜನ ಪೆತ್ತ ವಿಜಯವಿಠ್ಠಲನಂಘ್ರಿ–।
ದಾವರೆ ಯುಗಳದಲಿ ಪಾವನನಾಗುವದು ॥ ೨ ॥

**ತ್ರಿವಿಡಿ ತಾಳ**

ಒಡಲೊಳು ಅಬುಜಭವಾಂಡ ಕೋಟಿಯ ಕೋಟಿ ।
ಅಡಗಿಸಿಕೊಂಡಿಪ್ಪ ಮಹಾಮಹಿಮನ ।
ಒಡನೆ ತೊಟ್ಟಿಲೊಳು ಪವಳಿಸಿದನೆಂಬ ।
ನುಡಿ ಎತ್ತಣದೋ ಬಲು ಸೋಜಿಗವೊ ।
ನುಡಿಗಗೋಚರನಾದ ದೇವಂಗೆ ಜೋಗುಳ ।
ಬಿಡದೆ ಪಾಡಿದುದೇನೊ ಮೋಹಕವೋ ।
ಪೊಡವಿ ಸಾಗರ ದ್ವೀಪಧಾಧಾರ ಕರ್ತನು ।
ನಡೆನುಡಿ ಕಲಿತನೆಂಬುವದು ಏನೋ ।
ಎಡಿಯವಲ್ಲದ ನಿತ್ಯತೃಪ್ತನು ಮೊಲೆಪಾಲು ।
ಗುಡಿದನೆಂಬುವದಿದು ನಿಜವೆನ್ನಿರೋ ।
ಪಡೆಧರ ಗರುಡರಿಗೆ ಬೆಡಗು ತೋರುವ ಹರಿಯ ।
ಮಡದೆರೆತ್ತಿದರೆಂಬೊ ಘನವಾವದೋ ।
ಅಡಿಗಳೊಳಗೆ ಕ್ಷೋಣಿ ಅಡಗಿಸಿದ ಧಿಟ್ಟ ।
ಸಡಗರದ ದೈವ ವೊಲಿದಿರಲು ।

ಬಡದಿರು ದೈನ್ಯವ ಒಬ್ಬರ ಬಳಿಯಲ್ಲಿ ।
ಕೊಡರು ಮನಸಿನಂತೆ ನೆನೆಸಿದ ಫಲ ।
ಬಡವರಾಧಾರ ಶ್ರೀವಿಜಯವಿಠ್ಠಲ ಕರುಣಿ ।
ಬಿಡನು ನಿನ್ನವನೆಂದು ನುಡಿದರೊಮ್ಮ್ಯಾದರು ॥ ೩ ॥

**ಅಟ್ಟ ತಾಳ**

ಜನನದ ಭಯ ಮರಣದ ಭಯ ಬರುತಿಪ್ಪ ।
ಮನೊ ಇಂದ್ರಿಯಂಗಳು ಎರಗುವ ಭಯ ದು– ।
ರ್ದಿನಭಯ ಬಲುರೋಗ ತೊಡಕುವ ಭಯಕಾ ।
ಲನ ಭಯ ತನಗಿಕ್ಕುವ ವಿಷದ ಭಯ ತೀವ್ರವಾದ ತಮ –।
ಸಿನ ಭಯ ನಾನಾಕ ಭಯಗಳು ಬಂದರು ।
ಗಣನೆ ಮಾಡಲು ಕಾಣೊ ಹರಿಯ ನಂಬಿದ ಜನ – ।
ರನು ಮಾನ ಸಲ್ಲದು ಸತತ ತಿಳಿದದು ।
ಜನುಮಾದಿ ಕರ್ತ ವಿಜಯವಿಠ್ಠಲನ್ನ ಅ –
ರ್ಚನೆ ಮಾಡು ಅನುದಿನ ಭಯಗಳು ನೀಗು ॥ ೪ ॥

**ಆದಿ ತಾಳ**

ದುರಿತಗಿರಿಗೆ ವಜ್ರ ಹರಿನಾಮ ಭಕ್ತರಿಗೆ ।
ನಿರುತ ವಜ್ರದ ಜೋಡು ಭಯವಿಟ್ಟು ನಡುವಂಗೆ ।
ಸುರಿವದು ಮಧುರಪಾನ ಬಿಡದೆ ನೆನೆವಂಗೆ ।
ನೆರೆನಂಬಿದವರಿಗೆ ಸುತ್ತುತ್ತಿರುವ ಪ – ।
ಹರೆ ಕರೆಯಲು ವೈಕುಂಠ ಕರತಳದಿ ಇಪ್ಪದು ।
ಹರಿಯೆಂದು ನೆನೆದವರ ಸಂಗತಿಯಲ್ಲಿ ಕ್ಷಣ– ।
ವಿರಲು ಮುಕ್ತಿಗೆ ಮಾರ್ಗ ಬಯಲಾಗಿ ತೋರುವುದು ।
ಹರಿ ಪಾದದಲಿ ಆಸಕ್ತನಾಗಿದ್ದವನಿಗೆ ।
ಇರಳು ಹಗಲು ಮೃತ್ಯು ಕಾಯ್ದೇನು ಮಾಡುವದು ।
ಅರಿಭಯಂಕರ ನಮ್ಮ ವಿಜಯವಿಠ್ಠಲೇಶ ।
ಸರಿಯದೆ ಸಮೀಪ ಇರಲು ಎತ್ತಣ ಭಯ ॥ ೫ ॥

**ಜತೆ**

ಉಂಟುಂಟು ವಿಜಯವಿಠ್ಠಲನೆಂದವಗೆ ಭಯದ ।
ಗಂಟಲನೊದೆದು ವೈಕುಂಠಪುರದ ಗತಿ ॥ ೬ ॥

* * *

## ೫. ಶ್ರೀದುರ್ಗಾದೇವಿ ಸ್ತೋತ್ರ



**ಗರ್ವಿಷ್ಟರಾದ ಅಸುರರೆಂಬ ಕತ್ತಲೆಯನ್ನು ನಾಶಗೈಸುವುದರಲ್ಲಿ ಪಟುವಾದ, ಮುಕ್ತರಿಂದಲೂ ಪೂಜಿಸಲ್ಪಡುವ ಪಾದಗಳುಳ್ಳ, ಹರಿಯಾಂಕ ಸಂಸ್ಥೆಯಾದ ದುರ್ಗಾದೇವಿಯ, ಮನಸ್ಸಿನ ರೋಗವಾದ ಕಾಮ ಕ್ರೋಧಾದಿ ದೋಷಗಳನ್ನು ದೂರಮಾಡಿ ಮಂಗಳರೂಪವಾದ ಮೋಕ್ಷವನ್ನು ಕೊಡುತ್ತಾಳೆ.**

**ಈ ಸುಳಾದಿಯಲ್ಲಿ ದಾಸರಾಯರು ದುರ್ಗಾದೇವಿಯ ರೂಪ ಗುಣ ಕ್ರಿಯೆಗಳನ್ನು ವಿವರವಾಗಿ ವರ್ಣಿಸಿದ್ದಾರೆ.**

**ಈ ಸುಳಾದಿಯನ್ನು ಪ್ರತಿದಿನ ತ್ರಿಕಾಲಗಳಲ್ಲಿ ನಲ್ವತ್ತೊಂದು ದಿನ ಪಾರಾಯಣ ಮಾಡಿದವರ ದುರಿತಗಳು ದೂರಾಗುತ್ತವೆ ಎಂದು ಅನುಭವಿಗಳ ಅಭಿಪ್ರಾಯ.**

### ಸುಳಾದಿ–೬೪

**॥ ರಾಗ–ಭೈರವಿ–ಧ್ರುವ ತಾಳ ॥**

ದುರ್ಗಾ ದುರ್ಗೆಯೆ ಮಹದುಷ್ಟಜನ ಸಂಹಾರೆ ।
ದುರ್ಗಾಂತಗತ ದುರ್ಗೆ ದುರ್ಲಭೆ ಸುಲಭೆ ।
ದುರ್ಗಮಯವಾಗಿದೆ ನಿನ್ನ ಮಹಿಮೆ ಬೊಮ್ಮ- ।
ಭರ್ಗಾದಿಗಳಿಗೆಲ್ಲ ಗುಣಿಸಿದರೂ ।
ಸ್ವರ್ಗ ಭೂಮಿ ಪಾತಾಳ ಸಮಸ್ತ ವ್ಯಾಪುತ ದೇವಿ ।
ವರ್ಗಕ್ಕೆ ಮೀರಿದ ಬಲುಸುಂದರೀ ।
ದುರ್ಗುಣದವರ ಬಾಧೆ ಬಹಳವಾಗಿದೆ ತಾಯಿ ।
ದುರ್ಗತಿಹಾರೆ ನಾನು ಪೇಳುವದೇನು ।
ದುರ್ಗಂಧವಾಗಿದೆ ಸಂಸ್ಕೃತಿ ನೋಡಿದರೆ ।
ನಿರ್ಗಮ ನಾಕಾಣೆನಮ್ಮ ಮಂಗಳಾಂಗೆ ।

ದುರ್ಗೆ ಹೇ ದುರ್ಗೆ ಮಹಾದುರ್ಗೆ ಭೂದುರ್ಗೆ ವಿಷ್ಣು – ।
ದುರ್ಗೆ ದುರ್ಜಯೆ ದುರ್ಧಷೆ ಶಕ್ತಿ ।
ದುರ್ಗ ಕಾನನ ಗಹನ ಪರ್ವತ ಘೋರ ಸರ್ಪ ।
ಗರ್ಗರ ಶಬ್ದ ವ್ಯಾಘ್ರ ಕರಡಿ ಮೃತ್ಯು – ।
ವರ್ಗ ಭೂತಪ್ರೇತ ಪೈಶಾಚಿ ಮೊದಲಾದ ।
ದುರ್ಗಣ ಸಂಕಟಪ್ರಾಪ್ತವಾಗೆ ।
ದುರ್ಗಾ ದುರ್ಗೆ ಎಂಬ ಉಚ್ಚಸ್ವರದಿಂದ ।
ನಿರ್ಗಳಿತನಾಗಿ ಒಮ್ಮೆ ಕೂಗಿದರೂ ।
ಸ್ವರ್ಗಾಪವರ್ಗದಲ್ಲಿ ಹರಿಯೊಡನೆ ಇದ್ದರು ।
ಸುರ್ಗಣ ಜಯಜಯವೆಂದು ಪೊಗಳುತಿರೆ ।
ಕರ್ಗಳಿಂದಲಿ ಎತ್ತಿ ಸಾಕುವ ಸಾಕ್ಷಿಭೂತೆ ।
ನಿರ್ಗುಡಿದಂತೆ ಲೋಕಲೀಲೆ ನಿನಗೆ ।
ಸ್ವರ್ಗಂಗಾಜನಕ ನಮ್ಮ ವಿಜಯವಿಠ್ಠಲನಂಘ್ರಿ ।
ದುರ್ಗಾಶ್ರಯ ಮಾಡಿ ಬದುಕುವಂತೆ ಮಾಡು ॥ ೧ ॥

### ಮಟ್ಟ ತಾಳ

ಅರಿದರಾಂಕುಶ ಶಕ್ತಿ ಪರಶು ನೇಗಲಿ ಖಡ್ಗ ।
ಸರಸಿಜ ಗದೆ ಮುದ್ಗರ ಚಾಪ ಮಾರ್ಗಣ ।
ವರ ಅಭಯ ಮುಸಲ ಪರಿ ಪರಿ ಆಯುಧವ ।
ಧರಿಸಿ ಮೆರೆವ ಲಕುಮಿ ಸರಸಿಜಭವ ರುದ್ರ ।
ಸರುವ ದೇವತೆಗಳ ಕರುಣಾಪಾಂಗದಲ್ಲಿ ।
ನಿರೀಕ್ಷಿಸಿ ಅವರವರ ಸ್ವರೂಪಸುಖ ಕೊಡುವ ।
ಸಿರಿ ಭೂಮಿ ದುರ್ಗಾ ಸರುವೋತ್ತಮ ನಮ್ಮ ವಿಜಯವಿಠ್ಠಲನಂಘ್ರಿ ।
ಪರಮ ಭಕುತಿಯಿಂದ ಸ್ಮರಿಸುವ ಜಗಜ್ಜನನಿ ।

### ತ್ರಿವಿಡಿ ತಾಳ

ಸ್ತುತಿಮಾಡುವೆ ನಿನ್ನ ಕಾಳಿ ಮಹಾಕಾಳಿ ಉ– ।
ನ್ನತ ಬಾಹು ಕರಾಳವದನೆ ಚಂದಿರಮುಖಿ ।
ಧೃತಿ ಶಾಂತಿ ಬಹುರೂಪೆ ರಾತ್ರಿ ರಾತ್ರೆಚರಣೆ ।
ಸ್ಥಿತಿಯೆ ನಿದ್ರಾಭದ್ರೆ ಭಕ್ತವತ್ಸಲೆ ಭವ್ಯೇ ।
ಚತುರಷ್ಟದ್ವಿಹಸ್ತೆ ಹಸ್ತಿ ಹಸ್ತಿಗಮನೆ ಅ– ।
ದ್ಭುತ ಪ್ರಬಲೆ ಪ್ರವಾಸೆ ದುರ್ಗಾರಣ್ಯವಾಸೆ ।
ಕ್ಷಿತಿಭಾರ ಹರಣೆ ಕ್ಷೀರಾಬ್ಧಿತನಯೆ ಸ – ।

ದ್ಗತಿ ಪ್ರದಾತೆ ಮಾಯಾ ಶ್ರೀಯೆ ಇಂದಿರೆ ರಮೆ ।
ದಿತಿಜಾತ ನಿಗ್ರಹೆ ನಿರ್ಧೂತ ಕಲ್ಮಷೆ ।
ಪ್ರತಿಕೂಲ ಭೇದೆ ಪೂರ್ಣ ಬೋಧೆ ರೌದ್ರೆ ।
ಅತಿಶಯ ರಕ್ತ ಜಿಹ್ವಾಲೋಲೆ ಮಾಣಿಕ್ಯಮಾಲೆ ।
ಜಿತಕಾಮೆ ಜನನ ಮರಣ ರಹಿತೆ ಖ್ಯಾತೆ ।
ಘೃತಪಾತ್ರ ಪರಮಾನ್ನ ತಾಂಬೂಲಹಸ್ತೆ ಸು – ।
ವ್ರತೆ ಪತಿವ್ರತೆ ತ್ರಿನೇತ್ರೆ ರಕ್ತಾಂಬರೆ ।
ಶತಪತ್ರ ನಯನೆ ನಿರುತಕನ್ಯೆ ಉದಯಾರ್ಕ – ।
ಶತಕೋಟಿ ಸನ್ನಿಭೆ ಹರಿಯಾಂಕ ಸಂಸ್ರೆ – ।
ಶ್ರುತಿ ತತಿ ನುತೆ ಶುಕ್ಲಶೋಣಿತ ರಹಿತೆ ಅ – ।
ಪ್ರತಿಹತೆ ಸರ್ವದಾ ಸಂಚಾರಿಣಿ ಚತುರೆ ।
ಚತುರ ಕಪರ್ದಿಯೆ ಅಂಭ್ರಣಿ ಹ್ರೀ ।
ಉತ್ಪತ್ತಿ ಸ್ಥಿತಿ ಲಯಕರ್ತೆ ಶುಭ್ರ ಶೋಭನ ಮೂರ್ತೆ ।
ಪತಿತ ಪಾವನೆ ಧನ್ಯೆ ಸರ್ವೌಷಧಿಯಲಿದ್ದು ।
ಹತ ಮಾಡು ಕಾಡುವ ರೋಗಂಗಳಿಂದ ।
ಕ್ಷಿತಿಯೊಳು ಸುಖದಲ್ಲಿ ಬಾಳುವ ಮತಿ ಇತ್ತು ।
ಸತತ ಕಾಯಲಿ ಬೇಕು ದುರ್ಗೆ ದುರ್ಗೇ ।
ಚ್ಯುತದೂರ ವಿಜಯವಿಠ್ಠಲರೇಯನ ಪ್ರೀಯೆ ।
ಕೃತಾಂಜಲಿಯಿಂದಲಿ ತಲೆಬಾಗಿ ನಮಿಸುವೆ ॥ ೩ ॥

**ಅಟ್ಟ ತಾಳ**

ಶ್ರೀಲಕ್ಷ್ಮಿ ಕಮಲಾ ಪದ್ಮಾ ಪದ್ಮಿನಿ ಕಮ– ।
ಲಾಲಯೆ ರಮಾ ವೃಷಕಪಿ ಧನ್ಯಾ ವೃದ್ಧಿ ವಿ– ।
ಶಾಲಾ ಯಜ್ಞಾ ಇಂದಿರೆ ಹಿರಣ್ಯಾ ಹರಿಣಿ ।
ವಾಲಯ ಸತ್ಯನಿತ್ಯಾನಂದ ತ್ರಯಿ ಸುಧಾ ।
ಶೀಲೆ ಸುಗಂಧ ಸುಂದರೆ ವಿದ್ಯಾ ಸುಶೀಲೆ ।
ಸುಲಕ್ಷಣ ದೇವಿ ನಾನಾ ರೂಪಗಳಿಂದ ಮೆರವ ಮೃತ್ಯುನಾಶೆ ।
ವಾಲಗ ಕೊಡು ಸಂತರ ಸನ್ನಿಧಿಯಲ್ಲಿ ।
ಕಾಲಕಾಲಕೆ ಎನ್ನ ಭಾರವೊಹಿಸುವ ತಾಯಿ ।
ಮೇಲು ಮೇಲು ನಿನ್ನಶಕ್ತಿಕೀರ್ತಿ ಬಲು ।
ಕೇಳಿ ಕೇಳಿ ಬಂದೆ ಕೇವಲ ಈ ಮನ ।
ಘಾಳಿಯಂತೆ ಪರದ್ರವ್ಯಕ್ಕೆ ಪೋಪದು ।
ಏಳಲಮಾಡದೆ ಉದ್ಧಾರ ಮಾಡುವ ।

ಕೈಲಾಸ ಪುರದಲ್ಲಿ ಪೂಜೆಗೊಂಬ ದೇವಿ ।
ಮೂಲಪ್ರಕೃತಿ ಸರ್ವ ವರ್ಣಾಭಿಮಾನಿನಿ ।
ಪಾಲಸಾಗರ ಶಾಯಿ ವಿಜಯವಿಠ್ಠಲನೊಳು ।
ಲೀಲೆ ಮಾಡುವ ನಾನಾಭರಣಭೂಷಣೆ ಪೂರ್ಣೆ ॥ ೪ ॥

**ಆದಿ ತಾಳ**

ಗೋಪಿನಂದನೆ ಮುಕ್ತೆ ದೈತ್ಯಸಂತತಿಗೆ ಸಂ – ।
ತಾಪವ ಕೊಡುತಿಪ್ಪ ಮಹಾಕಠೋರ ಉಗ್ರ – ।
ರೂಪ ವೈಲಕ್ಷಣೆ ಅಜ್ಞಾನಕ್ಕಭಿಮಾನಿನಿ ।
ತಾಪತ್ರಯ ವಿನಾಶೆ ಓಂಕಾರ ಹೂಂಕಾರ ।
ಪಾಪಕಂಸಗೆ ಭಯ ತೋರಿದೆ ಬಾಲಲೀಲೆ ।
ವ್ಯಾಪುತೆ ಧರ್ಮ ಮಾರ್ಗ ಪ್ರೇರಣೆ ಅಪ್ರಾಕೃತ ।
ಸ್ವಾಪದಲಿ ನಿನ್ನ ನೆನೆಸಿದ ಶರಣನಿಗೆ ।
ಅಪಾರವಾಗಿದ್ದ ವಾರಿಧಿಯಂತೆ ಮಹಾ – ।
ಆಪತ್ತು ಬಂದಿರಲು ಹಾರಿ ಪೋಗೊವು ಸಪ್ತಂ ।
ದ್ವೀಪ ನಾಯಿಕೆ ನರಕ ನಿರ್ಲೇಪೆ ತಮೋಗುಣದ ।
ವ್ಯಾಪಾರ ಮಾಡಿಸಿ ಭಕ್ತಜನಕೆ ಪುಣ್ಯ ।
ಸೋಪಾನ ಮಾಡಿಕೊಡುವ ಸೌಭಾಗ್ಯವಂತೆ ದುರ್ಗೆ ।
ಪ್ರಾಪುತವಾಗಿ ಎನ್ನ ಮನದಲ್ಲಿ ನಿಂದು ದುಃಖ– ।
ಕೂಪದಿಂದಲಿ ಎತ್ತಿ ಕಡೆ ಮಾಡು ಜನ್ಮಂಗಳು ।
ಸೌಪರ್ಣಿ ಮಿಗಿಲಾದ ಸತಿಯರು ನಿತ್ಯ ನಿನ್ನ ।
ಆಪಾದ ಮೌಳಿ ತನಕ ಭಜಿಸಿ ಭವ್ಯರಾದರು ।
ನಾ ಪೇಳುವದೇನು ಪಾಂಡವರ ಮನೋಭೀಷ್ಟೆ ।
ಈ ಪಂಚಭೌತಿಕದಲ್ಲಿ ಆವ ಸಾಧನ ಕಾಣೆ ।
ಶ್ರೀಪತಿನಾಮ ಒಂದೇ ಜಿಹ್ವಾಗ್ರಹದಲಿ ನೆನೆವ ।
ಔಪಾಸನ ಕೊಡು ರುದ್ರಾದಿಗಳ ವರದೇ ।
ತಾಪಸಜನ ಪ್ರೀಯ ವಿಜಯವಿಠ್ಠಲ ಮೂರ್ತಿಯ ।
ಶ್ರೀಪಾದಾರ್ಚನೆ ಮಾಳ್ಪಾ ಶ್ರೀಭೂದುರ್ಗಾ ವರ್ಣಾತ್ರಯೆ ॥ ೫ ॥

**ಜತೆ**

ದುರ್ಗೆ ಹಾ ಹೆ ಹೊ ಹಾಃ ದುರ್ಗೆ ಮಂಗಳ ದುರ್ಗೆ ।
ದುರ್ಗತಿ ಕೊಡದಿರು ವಿಜಯವಿಠ್ಠಲನ ಪ್ರೀಯೇ ॥ ೬ ॥

* * *

## ೬. ಶ್ರೀ ವಾಯುದೇವರ ಅವತಾರ ಸ್ತೋತ್ರ



ಶ್ರೀ ವಾಯುದೇವರು ಜೀವಕೋಟಿ ಪ್ರವಿಷ್ಟರು. **'ಪ್ರಧಾನಾಂಗಂ ಹಿ ಮಾರುತಿ'** ಎಂಬ ನುಡಿಯಂತೆ ಇವರು ಸ್ವಾಮಿಯಾದ ಶ್ರೀಹರಿಯ ಪ್ರಥಮಾಂಗರು. ಅಂದರೆ ಸಾಕ್ಷಾತ್ ಪ್ರತಿಬಿಂಬರು. ಕಾರಣ ವಾಯುದೇವರ ರೂಪ, ಗುಣ, ಕ್ರಿಯೆಗಳು ಇವರ ಪ್ರತ್ಯಕ್ಷಬಿಂಬನಾದ ಶ್ರೀಹರಿಯ ರೂಪ, ಗುಣ, ಕ್ರಿಯೆಗಳ ಲಾಕ್ಷಣಿಕ ಸಾಮ್ಯತ್ವವುಳ್ಳವುಗಳಾಗಿವೆ. ಇವರು ಪೂರ್ವ ಪ್ರಸಿದ್ಧ ಶ್ರೀರಮಾನಾರಾಯಣರನ್ನುಳಿದು ಅನಂತ ವೇದಗಳಿಂದ ಪ್ರತಿಪಾದ್ಯರು.

ಇವರು ಈಶಕೋಟಿಯ ರಮಾನಾರಾಯಣರಿಗೂ ಜೀವಕೋಟಿಯ ರುದ್ರಾದಿದೇವತೆಗಳಿಗೂ **ಮಧ್ಯಸ್ಥರಾಗಿದ್ದಾರೆ**. ಜೀವಕೋಟಿಯವರಿಂದ ಸಾಧನೆ ಮಾಡಿಸಿ ಈಶಕೋಟಿಯವರಿಂದ ಅವರವರ ಗತಿ ಕೊಡಿಸುತ್ತಾರೆ.

ಜೀವೋತ್ತಮರಾದ **ವಾಯುದೇವರು** ಶ್ರೀಹರಿಗೆ ಪ್ರತಿಮಾರೂಪರು. **ಕಾರಣ ಇವರ ವಿನಃ ಹರಿಧ್ಯಾನ ವ್ಯರ್ಥ**. ಜೀವರ ಸಾಧನ ಪೂರ್ತಿಗೈಸಿ ಶ್ರೀಹರಿಯ ಆಜ್ಞೆಯಂತೆ ಮುಕ್ತಿಯನ್ನು ಕೊಡುತ್ತಾರೆ.

ವಾಯುದೇವರಿಗೆ ಯಾವ ಕಾಲದಲ್ಲಿಯೂ ಅಜ್ಞಾನಾದಿ ದೋಷಗಳಿಲ್ಲ. ಇವರು ಪರಶುಕ್ಲತ್ರಯರು.

ಪರಮಾತ್ಮನ ಸೇವಾರ್ಥವಾಗಿ ಇವರು **ಹನುಮ, ಭೀಮ, ಮಧ್ವ** ಎಂಬ ಮೂರು ಮುಖ್ಯ ಅವತಾರಗಳನ್ನು ಮಾಡಿದ್ದಾರೆ. ಈ ಅವತಾರ–ಅವತಾರತ್ರಯಗಳಲ್ಲಿ ಬಲ ಹಾಗೂ ಜ್ಞಾನದ ಕಾರ್ಯವನ್ನು ತೋರಿಸಿದ್ದಾರೆ. ಈ ಅವತಾರತ್ರಯಗಳ ಬಗ್ಗೆ ಪ್ರಮಾಣವಾಕ್ಯಗಳನ್ನು ಮಹಾಭಾರತ, ಬ್ರಹ್ಮಪುರಾಣ ಹಾಗೂ ವರಾಹ, ಸ್ಕಾಂದ, ಗಾರುಡ ಮುಂತಾದವುಗಳಲ್ಲಿ ಕಾಣಬಹುದಾಗಿದೆ.

**ಹನುಮದವತಾರದ** ವಿವರವಾದ ವಿಷಯವನ್ನು ರಾಮಾಯಣದಲ್ಲಿಯೂ, **ಭೀಮಾವತಾರದ** ಕಾರ್ಯವನ್ನು ಭಾರತದಲ್ಲಿಯೂ ಹಾಗೂ **ಮಧ್ವಾವತಾರದ** ಸಂಪೂರ್ಣ ಶಬ್ದಚಿತ್ರವನ್ನು ಶ್ರೀ ಸುಮಧ್ವ ವಿಜಯದಲ್ಲಿಯೂ ಸಂದರ್ಶಿಸಬಹುದು.

ವಾಯುದೇವರ ಸ್ತೋತ್ರಮಾಡುವಾಗ ಈ ರೂಪತ್ರಯಗಳನ್ನು ವರ್ಣಿಸಬೇಕಾದುದು ಮಾಧ್ವರ ಶುದ್ಧ ಸಂಪ್ರದಾಯ. ಈ ವಿಶೇಷದ ವಿಶಿಷ್ಟ ಪ್ರಕಾಶದಲ್ಲಿ ದಾಸರಾಯರ ಕೃತಿಗಳನ್ನು ನೋಡಬಹುದಾಗಿದೆ.

ಈ ಭಾಗದಲ್ಲಿ ಅವತಾರತ್ರಯಗಳ ಸ್ತೋತ್ರ ಸುಳಾದಿಗಳು ಭಕ್ತ್ಯಾಭಿವೃದ್ಧಿಗೆ ಸಾಧಕವಾಗಿವೆ.

**"ಶ್ರೀಹರಿಗೆ ಪ್ರತಿಮಾರೂಪನಾದ, ಜೀವೋತ್ತಮನಾದ ಮುಖ್ಯಪ್ರಾಣನೇ ನಿನ್ನ ಅನುಗ್ರಹವಿಲ್ಲದೆ ಶ್ರೀಹರಿಯು ಪ್ರಸನ್ನನಾಗಲಾರನು. ಅವನ ಪ್ರಸನ್ನತೆ ದೊರೆಯದೇ ಸಂಸಾರಾಖ್ಯವಾದ ಈ ಬಂಧನದಿಂದ ನನಗೆ ಬಿಡುಗಡೆಯಾಗದು.**

**ಕಾರಣ ದಯಾಮಯನಾದ ತ್ರಿಲೋಕ ಗುರುವೇ ನನ್ನಿಂದ ಸತ್ಕರ್ಮ ಮಾಡಿಸಿ, ಸುಜ್ಞಾನಮತಿಯನ್ನಿತ್ತು ಪರಿಪಾಲಿಸು ಎಂದು ಅನನ್ಯಗತಿಕನಾಗಿ ಪ್ರಾರ್ಥಿಸುವೆ."**

## ಶ್ರೀವಾಯು ಹನುಮದವತಾರ



### ಸುಳಾದಿ–೬೫

**ಜಯಾ ಸಂಕರುಷಣನ ಪುತ್ರನಾದ ಸೂತ್ರನಾಮಕ ವಾಯುದೇವರು ತ್ರಿಲೋಕದ ಗುರುವು. ತ್ರಿನೇತ್ರ ಮೊದಲಾದವರೆಲ್ಲರೂ ಈತನ ಶಿಷ್ಯರು.**

**ಪಾಲ್ಗಡಲನ್ನು ಕಡೆದಾಗ ಮೇಲ್ಬಂದ ಗರಳನ್ನು ವಾಯುದೇವನು ಮೇಲ್ಮೆಯಿಂದ ಅಮೃತವನ್ನಾಗಿ ಮಾಡಿಕೊಂಡು ಕುಡಿದನು.**

**ಅವನ ಭಕ್ತರಾದ ನಮ್ಮ ಬುದ್ಧಿಯು ವಿಷಕ್ಕೆ ಸಮಾನವಾದ ಕಲಿಯು ದೇವತೆಗಳಲ್ಲಿ ಪ್ರವೇಶಮಾಡಿದ ಪ್ರಮೇಯವನ್ನು, ಹಾಗೂ ಆ ಕಲಿಯು ವಾಯುದೇವನಲ್ಲಿ ಪ್ರವೇಶಿಸಲಾರನೆಂಬುದನ್ನು, ತಿಳಿದು, ವಾಯುದೇವನು ಇತರ ದೇವತೆಗಳಿಗಿಂತ ಉತ್ತಮನು ಎಂದು ಸೂತ್ರನಾಮಕನ ಪಾವಿತ್ರತೆಯನ್ನು ಅರಿತುಕೊಳ್ಳಬೇಕು.**

**ಹನುಮನೆಂಬುದು ಜ್ಞಾನಕ್ಕೆ ಹೆಸರು. ಹನುಮನನ್ನು ನೆನೆದರೆ ಸರ್ವಕಾರ್ಯವೂ ಶುದ್ಧ, ಸಿದ್ಧ – ಎಂಬ ಚಾರಿತ್ರಿಕ ಅನೇಕ ಉದಾಹರಣೆಗಳನ್ನು ದಾಸರು ಇಲ್ಲಿ ಉದಾಹರಿಸಿದ್ದಾರೆ. ಭೀಮ ಮಧ್ವಾವತಾರಗಳನ್ನು ಸಂಗ್ರಹವಾಗಿ ನಿರೂಪಿಸುತ್ತ ದಾಸರಾಯರು ಈತನನ್ನು ಪರಮಾತ್ಮನ ಪ್ರೇಮದ ದಾಸ ಎಂದಿದ್ದಾರೆ.**

**॥ ರಾಗ–ಭೈರವಿ–ಧ್ರುವ ತಾಳ ॥**

ಧಾತ್ರಿತ್ರಯಕೆ ಗುರು ಸೂತ್ರನಾಮಕ ವಾಯು– ।
ಪುತ್ರನು ಜಯಸಂಕರುಷಣ ದೇವಗೆ ।
ನೇತ್ರತ್ರಯಾದಿಗಳು ಪರಮ ಶಿಷ್ಯರು ಈತಗೆ ।
ಸುತ್ರಾಮ ವಿಭುದರು ದನುಜಬಲ ಒಂದಾಗಿ ।
ಮಿತ್ರಭಾವದಲಿ ಮಂದರ ತಂದು ಮರ್ದಿಸಲು ।
ಘಾತ್ರವಾದ ಮಹ ಹಲಹಲ ಉದುಭವಿಸೆ ।
ಗಾತ್ರವನು ಬಚ್ಚಿಟ್ಟು ದಾನವಮರರೋಡೆ ।
ಚಿತ್ರವೇಗದಲಿ ಶ್ರೀಹರಿ ಚರಣಾನುಗ್ರಹ ।
ಪಾತ್ರವೆಂದೆನಿಸಿ ಮಂಗಳವಾದ ತಪನೆಯ ।
ಪಾತ್ರಿಯೊಳಗೆ ಕಾಳಕೂಟವೆ ಭುಂಜಿಸಿ ।
ಮಾತ್ರದಲ್ಲಿ ತೇಗಿದನು ಜೀರ್ಣ ಮಾಡಿಕೊಂಡು ।
ಚಿತ್ರ ಚಾರಿತ್ರ ಅಚ್ಯುತ ವಿಜಯವಿಠ್ಠಲನ್ನ ।
ಸ್ತೋತ್ರನು ಭಾರತಿ ಕಳತ್ರ ಶುಚಿಮಿತ್ರ ॥ ೧ ॥

**ಮಟ್ಟ ತಾಳ**

ಪಶುಪತಿ ಮೂರುರ ಅಸುರರ ಗೆಲಪೋಗೆ ।
ಅಸಮ ನೂತನು ಸರಸಿಜಸಂಭವನು ರಾ– ।
ಜಿಸುವ ಸುವಾ ಮೇರು ಧನಸು ನಾರಾಯಣ ।
ಅಸಿ ಮಾರ್ಗಣನು ತ್ರಿದಶ ಬಲರುವೇದ ।
ಎಸೆವ ವಾಜಿಗಳು ಸಾಹಸಿಗನು ತಾನಾಗಿ ।
ಎಶೆದಲ್ಲಿರುತಿರೆ ಅಸುರಾರಿಗೆಲಿಸೆ ।
ಅಸಹಾಯ ಶೂರ ಹನುಮಾ ಬಿಸಿನಿಧಿಗೆ ಹಾರಿ ।
ದಶಶಿರನ ಭಂಜಿಸಿ ನಗರವ ಉರುಪಿ ।
ಅಸುರುಹ ಕೋಟಿಲಿಂಗ ಅಸಮ ವಿಜಯವಿಠ್ಠ– ।
ಲ ಸದನನ್ನ ನಾಮ ರಸವಾಗುಂಬೊ ಪಶುಪತಿಗಿಂದಧಿಕ ॥ ೨ ॥

**ರೂಪಕ ತಾಳ**

ಮುಂದೆ ಈತನು ಬ್ರಹ್ಮಾ "ವಾಯುರ್ವೈ ಬ್ರಹ್ಮಾ" ।
ಎಂದೆಂಬೊ ನಿಗಮಾರ್ಥವ ಪೇಳುತಲಿವಕೊ ।
ಸಂದೇಹ ಸಲ್ಲದು ತದ್ವೇಷವ ಮರದು ।
ಪೊಂದಿ ವೈಷ್ಣವರಾಗಿ ವಾತನ್ನ ಪಾದ– ।
ವಂದಿಸಿ ಪಾಪವಿಮುಕ್ತರಾಗುವದು ।
ತಂದೆ ತಾಯಿ ಮತ್ತೆ ಬಂಧು ಬಳಗ ಗುರು – ।
ವೆಂದರೆ ಇವರೇ ನಮಗೆ ಸರ್ವರಿಗೇ ।
ಮಂದಮಾರ್ಗವ ಬಿಡು ಮನವೀತನಲ್ಲಿಡು ।
ಸ್ಕಂದನಾಮ ಸಿರಿ ವಿಜಯವಿಠ್ಠಲನ್ನ ।
ದ್ವಂದ್ವಪಾದ ತೋರಿ ಸಾಂದ್ರಸುಖವೀವ ॥ ೩ ॥

**ಝಂಪೆ ತಾಳ**

ಹನುಮನ ನಂಬಿದರೆ ಸುಗ್ರೀವನು ಗೆದ್ದ ।
ಹನುಮನ ನಂಬಿದರೆ ವಿಭೀಷಣ ಪ್ರಸಿದ್ಧ ।
ಹನುಮನ ನಂಬಿದರೆ ಸರ್ವ ಕಾರ್ಯವೆ ಬದ್ಧ ।
ಹನುಮನ ನಂಬದವ ಪಾಪದಲಿ ಬಿದ್ದ ।
ಹನುಮ ಹನುಮನೆಂಬೋದು ಜ್ಞಾನಕ್ಕೆ ಶಬ್ದ ।
ಹನುಮನೆ ಮಹತ್ತತ್ತ್ವಕ್ಕಭಿಮಾನಿಯೆನಿಸಿದ ।
ಹನುಮಗೆ ವನಜಸಂಭವಗೆ ಅಭೇದ ।
ಮನೋ ಜೀವ ವಿಜಯವಿಠ್ಠಲನಲ್ಲಿ ಇದ್ದ ॥ ೪ ॥

**ತ್ರಿವಿಡಿ ತಾಳ**

ಖಗನು ಕಲಶವ ತಂದು ಜಗದೊಳು ಪೆಸರಾದ ।
ಗಗನಾಂಗಣದಲಿ ಸಂಜೀವ ನಗವ – ।
ಬಗದು ತೃಣವ ಮಾಡಿ ಎಗರಿಸಿಕೊಂಡು ಎಳೆ – ।
ನಗಿಯಿಂದದಾಣೆಕಲ್ಲಂತೆ ಹಾರಿಸುತ್ತ ।
ಹಗೆಯಿಂದ ಮಡಿದ ಕಪಿಗಳನೆಬ್ಬಿಸಿ ಮೂರು ।
ಜಗದಪತಿಗೆ ಸೇವೆ ಅರ್ಪಿಸಿದನು ।
ಜಗಸೇತುವೆ ನಾಮ ವಿಜಯವಿಠ್ಠಲ ಬಲ್ಲ ।
ಮಿಗಿಲಾರು ಹನುಮಗೆ ಯುಗಯುಗದೊಳಗೆ ॥ ೫ ॥

**ಅಟ್ಟ ತಾಳ**

ರಣದೊಳು ಫಣಿಪನ್ನ ಅವತಾರವಾದ ಲ– ।
ಕ್ಷ್ಮಣನು ಬಿದ್ದಾಗ ಮೂಲರೂಪ ಸ್ಮರಿಸಿರೆ ।
ಗಣನೆಯಿಲ್ಲದೆ ಒಂದು ಕರದಲ್ಲಿ ಎತ್ತಿ ರಾ– ।
ವಣನು ಸೋಜಿಗ ಪೊಂದಿ ಹನುಮನ ಪೊಗಳಿದಾ ।
ಎಣೆಯಾರು ಈ ಹನುಮಗೆ ಸುರಾಸುರ ।
ಗಣದೊಳು ವಿಕ್ರಮಂಗೆ ನಿಜನಾಮ ।
ರಣಪ್ರಿಯ ವಿಜಯವಿಠ್ಠಲ ದಾಸರ ಪ್ರೇಮಗೆ ।
ರಣದೊಳು ಫಣಿಪನಾದಾ ॥ ೬ ॥

**ಆದಿ ತಾಳ**

ಭೀಮನಾದ ಹಿಡಿಂಬಾದಿ ಆ ಮಾಗಧನ ಸೀಳಿದ ।
ಭೂಮಿನೀಯೆನೆಂಬೋ ನೃಪನ ಯಮಪುರಿಗೆ ಕಳುಹಿದ ।
ಕಾಮನಯ್ಯನ ಪ್ರೀತಿ ಬಡಿಸಿ ತಾಮಸರ ಪರಿಹರಿಸಿದ ।
ಶ್ರೀಮದಾಚಾರ್ಯರಾಗಿ ಕುಮತಗಳ ದಹಿಸಿದ ।
ಆ ಮಹಾತತ್ತ್ವದ ಉರಳಿಹರಹಿ ವೈಷ್ಣವರ ಉದ್ಧರಿಸಿದ ।
ಕಾಮನಾಮ ವಿಜಯವಿಠ್ಠಲನ ಈ ಮಹಿಯೊಳಗೆ ಮೆರೆಸಿದ ॥ ೭ ॥

**ಜತೆ**

ವನಜಜಾಂಡಗಳೆಲ್ಲ ದಿನದಿನ ಪಾಲಿಪ ।
ಧನುರ್ಧರ ವಿಜಯವಿಠ್ಠಲನ ಪ್ರೇಮದ ದಾಸಾ ॥ ೮ ॥

* * *

## ಸುಳಾದಿ – ೬೬

ಕೇನ, ಷಟ್ಪ್ರಶ್ನೋಪನಿಷತ್ತುಗಳಲ್ಲಿ ವರ್ಣಿತವಾದ ವಾಯುದೇವರ ಮಹಿಮಾಸ್ತೋತ್ರವನ್ನು ದಾಸರಾಯರು ಈ ಸುಳಾದಿಯಲ್ಲಿ ಸಂಗ್ರಹವಾಗಿ ಹೇಳುತ್ತಾರೆ.

ಶರಣರೊಳಗೆ ಮುಖ್ಯ ಶರಣನಾದ, ದೇವತೆಗಳಲ್ಲಿ ಶ್ರೇಷ್ಠನಾದ, ಜೇಷ್ಠನಾದ, ವಾಯುದೇವರೇ ನಮಗೆ ತಾಯಿ, ತಂದೆ, ಬಂಧು, ಬಳಗ ಸರ್ವಸ್ವ. ಕರಣಶುದ್ಧಿಯಲ್ಲಿ ಈ ಪರಿ ತಿಳಿದವರ ದುರಿತಗಳೋಡಿಸಿ, ಪರಮಪದವಿಯನ್ನು ಕೊಡುತ್ತಾನೆ.

"ಪರಮಾತ್ಮನ ಪ್ರತಿಬಿಂಬನಾದ ಮೂರಾವತಾರದ ಗುರುವೆ, ಸುರತರುವೆ, ನಿನ್ನ ಅದ್ಭುತ ಲೀಲೆಗೆರಗಿ ನಮೋ ನಮೋ ಎನ್ನುವೆನು. ಪರಮ ಭಕ್ತನಾದ, ಮರುತ ಪ್ರಧಾನನೇ ನನಗೆ ಭರದ ಭಕ್ತಿಕೊಟ್ಟು ಕಾಪಾಡು."

**॥ ರಾಗ–ಆನಂದಭೈರವಿ–ಧ್ರುವ ತಾಳ ॥**

ಪ್ರಾಣ ಅಪಾನ ವ್ಯಾನ ಸಮಾನ ಉದಾನ ।
ಜ್ಞಾನಮಯಾ ಸತ್ವಶರೀರ ಸಮೀರ ।
ಆನಂದಸಾಂದ್ರ ಹರಿನಂದ ಪವಮಾನ ।
ಮಾನದಭಿಮಾನಿಯೆ ವಾಣಿಪ್ರೀಯಾ ।
ನೀನೆ ಸರ್ವರಲ್ಲಿ ಗೀರ್ವಾಣರಿಗೆ ಮೊದಲು ।
ನಾನಾ ಪ್ರಕಾರ ಜೀವಿಗಳಾಧಾರಾ ।
ಸ್ನಾನ ಜಪತಪ ಹೋಮ ಮೌನ ತೀರ್ಥಯಾತ್ರೆ ।
ನೀ ನಡೆಸಲದರಿಂದ ಸಿದ್ಧಿಪವು ।
ನೀನೆಲ್ಲಿ ಅಲ್ಲಿ ಶ್ರೀನಾರಾಯನು ಇಪ್ಪ ।
ಏನೆಂಬೆ ನಿನ್ನಯ ಕರ್ತೃತನಕೆ ।
ಕೋಣೆ ವಿಕೋಣೆಯಲ್ಲಿ ಸರ್ವವ್ಯಾಪಾರ ಪಂಚ– ।
ಪ್ರಾಣಜನಕ ವಾಯು ನಿನ್ನದಯ್ಯಾ ।
ದಾನವಾಮರರ ಮಧ್ಯ ಬಂದು ಅಘೋರ ವಿಷ– ।
ಪಾನವನ್ನು ಮಾಡಿದ ಪ್ರಭಂಜನಾ ।
ದೀನ ವತ್ಸಲ ನಮ್ಮ ವಿಜಯವಿಠ್ಠಲನಂಘ್ರಿ ।
ರೇಣು ಶಿರದಲ್ಲಿಟ್ಟರ್ಯೆ ರಮಣಾ ॥ ೧ ॥

**ಮಟ್ಟ ತಾಳ**

ಸುರರು ತಮ್ಮೊಳು ತಾವೇ ನೆರೆದು ಯೋಚಿಸಿದರು ।
ಮರುತನು ನಮಗೆಲ್ಲಿ ಹಿರಿಯನು ಅಹುದೆಂಬ ।
ಗರುವಿಕೆತನವೇನು ಸರಿ ಸರಿ ಬಂದಾಗ– ।
ತ್ತರವನಾಡುತಿರೆ ಹರಿ ಅರಿದೂ ಒಂದು ।
ಶರೀರವನು ಮಾಡಿ ಪರಿ ಪರಿಯ ತ– ।
ತ್ವರ ಒಳಗೆ ಪೋಗಿಸಿದ ಮರುತನ ಸಹವಾಗಿ ।
ಪುರುಷ ನಾಮಕ ದೇವ ವಿಜಯವಿಠ್ಠಲರೇಯ ।
ಸುರರಿಗೆ ಪ್ರಾಣನಿಗೆ ಪರೀಕ್ಷಿಸಿ ತೋರಿದಾ ॥ ೨ ॥

**ತ್ರಿವಿಡಿ ತಾಳ**

ಚರಣದಿಂದಲಿ ಇಂದ್ರಸೂನು ಪೋಗಲು ಹೆಳವ ।
ಕರಗಳಿಂದಲಿ ದಕ್ಷ ಪೋಗಲು ಕರಹೀನ ।
ಮರಳೆ ನಯನದಿಂದ ಭಾನು ಪೋಗಲು ಕುರುಡ ।
ತರಣಿ ಮಕ್ಕಳು ಪೋಗೆ ಪರಿಮಳವಾಗದು ।
ವರುಣ ಪೋಗಲು ರುಚಿಯೆ ತೋರದು ಕಾಣೋ ।

ಮರುತ ಸಖನು ಪೋಗೆ ಮೂಕ ನಾಹಾ ।
ತೆರಳಿ ದಿಗ್ದೇ ವತಿಗಳು ಪೋಗೆ ಕಿವಿಡನು ।
ಅರಣಿ ಸ್ವಾಯಂಭು ಪೋಗಲು ಅಲ್ಲಿಯೋ ನಿಲ್ಲ ।
ಮರುತನು ಪೋಗಲು ಮೈ ಸ್ಮರಣೆಯು ಇಲ್ಲ ।
ಗರುಡಶೇಷರುದ್ರ ಪೋಗಲು ಹಾನಿಲ್ಲ ।
ಇರದೆ ಗಣೇಶಾದಿ ಪೋಗೆ ಆ ದೇಹ ಅನಿಸಲಿಲ್ಲ ಪೆಣನೆಂದು ।
ವರ ಮುಖ್ಯ ಪ್ರಾಣ ಸ್ಥಾನದಿಂದಲಿ ವೇಗಾ- ।
ತೆರಳಿ ಪೋಗಲು ದೇಹ ಪೆಣನೆಂದೆನಿಸಿತು ।
ಪರೀಕ್ಷಿಸಿ ತಿಳಿದು ನಾಚಿಕೆ ಉಳ್ಳವರಾಗಿ ।
ಮರಳೆ ಪ್ರವೇಶಿಸೇ ಏಳಾದಿರೇ ।
ಹರಿಗೆ ಕೇವಲ ಮುಖ್ಯದಾಸ ಮುಖ್ಯಪ್ರಾಣ ।
ತಿರುಗಿ ಬಂದು ಹೋಗಲು ಚೇತನಾಗೆ ।
ಸುರರು ತಮ್ಮೊಳು ತಾವು ನೋಡಿಕೊಳ್ಳುತಲೆ ।
ಮರುತದೇವನೆ ನಮಗೆ ಹಿರಿಯನೆಂದೂ ।
ಕರವ ಮುಗಿದು ನಿಂದು ಜಯವೆಂದು ಕೊಂಡಾಡಿ ।
ಗುರುವೇ ನೀನೆಂದು ಪವನನ ಕೊಂಡಾಡೇ ।
ಮಿರಗುವಾಂಬರಧರ ವಿಜಯವಿಠ್ಠಲನ ।
ಶರಣೂಳರೆಗೆ ಮುಖ್ಯ ಶರಣು ಈತನು ಕಾಣೊ ॥ ೩ ॥

**ಅಟ್ಟ ತಾಳ**

ತಂದೆ ಈತನು ತಾಯಿ ಈತನು ಕಾಣೊ ।
ಬಂಧುಬಳಗ ಸರ್ವಾರ್ಥವು ಈತನು ।
ಹಿಂದು ಮುಂದೆ ನಮಗಾಧಾರ ಈತನು ।
ಎಂದೆಂದಿಗೆ ಸಂಬಂಧಿಗನೀತನು ।
ಚಂದದ ರಸಾಯನ ಭೋಕ್ತನು ಈತನು ।
ಇಂದ್ರಿಯಂಗಳಿಗೆ ಪ್ರತಿದಿನ ನಿಯಾಮಕಾ ।
ನಂದ ಮೂರುತಿ ನಮ್ಮ ವಿಜಯವಿಠ್ಠಲನಂಘ್ರಿ ।
ನಿಂದಿರಾದರ್ಚಿಪ ಗರಳ ಭಂಜನ ದೇವಾ ॥ ೪ ॥

**ಆದಿ ತಾಳ**

ತರಣಿ ಅಯನುತ್ತರ ಗೌರಪಕ್ಷ ಹಗಲು ।
ನರಭೂತವಾಯು ವ್ಯೋಮಾದಿಯಲ್ಲಿ ನೀನೆ ।
ಇರಳು ವಲ್ಲಭೆ ದಕ್ಷಣಾಯಣ ಕೃಷ್ಣ ಪಕ್ಷ ।
ಇರಳು ಸ್ತ್ರೀ ತೇಜಾದಿಯಲ್ಲಿ ನಿನ್ನ ರಮಣಿ ।

ಪರಿಪೂರ್ಣವಾಗಿ ನೀವಿಬ್ಬರು ಸರ್ವದಾ ।
ಹರಿ ಆಜ್ಞೆಧಿಂದ ವ್ಯಾಪಾರ ಮಾಳ್ಪದು ।
ಕರಣ ಶುದ್ಧಿಯಲ್ಲಿ ಈ ಪರಿ ತಿಳಿದವರಿಗೆ ।
ದುರಿತಗಳೋಡಿಸಿ ವರ ಪದವಿಯು ನೀವೇ ।
ಸರಿಗಾಣೆ ನಿನ್ನ ಅದ್ಭುತ ಲೀಲೆಗೆ ನಾನು ।
ಎರಗಿ ನಮೋ ನಮೋ ಎಂಬೆ ಮರುತ ಪ್ರಧಾನನೆ ।
ಸಿರಿಯರಸ ವಿಜಯವಿಠ್ಠಲನ್ನ ನೆಚ್ಚಿದ ।
ಪರಮ ಭಕ್ತನು ನೀ ಎನಗೆ ಭರದ ಭಕ್ತಿಯ ಕೊಡು ॥ ೫ ॥

**ಜತೆ**

ಮೂರವತಾರದ ಗುರುವೆ ಸುರ ತರುವೆ ।
ವಾರವಾರಕ್ಕೆ ವಿಜಯವಿಠ್ಠಲನ್ನ ಪ್ರತಿಬಿಂಬಾ ॥ ೬ ॥

* * *

## ಸುಳಾದಿ – ೬೭

**"ಬೊಮ್ಮನ ಪಟ್ಟಕ್ಕೇರುವ ನೀನು, ಭೂಮಿಯಲ್ಲಿ ಕೋತಿ ಕಾಯ ಧರಿಸಿದ್ದೇಕೆ? ಪ್ರಳಯದಲ್ಲಿಯೂ ನೀನು ಜಾಗ್ರತನಾಗಿರುವಾಗ ಇಂದ್ರನಿಂದ ನೊಂದು ಮೂರ್ಛಿತನಾದ ಮಾತಿನ ಮರ್ಮವೇನು?**

**ಮಲತ ಮಲ್ಲರ ವೈರಿಯಾದ ಲಕುಮಿನಲ್ಲನ ಪದಪಲ್ಲವಾರ್ಚನೆ ಮಾಡುವ ಸೂತ್ರನಾಮಕ ವಾಯುವೇ, ಹರಿಸಿರಿಗೆ ಅವಿಯೋಗ ಚಿಂತಿಸುವವನು, ಕೋಡಗಾಗಿ ಮುದ್ರಿಕೆಯನ್ನು ಕೊಟ್ಟ ಗುಟ್ಟೇನು?**

**"ಸ್ವಾಮಿಕಾರ್ಯ ಧುರಂಧರನಾದ, ಕಡು ಸಮರ್ಥನಾದ ಪೊಡವಿಪನ ನಿಜದಾಸನೇ, ಕರುಣದಿಂದ ನಮ್ಮನ್ನು ಪೊರೆವ ಭಾರ ನಿನ್ನದು."**

**ಈ ಸುಳಾದಿಯಲ್ಲಿ ಶ್ರೀ ಪ್ರಾಣದೇವರ ವಿರೋಧಾಭಾಸ ಸ್ತೋತ್ರವನ್ನು ಕಾಣುತ್ತೇವೆ.**

**॥ ರಾಗ ಭೈರವಿ – ಧ್ರುವ ತಾಳ ॥**

ಜಲಜಸಂಬವ ಪಟ್ಟಕ್ಕೇರುವ ಗುರುವೆ ।
ಇಳಿಯೊಳು ಕೋತಿ ಕಾಯ ಧರಿಸಿ ಪುಟ್ಟಿದ್ದೇನೊ ।
ಬಲು ಪ್ರಳಯದಲ್ಲಿ ಜಾಗ್ರತನಾಗಿದ್ದ ಮರುತ ।
ಕುಲಿಶ ಧರನಿಂದನೊಂದು ಮೂರ್ಛೆಗೊಂಡದ್ದೇನೊ ।
ಕಲಕಾಲ ಸಮಸ್ತ ಶ್ರುತಿ ನಿರ್ಣಯವಂತೆ ।
ಜಲಜಾಪ್ತನಲ್ಲಿ ನಿಂದು ಓದು ಓದಿದ್ದೇನೊ ।

ಬಲವಂತವಾಗಿ ಸುರರ ಕೈಯ ಕಪ್ಪವಗೊಂಬುವನೆ ।
ಒಲಿದು ಸುಗ್ರೀವಂಗೆ ದೂತನಾದದ್ದೇನೊ ।
ಗಳಿಗೆ ಬಿಡದೆ ಶ್ರೀಹರಿಯ ಕೂಡಾ ಇಪ್ಪಗೆ ।
ತಲೆಬಾಗಿ ರಾಮನ ಕಂಡ ನೆನಿಸುವದೇನೊ ।
ಛಲದಿಂದ ಖಳಜಾತಿಯ ಕೊಲಿಸುವ ಹರಿ ಪ್ರಿಯ ।
ಹುಲುವಾಲಿಯೊಬ್ಬನ್ನ ಕೊಲ್ಲಿಸಿದ ಬಗೆಯೇನೊ ।
ಜಲಜಜಾಂಡ ಕರತಲದಲ್ಲಿ ಕಾಂಬ ಪ್ರಾಣ ।
ಚಲುವ ಸೀತೆಯಗೋಸುಗ ಹುಡುಕಲು ಪೋದದ್ದೇನೊ ।
ಸಲೆ ಆಲೋಚನೆಯಿಂದ ಎಲ್ಲೆಲ್ಲಿದ್ದ ದ್ರವ್ಯನೋಳ್ಪನೆ ।
ಕುಳಿತು ಕಪಿಗಳ ಕೂಡಾಲೋಚನೆ ಮಾಡಿದ್ದೇನೊ ।
ಪಳಮಾತ್ರ ಕಾಲಭೀತಿ ಇಲ್ಲದ ಪ್ರತಾಪನೆ ।
ಸುಳಿದೆ ಬಿಡಾಲನಾಗಿ ಲಂಕೆಯೊಳು ಸೋಜಿಗವೇನೊ ।
ಮಲೆತ ಮಲ್ಲರ ವೈರಿ ವಿಜಯವಿಠ್ಠಲನಂಘ್ರಿ ।
ಜಲಜಾರ್ಚನೆ ಮಾಳ್ಪ ಸೂತ್ರ ನಾಮಕ ವಾಯು ॥ ೧ ॥

**ಮಟ್ಟ ತಾಳ**

ಹರಿಸಿರಿಗೆ ನಿತ್ಯ ಅವಿಯೋಗ ಚಿಂತಿಪನೆ ।
ವರ ಕೋಡಗನಾಗಿ ಮುದ್ರೆ ಇತ್ತದ್ದೇನೊ ।
ಉರಗನೊಡನೆ ಮೇರುಮಗನೆ ಕಿತ್ತಿದ ಧೀರ ।
ತರುಜಾತಿಗಳ ಕಿತ್ತು ಬಿಸುಟದ್ದೇನೊ ।
ಕರಣಾಭಿಮಾನಿಗಳ ಜಯಿಸಿದ ಜಗಜ್ಜೀವ ।
ನೂರಜು ದಾನವರಗೆದ್ದದ್ದು ಮಹಾ ಸೊಬಗೆ ।
ಸರುವ ಭುವನ ನಿನ್ನ ವಶನಾಗಿ ಇರಲು ।
ಪುರೂಹೂತನ ವೈರಿಯ ಕೈಗೆ ಸಿಕ್ಕದ್ದೇನೊ ।
ಪರಮಪುರುಷ ರಂ ವಿಜಯವಿಠ್ಠಲರೇಯನ ।
ಕರುಣದಿಂದಲಿ ನಮ್ಮನು ಪೊರೆವ ಪ್ರಾಣಾ ॥ ೨ ॥

**ತ್ರಿವಿಡಿ ತಾಳ**

ಗರಳ ಧರಿಸಿ ಸುರರ ಕಾಯ್ದ ಕರುಣಾನಿಧಿ ।
ದುರುಳ ರಾವಣನ ಸಭೆಯೊಳಂಜಿದ್ದೇನೊ ।
ಸರಸಿಜಜಾಂಡವ ಸಖನಿಂದ ದಹಿಸುವನೆ ।
ಭರದಿಂದ ಲಂಕೆಯ ದಹನ ಮಾಡಿದ್ದದ್ದೇನೊ ।
ನಿರುತ ಅಮೃತ ಉಂಡು ಸುಖಿಸುವ ಸಮರ್ಥ ।

ಪರಿ ಪರಿ ಫಲದಿಂದ ಹಸಿವೆ ನೂಕಿದ್ದೇನೊ ।
ಧರೆ ಚತುರ್ದಶದಲ್ಲಿ ನೀನೆ ಚೇಷ್ಟ ಪದನು ವಾ ।
ನರ ಬಳಗವನ್ನು ಖ್ಯಾತಿ ಮಾಡಿದ್ದದ್ದೇನೊ ।
ನೆರದ ಕಟಕವೆಲ್ಲ ಕರತಲದಲ್ಲಿ ದಾಟಿಪನೆ ।
ಗಿರಿಗಳ ಹೊತ್ತು ತಂದು ಶರಧಿ ಬಿಗಿದದ್ದೇನೊ ।
ಹರಿಯ ರೂಪಾನಂತ ಸಂತತ ಧರಿಪನೆ ।
ಧುರದೊಳು ರಾಮನ ಪೊತ್ತ ನೆನಿಪದೇನೊ ।
ಕರದಲ್ಲಿ ಮಹಾಗದೆ ಪಿಡಿದಿಪ್ಪ ಪುರುಷನೆ ।
ಗಿರಿ ತರುಶಾಖದಿಂದ ರಣವ ಮಾಡಿದ್ದೇನೊ ।
ಸರುವನಿಯಾಮಕನಾಗಿ ವ್ಯಾಪಾರ ಮಾಡಿಪನೆ ।
ಕರೆದು ವಿಭೀಷಣನ ಪ್ರಶ್ನೆ ಕೇಳುವದೇನೊ ।
ಭರಣ ಮಿನುಗುವ ವಸನದಿಂದೊಪ್ಪುವ ।
ವರ ಕೌಪೀನವ ಹಾಕಿ ಚರಿಸಿದ ಬಗೆ ಏನೋ ।
ತರಣಿ ವಂಶಜ ರಾಮ ವಿಜಯವಿಠ್ಠಲರೇಯನ ।
ಚರಿತೆಯಂದದಿ ನಿನ್ನ ಚರಿಯ ತೋರಿದ ಹನುಮ ॥ ೩ ॥

### ಅಟ್ಟ ತಾಳ

ದ್ವಿತೀಯ ಕೂರ್ಮನಾಗಿ ಜಗದ ಪೊತ್ತ ಶಕ್ತ ।
ಭೃತ ಸಂಜೀವನಾದ್ರಿ ಭಾರತರವೆನೊ ।
ಸತತ ಆರಬ್ಧಾಂತಗಾಮಿ ನೀನಾಗಿದ್ದು ।
ಜಿತ ಶಕ್ರನ ಪಾಶದೊಳಗೆ ಬಿದ್ದದ್ದೇನೊ ।
ಅತಿಶಯ ಜ್ಞಾನದಲಿಪ್ಪ ಪವನನೆ ।
ಖತಿಗೊಂಡು ಮಾಯಾ ಸೀತೆಗೆ ಚಿಂತಿಸಿದ್ದೇನೊ ।
ಅತಿಶಯ ಕೋಟಿ ರಾವಣಿ ಭಂಗ ನೆರೆದು ।
ಪತಿಯ ಬಾಣದಲಿಂದ ಅವನ ಕೊಲಿಸಿದ್ದೇನೊ ।
ಶ್ರುತಿಸತಿ ವಿನುತ ಶ್ರೀವಿಜಯವಿಠ್ಠಲನ್ನ ।
ಸ್ತುತಿಸಿ ಕೊಳುತ ಹರಿಗೆ ಪ್ರೀತನೆನಿಸಿದ ಪ್ರಾಣ ॥ ೪ ॥

### ಆದಿ ತಾಳ

ಆ ಮಹಾದೇವಾದ್ಯರಿಗೆ ಪಟ್ಟ ಕೊಡಿಸಿದವನೆ ।
ಭೂಮಿಯೊಳಗೆ ವಿಭೀಷಣಗೆ ಪಟ್ಟ ಕೊಡಿಸಿದ್ದು ಘನವೆ ।
ರೋಮ ರೋಮಕೆ ಕೋಟಿ ಲಿಂಗ ಉದರಿಸಿದವನೆ ।
ಆ ಮಹಾಕಾಶಿಗೆ ಲಿಂಗ ತರಲು ಪೋದ ಬಗೆ ಏನೊ ।

ಕಾಮಿಸಿದಲ್ಲಿ ವ್ಯಾಪ್ತನಾಗಿ ಇರುವನೆ ಸು ।
ತಾಮ್ರಸುತನ ರಥದಲ್ಲಿ ನಿಂತಿದ್ದೇನೊ ।
ಕೋಮಲಾಂಗನೆ ನಿನ್ನ ವರ್ಣಿಸಲು ಭಾರತಿಗರಿದು ।
ಈ ಮರ್ತ್ಯ ಲೋಕದಲ್ಲಿ ಈ ರೂಪವಾದದ್ದೆನೊ ।
ಸೋಮಾರ್ಕ ಸೋಲಿಸುವ ಮಾಣಿಕ್ಯವನೆ ಇರಲು ।
ಧಾಮ ಮಾಡಿದ್ದೇನೊ ಕಿಂಪುರುಷ ಖಂಡದೊಳಗೆ ।
ಸಾಮಗಾಯನಲೋಲ ವಿಜಯವಿಠ್ಠಲರೇಯ ।
ಸ್ವಾಮಿ ಕಾರ್ಯ ಧುರಂಧರ್ಯ ಭಕ್ತ ಸೌಕರ್ಯ ॥ ೫ ।

**ಜತೆ**

ಒಡೆಯನಾಜ್ಞವ ತಾಳಿ ಕಾರ್ಯ ಮಾಡಿದ ಗುರುವೆ ।
ಕಡು ಸಮರ್ಥ ವಿಜಯವಿಠ್ಠಲನ ನಿಜದಾಸ ॥ ೬ ॥

* * *

## ಸುಳಾದಿ – ೬೮

ವಾಯುದೇವರು ಅವತಾರತ್ರಯದಲ್ಲಿ ಹಸ್ತದಿಂದ ಮಾಡಿದ ಪವಿತ್ರ ಮಹಿಮೆಯನ್ನು ದಾಸರಾಯರು ಈ ಸುಳಾದಿಯಲ್ಲಿ ವರ್ಣಿಸಿದ್ದಾರೆ. ಹಸ್ತದ ಸಾರ್ಥಕತೆ ಏನೆಂಬುದನ್ನು ತಿಳಿದು ನಡೆಯುವುದೇ ಸುಜೀವಿಗಳ ಲಕ್ಷಣ.

**"ಪೊಡವಿ ಪತಿ ರಘುನಾಥನಿಗೆ ಎರಗಿ ಮುಗಿದ ಹಸ್ತ, ಜಡ ರಾವಣನ ಎದೆಯಲ್ಲಿ ಗುದ್ದಿದ ಹಸ್ತ, ಬಿಡದೆ ಪೂಜಿಪರಿಗೆ ಅಭಯವನ್ನು ಕೊಡುವ ಹಸ್ತ, ರಾಮನ ಅಡಿಗಳಲ್ಲಿ ಅನುಗಾಲವಿಟ್ಟ ಹಸ್ತ ಇಷ್ಟೇ ಅಲ್ಲ ಭೀಮಾವತಾರದಲ್ಲಿ ಗದೆಯಿಂದಲಿ ಅರಿಗಳನ್ನು ಸದೆಬಡಿದ ಹಸ್ತ, ಸುದತಿಯ ತುರುಬು ತಿದ್ದಿದ ಹಸ್ತ, ಇನ್ನು ಮಧ್ವಾವತಾರದಲ್ಲಿ ಶಿಶುವಾಗಿ ಹುರುಳಿಗುಗ್ಗರಿಯನ್ನು ಮೆದ್ದ ಹಸ್ತ, ನಿಕ್ಷಿಕ ತಿಂತ್ರಿಣಿ ಬೀಜ ಸಾಲ ತಿದ್ದಿದ ಹಸ್ತ, ವಸುಧೆಯ ಸುರರಿಗೆ ಮುದ್ರೆವತ್ತಿದ ಹಸ್ತ."**

**॥ ರಾಗ ರೇಗುಪ್ತಿ – ಧ್ರುವ ತಾಳ ॥**

**ಹನುಮದವತಾರ ಮಹಿಮೆ**

ಕಡಗ ಕಂಕಣದಿಂದ ಶೋಭಿತವಾದ ಹಸ್ತಾ ।
ಪೊಡವಿಪತಿ ರಘುನಾಥಗೆ ಎರಗಿ ಮುಗಿದ ಹಸ್ತಾ ।
ಒಡನೆ ಕುರುಹುಗೊಂಡು ಸೀತೆಗಿತ್ತ ಹಸ್ತಾ ।
ಗಿಡಗಳು ಮುರಿದು ತರಿದಂಥವೀ ಹಸ್ತಾ ।
ಘುಡಿ ಘುಡಿಸುತ ಅಕ್ಷನ ಸದೆಬಡಿದ ಹಸ್ತಾ ।

ಜಡರಾವಣನ ಎದೆಯಲ್ಲಿ ಗುದ್ದಿದ ಹಸ್ತಾ ।
ತಡಿಯದೆ ಚೂಡಾಮಣಿಯ ಒಡೆಯಾಗಿತ್ತ ಹಸ್ತಾ ।
ಕಡು ಪರಾಕ್ರಮದ ಹಸ್ತಾ ।
ಕಡಲಾ ಬಂಧಿಸಲು ಗಿರಿಗಳ ತಂದ ಹಸ್ತಾ ।
ಬಿಡದೆ ಪೂಜಿಪರಿಗೆ ಅಭಯ ಕೊಡುವ ಹಸ್ತಾ ।
ಸಡಗರದ ದೈವ ಸಿರಿ ವಿಜಯವಿಠ್ಠಲ ರಾಮನ ।
ಅಡಿಗಳಲ್ಲಿ ಅನುಗಾಲ ಇಟ್ಟ ಹಸ್ತಾ ।

### ಮಟ್ಟ ತಾಳ
### ಭೀಮಾವತಾರ ಮಹಿಮೆ

ಗದೆಯಿಂದ ಅರಿಗಳ ಸದೆಬಡಿದ ಹಸ್ತಾ ।
ಮುದದಿಂದಲಿ ಅದ್ರಿ ವೊದಗಿ ತಂದ ಹಸ್ತಾ ।
ಕದನದೊಳಗೆ ಮಾಗಧನ ಸೀಳಿದ ಹಸ್ತಾ ।
ಮದನೃಪನನುಜನ ಉರವ ಬಗೆದ ಹಸ್ತಾ ।
ಸುದತಿಯ ತುರುಬು ತಿದ್ದಿದ ಕರುಣ ಹಸ್ತಾ ।
ಪದೋಪದಿಗೆ ನಮ್ಮ ವಿಜಯವಿಠ್ಠಲನ್ನ ।
ಸದಮಲ ಭಕ್ತಾ ಎನಗೆ ಪೊಳೆವ ಹಸ್ತಾ ।

### ತ್ರಿವಿಡಿ ತಾಳ
### ಅವತಾರತ್ರಯ ಮಹಿಮೆ

ರಣದೊಳು ಲಕ್ಷ್ಮಣನ ಎತ್ತಿ ತಂದ ಹಸ್ತಾ ।
ಕ್ಷಣದೊಳು ದ್ರೋಣನ ರಥ ಬಗೆದ ಹಸ್ತಾ ।
ಶಣಿಸುವರಿಗೆ ಎದೆ ಶೂಲವಾಗಿಹ ಹಸ್ತಾ ।
ವಿನಯದಿಂದಲಿ ಹರಿವಾಣವೈದ ಹಸ್ತಾ ।
ಮಣಿಗಣದಿಂದ ರಾಮನ ಎಣಿಸುವ ಹಸ್ತಾ ।
ತೃಣ ಮಾಡಿ ಬಕನ ಸಂಹರಿಸಿದ ಮಹಾ ಹಸ್ತಾ ।
ಅನಿಮಿಷರಿಗೆ ತುತ್ತು ಮಾಡಿ ನೀಡಿದ ಹಸ್ತಾ ।
ವನಿತೆಗೆ ಸೌಗಂಧಿ ಕುಸುಮ ತಂದ ಹಸ್ತಾ ।
ಮನದೊಳು ಅಸುರೆಯ ಬಿಗಿದಪ್ಪಿದ ಹಸ್ತಾ ।
ಘನದಂಡ ಕಾಷ್ಟವ ಧರಿಸಿ ಮೆರೆದ ಹಸ್ತಾ ।
ಅನಿಮಿತ್ಯ ಬಂದು ಶ್ರೀ ವಿಜಯವಿಠ್ಠಲ ರೇಯನ ।
ಮನದೊಳಿಟ್ಟು ಅರ್ಚನೆ ಮಾಡುವ ಹಸ್ತಾ ॥ ೩ ॥

**ಅಟ್ಟ ತಾಳ**

ವಾರಿಜಜಾಂಡವ ಸಾಕುವದೀ ಹಸ್ತಾ ।
ಭಾರತಿ ದೇವಿಯ ಮನಸಿಗೊಪ್ಪುವ ಹಸ್ತಾ ।
ನೂರಾರು ಖಂಡಗ ಪಾಕ ಗೈಸಿದ ಹಸ್ತಾ ।
ವಾರಣದಿಂದ ಪುಸ್ತಕವ ಪಿಡಿದ ಹಸ್ತಾ ।
ಮಾರಾರಿಗೆ ಉಪದೇಶ ಮಾಡಿದ ಹಸ್ತಾ ।
ವಾರಣಗಳ ಗಗನಕ್ಕೆ ಟ್ಟ ಹಸ್ತಾ ।
ಚಾರು ಚರಿತ ನಮ್ಮ ವಿಜಯವಿಠ್ಠಲರೇಯನ ।
ಹಾರೈಸಿ ಹರುಷದಿ ಪೂಜಿಪ ಈ ಹಸ್ತಾ ॥ ೪ ॥

**ಆದಿ ತಾಳ**

ವಿಷ ಉದ್ಭವಿಸಲು ವರಸಿ ಕಳೆದ ಹಸ್ತಾ ।
ಶಿಶುವಾಗಿ ಹುರುಳಿ ಗುಗ್ಗರಿ ಸವಿದ ಹಸ್ತಾ ।
ಬಿಸಿಜಸಖಿಗೆ ತುಡಿಕಿ ಕ್ರಮಗೆಡಿಸಿದ ಹಸ್ತಾ ।
ನಿಷಿಕ ತಿಂತ್ರಿಣಿ ಬೀಜ ಸಾಲ ತಿದ್ದಿದ ಹಸ್ತಾ ।
ದಶ ಚತುರ್ಲೋಕವ ಒಳಗಡಗಿಸುವ ಹಸ್ತಾ ।
ಹಸಿದು ತುತಿಸಲು ಅಮೃತವಗರೆದ ಹಸ್ತಾ ।
ದಶ ಶಿರನ ಮಡದಿಯ ಶರಗು ಎಳೆದ ಹಸ್ತಾ ।
ಅಸುರ ಮೈರಾವಣನ ಕೊಂದು ಬಿಸುಟ ಹಸ್ತಾ ।
ವಸುಧೆಯ ಸುರರಿಗೆ ಮುದ್ರೆ ವತ್ತಿದ ಹಸ್ತಾ ।
ಶಶಿವರ್ಣದಂತೆ ನಖದಿಂದೊಪ್ಪುವ ಹಸ್ತಾ ।
ವಸುಧೀಶ ವಿಜಯವಿಠ್ಠಲ ರಾಮಕೃಷ್ಣ ವ್ಯಾಸರ ।
ಬಿಸಜ ಪಾದವ ಬಿಡದೆ ಭಜಿಪ ಮಂಗಳ ಹಸ್ತಾ ॥ ೫ ॥

**ಜತೆ**

ಮೂರಾವತಾರದಲ್ಲಿ ಕಾರ್ಯ ಮಾಡಿದ ಹಸ್ತಾ ।
ಧೀರ ಶ್ರೀ ವಿಜಯವಿಠ್ಠಲಗೆರಗಿದ ಹಸ್ತಾ ॥ ೬ ॥

* * *

## ಸುಳಾದಿ – ೬೯

**ಈ ಸುಳಾದಿಯಲ್ಲಿ ದಾಸರಾಯರು ಮಾಡಿದ ಶ್ರೀಪ್ರಾಣದೇವರ ಚರಣದ ವರ್ಣನೆ ಚಾರಿತ್ರಿಕ ಮಹತ್ತ್ವವುಳ್ಳದ್ದಾಗಿದೆ.**

ಬ್ರಹ್ಮಾಂಡವನ್ನು ಬೆಳಗುತ್ತಿರುವ, ಅಂದವಾಗಿ ಶ್ರೀಹರಿಯ ಮುಂದೆ ಕುಣಿದಾಡುವ, ಇಂದುಮೌಳಿ ಮೊದಲಾದ ಸುರರಿಂದ ನಿತ್ಯ ಪೂಜೆಗೊಂಬುವ, ಭಾರತೀದೇವಿಯು ಏಕಾಂತದಲ್ಲಿ ನೋಡಿ ಗಂಧ ಪರಿಮಳ ಪೂಸಿ ಅಪ್ಪಿ ಕೊಂಬುವ, ಅಂದದ ಅಭಿಲಾಷೆಯನ್ನು ಕೊಡುವ ಕಮನೀಯ ಚರಣ.

ಅಂಜನಾದೇವಿಯಲ್ಲಿ ಉದ್ಭವಿಸಿ ಬಂದಾಗ ಸೂರ್ಯನತ್ತ ಹಾರಿದ, ರಾಮನ ಮೃದುನುಡಿಯನ್ನು ಕೇಳಿ ಕಪಿ ಸಮೂಹದೊಂದಿಗೆ ನಡೆದು, ಕಂಜಮುಖಿಗೋಸುಗ ಸಂಚರಿಸಿದ ಚರಣ.

ಪುರುಷಮೃಗನ ಕೈಯ ಪಿಡಿಸಿಕೊಂಡ ಚರಣ, ದುರ್ಯೋಧನನ ಶಿರವ ಮೆಟ್ಟಿದ ಚರಣ.

ವಿಪ್ರನ ಮನೆಯನ್ನು ಪಾವನ ಮಾಡಿದ, ಒಪ್ಪದಿಂದ ತೀರ್ಥಯಾತ್ರೆ ಮಾಡಿದ, ದರ್ಪವುಳ್ಳ ಮಹಾ ಮಾಯಿ ಅರಣ್ಯಕ್ಕೆ ಚಪ್ಪಗೊಡಲಿಯಂತಿರುವ ಚರಣ.''

ಇಂತಹ ಮಹಾಮಹಿಮಾನ್ವಿತವಾದ ಚರಣವನ್ನು ಚಿತ್ತದಲ್ಲಿರಿಸಿ, ನಿತ್ಯ ಭಜಿಸುವ ಸುಜೀವಿಗಳಿಗೆ ಪರಮಾತ್ಮನು ನಿತ್ಯಾಯು ಹಾಗೂ ಉತ್ಸಾಹವನ್ನಿತ್ತು ಸದಾ ಕಾಪಾಡುತ್ತಾನೆ.

### ॥ ರಾಗ ನಾಟ – ಧ್ರುವ ತಾಳ ॥
### ವಾಯುದೇವರ ಮೂಲಾವತಾರ ವರ್ಣನೆ

ಅಂದಿಗೆ ಪೊಂಗೆಜ್ಜೆ ಬಿರುದಿನ ಕಾಲ್ದಂಡೆ – ।
ಯಿಂದ ಝುಗಝುಗಿಸುವ ಅರುಣಾಕಾಂತಿಯ ಚರಣ ।
ಇಂದುವಿನ ಸೋಲಿಸುವ ಪ್ರಕಾಶಪೂರ್ಣಮಯ – ।
ದಿಂದ ಬ್ರಹ್ಮಾಂಡವನ್ನು ಬೆಳಗುತಿಪ್ಪ ಚರಣ ।
ತಂದನ್ನ ತಾನ ಎಂದು ಕೈಯ್ಯಲಿ ಕಿನ್ನೂರಿ ಧರಿಸಿ ।
ಅಂದವಾಗಿ ಶ್ರೀಹರಿಯ ಮುಂದೆ ಕುಣಿವ ಚರಣ ।
ಇಂದು ಮೌಳಿ ಮುಖ್ಯ ಸುರರಾದ್ಯರಿಂದ ಆ– ।
ನಂದವಾಗಿ ನಿತ್ಯ ಪೂಜೆ ಗೊಂಬ ಚರಣ ।
ಅಂದಿಗೆ ಪೊಂಗೆಜ್ಜೆ ನಿಟ್ಟ ಚರಣ ।
ಮಂದ ಮಾನವರಿಗೆ ಪ್ರೀತಿ ಬಡಿಸಿ ಸುಖ – ।
ಸಿಂಧುವಿನೊಳಗಿಟ್ಟು ದಯಮಾಳ್ಪುದೀ ಚರಣ ।
ಸಂದೇಹ ವಿಪರೀತಜ್ಞಾನ ಜೀವರಿಗೆ ನಿ– ।
ರ್ಬದನದೊಳು ಪೋಗಿಸಿ ಕಷ್ಟ ಬಡಿಸುವ ಚರಣ ।
ಮುಂದೆ ಬೊಮ್ಮನಾಗಿ ಸತ್ಯ ಲೋಕದಲ್ಲಿ ಮೃ– ।
ಗೇದ್ರನ ಗದ್ದುಗಿ ಮೇಲೆ ವಾಲಗ ಗೊಂಬುವ ಚರಣ ।
ಒಂದೊಂದು ರೂಪ ಗುಣ ಕ್ರಿಯ ಸಮೂಹಗಳು ಅ– ।

ತೀಂದ್ರಿಯವಾಗಿ ಮನಕೆ ತೋರುವ ಶ್ರೀ ಚರಣ ।
ಸುಂದರ ಭಾರತಿ ದೇವಿ ಏಕಾಂತದಲಿ ನೋಡಿ ।
ಗಂಧ ಪರಿಮಳ ಪೂಸಿ ಅಪ್ಪಿಕೊಂಬುವ ಚರಣ ।
ತಂದೆ ತಾಯಿಗಳಂತೆ ತಪ್ಪದೆ ಅನುದಿನ ।
ಅಂದದಭಿಲಾಷೆ ಕೊಡುವ ಕಮನೀಯ ಚರಣ ।
ಅಂದಿಗಂದಿಗೆ ಸಮನಾಗಿ ಸಾಧ್ಯವಾಗಿ ।
ಒಂದೇ ಪ್ರಕಾರದಲ್ಲಿ ಭಕ್ತರಿಗೆ ವೊಲಿವ ಚರಣ ।
ಪೊಂದಿದವರಲ್ಲಿ ವಿಶ್ವಾಸ ಮಾಡುವ ಜನರ ।
ಬಂಧನ ಪರಿಹರಿಸಿ ಪಾಲಿಸುವದೀ ಚರಣ ।
ಇಂದು ಹೃತ್ಕಮಲ ಮಧ್ಯದ ಹರಾಕಾಶದಲ್ಲಿ ।
ನಿಂದು ಪೂಜೆ ಮಾಡಲ್ಪಟ್ಟ ಮಂಗಳ ಚರಣ ।
ಕಂದರ್ಪ ಪಿತ ನಮ್ಮ ವಿಜಯವಿಠ್ಠಲಗೆ ಶರ – ।
ಣೆಂದು ಬಾಗುವ ಸೂತ್ರ ಪ್ರಾಣವ ಪರಮ ಚರಣ ॥ ೧ ॥

**ಮಟ್ಟ ತಾಳ**
**ಹನುಮದವತಾರ ವರ್ಣನೆ**

ಅಂಜನೆ ದೇವಿಯಲಿ ಉದ್ಭವಿಸಿ ಬಂದು ।
ಕಂಜ ಸಖನೆಡೆಗೆ ಹಾರಿದದೀ ಚರಣ ।
ಕಂಜಮಿತ್ರನ ಸುತನ ಕರೆದು ಮನ್ನಿಸಿ ಅವನ ।
ಅಂಜಿಕೆಯನು ಬಿಡಿಸಿ ಎರಗಿಸಿಕೊಂಡ ಚರಣ ।
ಕಂಜನಾಭನ ಕಂಡು ಪರವಶದಲಿ ಹಾ ಹಾ ।
ರಂಜಿಸುತಲಿ ವೇಗ ಜಗದ್ಧಾರಿದ ಚರಣ ।
ಕುಂಜರನಾಥನ ಮಗನ ಮಹಾ ಗರ್ವ ।
ಭಂಜನೆ ಮಾಳ್ಪದಕೆ ನಡೆದಾದಿದ ಚರಣ ।
ಮಂಜುಭಾಷಣ ರಾಮ ಪೇಳ್ದಾಕ್ಷಣ ಕಪಿ– ।
ಪುಂಜರ ಒಳಗೊಂಡು ತೆರಳೀದಾದೀ ಚರಣ ।
ನಂಜುಸವಿದ ಧೀರ ಗಿರಿಯು ಜಿಗಿದು ನೋಡಿ ।
ಅಂಜಿದೆ ಜಲನಿಧಿಯ ಲಂಘಿಸಿದ ಚರಣ ।
ಜಂಝಾನಿಳಾನಂತೆ ದೈತ್ಯ ಪಟ್ಟಣ ಪೊಕ್ಕು ।
ಕಂಜಮುಖಿಗೋಸುಗ ಸಂಚರಿಸಿದ ಚರಣ ।
ಗುಂಜಿ ತೂಕದಿನಿತು ಭಯವಿಲ್ಲದೆ ಪುರಧ– ।
ನಂಜಯಗೆಡೆಣಿಸುತ ಓಡ್ಯಾಡಿದ ಚರಣ ।
ವ್ಯಂಜಕೆ ತಾನಾಗಿ ಸ್ವಾಮಿಕಾರ್ಯದಲ್ಲಿ ಮೃ– ।
ತ್ಯುಂಜಯ ಶಿಷ್ಯರನ ವರಿಸಿದ ಬಲು ಚರಣ ।

ಭುಂಜಿಪ ಎಡೆಗೊಂಡು ದೇವನಲ್ಲಿ ಇಡಲು ।
ಎಂಜಲವೈದೊಂದು ಮರವೇರಿದ ಚರಣ ।
ಅಂಜಲಿಪುಟಬಿಟ್ಟು ಬಿಂಕದಲಿ ಧ- ।
ನಂಜಯನ ರಥಕ್ಕೆ ಬಂದೇರುವ ಚರಣ ।
ಕಿಂಜಲ್ಕವಾಸ ವಿಜಯವಿಠ್ಠಲನಂಘ್ರಿ ।
ಕಂಜಪೂಜಿಪ ಹನುಮನ ನಾನಾದರ್ಣವಾದ ಚರಣ ॥ ೨ ॥

## ತ್ರಿವಿಡಿ ತಾಳ
## ಭೀಮಾವತಾರ ವರ್ಣನೆ

ಗಿರಿಯ ಮಧ್ಯದಿ ಜಿಗುಳಿ ವದ್ದಾಡಿದ ಚರಣ ।
ಗಿರಿಯ ಮಧ್ಯದಿ ದ್ವಿಜ ಗೂಳಿವದ್ದ ಚರಣ ।
ಮರದ ಮೇಲೆ ಇದ್ದವರ ಕೆಡಹಿದಾ ಚರಣ ।
ಸುರನದಿಯೊಳು ಬಿದ್ದೆ ಅಹಿಗಳ ಕುಟ್ಟಿದ ಚರಣ ।
ನಿರುತ ಪರಿಪರಿಯಿಂದ ನಲಿದಾಡಿದ ಚರಣ ।
ಅರಗಿನ ಮನೆ ಗೆದ್ದು ಬಂದು ರಾತ್ರೆ ಹಿಡಿಂಬನ ।
ವರಸಿ ಸತಿಯಳಿಂದ ಅರ್ಚನೆಗೊಂಡ ಚರಣ ।
ಪುರದೊಳು ಭಿಕ್ಷವ ಬೇಡುತ ತಿರುಗಿದ ಚರಣ ।
ದುರುಳ ಬಕನ ವದ್ದ ದುಸ್ತರದಾ ಚರಣ ।
ಅರಸಿನ ಸಭೆಯಲ್ಲಿ ಹುಂಕರಿಸಿ ।
ಹರುಷದಲಿ ನೆನೆದು ದ್ರೌಪದಿ ಬಂದು ಕಂಡ ಚರಣ ।
ನರನಾಥ ರಾಜ ಸುಯಾಗವ ಮಾಡಲು ಪೋಗಿ ।
ಧರೆಯಲ್ಲಿ ತಿರುಗಿ ವಂದಿಸಿ ಕೊಂಡ ಚರಣ ।
ಪುರುಷ ಮೃಗನ ಕೈಯ ಪಿಡಿಸಿ ಕೊಂಡ ಚರಣ ।
ಸುರರೊಳು ಅಧಿ ಕಾದಾ ಭೀಮನ ಚರಣ ।
ತೆರಳಿ ವನದಲ್ಲಿ ಕುಸುಮ, ಘೋಷಯಾತ್ರೆ ಮತ್ಸ್ಯನ – ।
ಪುರದಲ್ಲಿ ಮೆರೆದ ಮಂದಾರ ಚರಣ ।
ಧುರದೊಳು ನಿಂದು ಬಲ್ಲಿದ ಅನ್ಯೋ- ।
ನ್ಯರನ್ನು ನೆಲಕಿಕ್ಕಿ ದುರುಳ ಸೈನ್ಯವೆಲ್ಲ ।
ಪರಿಹರಿಸಿದ ಚರಣ ಅಪ್ರತಿ ಚರಣ ।
ತರುಣಿ ಪಾಂಚಾಲಿಯ ಎಳೆದ ಖಳನ ಭಂಗಿಸಿ ।
ಉರದ ಮೇಲೆ ನಿಂತು ಕುಣಿದಾಡಿದ ಚರಣ ।
ದುರ್ಯೋಧನನು ಬಂದು ತರುಬಲಾ ಕ್ಷಣಕೆ ಅವನ ।
ತರಿದು ಬಿಸಾಟಿ ಶಿರವ ಮೆಟ್ಟಿದ ಮಹಾ ಚರಣ ।
ಹರಿಗೆ ಸಮ್ಮೊಗವಾಗಿ ಅಟ್ಟಹಾಸದಲಿ ನಿಂ ।

ದಿರದೆ ನಿದಾನದಲಿ ನಾಟ್ಯವಾಡಿದ ಚರಣ ।
ಹರನ ಕಡಿಯಿಂದ ಹರಿಯ ಅಸ್ತ್ರ ಬರಲು ।
ಶಿರವ ಬಾಗದೆ ಧರಣಿಯ ಮೇಲೆ ಕುಣಿದ ಚರಣ ।
ವರ ವೃಕೋದರನ ಚರಣ ಶರಣ ಪಾಲಕ ಚರಣ ।
ಪರಮಪುರುಷ ಕೃಷ್ಣ ವಿಜಯವಿಠ್ಠಲ ರೇಯನ ।
ಶರಣರೊಳಧಿಕನಾದ ಭೀಮಸೇನನ ಚರಣ ಅಪ್ರತಿ ಚರಣ ॥ ೩ ॥

**ಅಟ್ಟ ತಾಳ**
**ಶ್ರೀಮಧ್ವಾವತಾರ ವರ್ಣನೆ**

ವಿಪ್ರನ ಮನೆಯನ್ನು ಪಾವನ ಮಾಡಿದ ಚರಣ ।
ಸ್ವಪ್ರಕಾಶದಿಂದ ಪೊಳೆವದೀ ಶಿರಿ ಚರಣ ।
ಸುಪ್ರೇಮದಿಂದ ಜನನಿಯು ಕರೆಯಲು ।
ಕ್ಷಿಪ್ರತನದಲ್ಲಿ ಧುಮುಕಿದ ಚರಣ ।
ಸರ್ಪನ ವರಿಸಿದ ಚರಣ ದಿವ್ಯ ಚರಣ ।
ತಪ್ಪದೆ ಹೆಬ್ಬುಲಿ ಕೂಡ ಚರಿಸಿದ ಚರಣ ।
ಅಪ್ಪನ ಮಾತಿಗೆ ಯತಿಯಾಗಿ ಮುನಿಯಾಗಿ ಲೇಸಾಗಿ ।
ಒಪ್ಪದಿಂದ ತೀರ್ಥಯಾತ್ರೆ ಮಾಡಿದ ಚರಣ ।
ಗುಪ್ತಮಾರ್ಗದಿಂದ ನದಿಯ ದಾಟಿದ ಚರಣ ।
ತೃಪ್ತಿಯ ಕೊಡುವ್ದು ನಮಗೆ ಇದೇ ಚರಣ ।
ದರ್ಪವುಳ್ಳ ಮಹಾಮಾಯಿ ಅರಣ್ಯಕ್ಕೆ ।
ಚಪ್ಪಗೊಡಲಿಯಾಗಿ ಇರುತ್ತಿಪ್ಪದೀ ಚರಣ ।
ಪುಷ್ಪದೋಪಾದೇಲಿ ಬದರಿಕಾಶ್ರಮದಲ್ಲಿ ।
ಸುಪ್ರೇಮದಿಂದಲಿ ಪೂಜೆಗೊಂಬ ಚರಣ ।
ತುಪ್ಪ ಸಕ್ಕರಿ ಪಾಲು ಉಣಿಸುವುದೇ ಚರಣ ।
ಕಪ್ಪು ಕಲುಷವಿಲ್ಲ ರಾತ್ರಿಲಿ ಓದುವ ।
ಅಪ್ಪಾರ ಜನಕ್ಕೆ ಬೆಳಕು ಮಾಡಿದ ಚರಣ ।
ಮುಪ್ಪು ಇಲ್ಲದ ಜೀವನ ಸಾಧನೆಗಳ ।
ದರ್ಪಣದಂತೆ ತೋರಿಕೊಡುವದೀ ಚರಣ ।
ಬಪ್ಪ ಪೋಗುವ ಶಕುತಿ ಏನು ಪೇಳಲಿ ಕಂ– ।
ದರ್ಪ ಎಣಿಸಲಾಗಿ ನೆಲೆದೋರದಾ ಚರಣ ಕಂ– ।
ದರ್ಪನಯ್ಯನ ನೆನೆಸಲಾಗಿ ನೆಲೆದೋರುವದೀ ಚರಣ ।
ಕಪ್ಪುಗೊರಳನಿಂದ ವಂದಿತ ಚರಣ ।
ಸಪ್ತಭುವನೇಶ ವಿಜಯವಿಠ್ಠಲಗೆ ।
ಆಪ್ತವಾದ ಆನಂದತೀರ್ಥರ ಚರಣ ॥ ೪ ॥

**ಆದಿ ತಾಳ**

ಚತುರಯುಗದೊಳು ಮಹಿಮೆ ತೋರಿದ ಚರಣ ।
ಚತುರವಿಂಶತಿ ತತ್ತ್ವವ್ಯಾಪಿಸಿ ಇದ್ದ ಚರಣ ।
ಸ್ತುತಿಸಿದ ಜನರಿಗೆ ಭೇದಜ್ಞಾನ ಕೊಟ್ಟು ।
ಗತಿಗೆ ಸತ್ಪಂಥಕ್ಕೆ ತೋರುವ ಶ್ರೀ ಚರಣ ।
ಪತಿತನಾದರೆ ಒಂದೇ ಸಾರಿ ಶ್ರೀನಾರಾಯಣನಿಗೆ ಮುಖ್ಯ- ।
ಪ್ರತಿಬಿಂಬ ಎಂತೆಂದೆನಲು ಪಾಲಿಸುವುದೀ ಚರಣ ।
ಸತತ ಈತನೆ ಮುಖ್ಯ ಗುರುವೆಂದು ತಿಳಿದು ಅನವ- ।
ರತದಲ್ಲಿ ಇದ್ದವಗೆ ವಜ್ರಪಂಜರ ಈ ಚರಣ ।
ಕ್ಷಿತಿಯೊಶಗೆ ಎನಗಿದು ಸುರಧೇನು ಈ ಚರಣ ।
ಪ್ರತಿ ಗಾಣೆನೊ ಎನಗಿದೆ ಇದೇ ಸುರತರು ಚರಣ ।
ಮತ್ತೊಂದೆನಗಿಲ್ಲ ಇದೇ ಚಿಂತಾಮಣಿ ಚರಣ ।
ಮಿತಿಯಿಲ್ಲದ ಜನ್ಮ ಬರಲಿ ಬಂದಿರಲಿ ಶಾ- ।
ಶ್ವತ ವಹುದೋ ಲೇಶಮಾತ್ರ ಅನುಮಾನವಿಲ್ಲ ವಿ- ।
ಹಿತವಾಗಿ ನಂಬಿಹೆ ಈ ಚರಣ ಈ ಚರಣ ।
ಅತಿಶಯದಿ ಜನ್ಮ ಜನ್ಮಾಂತರದಿಂದ ನಂಬೀದದೀ ಚರಣ ।
ಅರ್ತಿಯಿಂದಲಿ ತಂದೆತಾಯಿಯಂತೆ ಪೊರೆದು ಸ- ।
ದ್ಗತಿಯನಿತ್ತು ನಿಜಸುಖ ಉಣಿಸುವದೀ ಚರಣ ।
ಉತ್ತಮ ಶ್ಲೋಕನ ಉತ್ತಮನ ಮಾಡುವದೀ ಚರಣ ।
ಕತ್ತಲೆ ಹರಿಸಿ ಅರ್ತಿಯಿಂದಲಿ ಸುಜ್ಞಾನ ಭಕುತಿ- ।
ಇತ್ತು ಸುಖ ಬಡಿಸುವದೀ ಚರಣ ।
ಭೃತ್ಯರೆನಿಸಿ ಸತತ ಪಾಲಿಸುವದೀ ಚರಣ ।
ಚ್ಯುತ ದೂರ ನಮ್ಮ ವಿಜಯವಿಠ್ಠಲನ ರ- ।
ಜತ ಪೀಠದಲ್ಲಿ ಧ್ಯಾನ ಮಾಡುತಿಪ್ಪ, ಮಧ್ವ ಮುನಿಯ ಮುದ್ದು ಚರಣ ॥ ೫॥

**ಜತೆ**

ಚಿತ್ತದಲ್ಲೀ ಚರಣ ಭಜಿಸಿದ ಜೀವಿಗೆ ।
ನಿತ್ಯಾಯು ಉತ್ಸಹ ವಿಜಯವಿಠ್ಠಲ ಕೊಡುವ ॥ ೬ ॥

* * *

## ಸುಳಾದಿ – ೭೦

"ತ್ರಿಲೋಕ ಗುರುವಾದ ತ್ರಿನೇತ್ರ ವಂದ್ಯನೇ, ನೀನು ಹೇಗಿದ್ದರೂ ಸರಿ, ನಾನು ನಿನ್ನನ್ನು ಕೇಳದೇ ಬಿಡುವುದಿಲ್ಲ. ನೀನು ಕೋತಿಯಾಗಿ ಹಾರಾಡಿ, ಮಾತುಮಾತಿಗೆ

ಹಲ್ಲು ತೋರಿ ಅಂಜಿಸಿದರೂ ನಿನ್ನನ್ನು ಬಿಡೆನು. ಕೌಪೀನ ಹಾಕಿಕೊಂಡು ತಿರುಗಿ, ಮಾತುಗಾರಿಕೆಯಿಂದ ಯತಿಯಾದರೂ ನಿನ್ನನ್ನು ನಾನು ಬಿಡುವುದಿಲ್ಲ.

ನಾನೊಬ್ಬ ಶರಣನೇ ನಿನಗೆ ಭಾರವಾದೆನೇ? ನಿನ್ನನ್ನು ಬೇಸರಿಸಿ ನಾನೇನೂ ಕೇಳಿಲ್ಲ. ಈ ಸಂಸಾರದಿಂದ ಪಾರುಗಾಣಿಸು ಎಂದೆನಷ್ಟೇ. ಅದಿಲ್ಲದಿದ್ದರೆ ನಿನ್ನನ್ನು ದ್ವಿತೀಯೇಶನೆಂದು ನಾನೇಕೆ ಹೊಗಳಲಿ?

ನೀನು ಒಲಿದರೆ ಮಾತ್ರ ಹರಿಯು ಒಲಿಯುತ್ತಾನೆ. ಇಲ್ಲದಿದ್ದರಿಲ್ಲ. ನೀನಿದ್ದಲ್ಲಿ ಅವನಿರುತ್ತಾನೆ. ನಿನ್ನ ಮೇಲಿನ ಹರಿಯ ಕಾರುಣ್ಯ ಅಪಾರ, ಅನಂತ.

ಜ್ಞಾನೇಶ, ಭಕ್ತಿ ವಿರಕ್ತೇಶ, ಅಮರೇಶ, ಆನಂದಮೂರುತಿಯಾದ ಗುರುರಾಯ, ಪತಿತಪಾವನ ದೇವ ಪಾಣಿಗ್ರಹಣ ಮಾಡು ಎಂದು ಬಿನ್ನೈಪೆ.

ಪರಮಾತ್ಮನ ನಿಜದಾಸನಾದ ಬಲವಂತ, ಗುಣವಂತ, ಜ್ಞಾನವಂತ, ಅನಂತ ಜನುಮಕ್ಕೆ ನೀನೇ ಗುರು ಎಂಬ ಜ್ಞಾನವನ್ನು ದಯಪಾಲಿಸು.

**॥ ರಾಗ–ಸಾವೇರಿ–ಧ್ರುವ ತಾಳ ॥**

ಕೋತಿಯಾದರೆ ಬಿಡೆನೊ ಬಲುಪರಿ ।
ಭೂತಳದೊಳು ಪಾರ್ಯಾಡಲು ಬಿಡೆನೊ ।
ಖ್ಯಾತಿ ತೊರೆದು ಕಚ್ಚುಟ ಹಾಕಲು ಬಿಡೆನೊ ।
ಚಾತುರ ಬಿಟ್ಟರೆ ಬಿಡೆನೊ ನಾ ಬಿಡೆನೊ ।
ಭೀತಿ ಬೀರಲು ಬಿಡೆನೊ ಮಾತು– ।
ಮಾತಿಗೆ ಹಲ್ಲು ತೋರಲು ಬಿಡೆನೊ ।
ಗಾತುರ ಗಗನಕ್ಕೆ ಬೆಳೆಸಲು ಬಿಡೆನೊ ।
ಕೋತಿ ಸೇವಿಪಲು ಬಿಡೆನೊ ।
ಆತುರದಲಿ ವನದಿಲಂಘಿಸಿದರೆ ಬಿಡೆ ।
ಆ ತರುಗಳ ಕಿತ್ತಲು ಬಿಡೆನೊ ।
ವೀತಿಹೋತ್ರನ ಬಾಲದಲ್ಲಿ ಇಟ್ಟರೆ ಬಿಡೆ ।
ಜಾತಿ ಧರ್ಮವ ಬಿಟ್ಟರೆ ಬಿಡೆನೊ ।
ಈ ತೆರದಲಿ ನೀನು ಇದ್ದರೇನಯ್ಯಾ ಬೆ ।
ನ್ನಾತು ಕೇಳುವದು ನಾ ಬಿಡಬಲ್ಲಿನೇ ।
ತಾತಾ ಇನ್ನಿದರಿಂದ ಆವದಾದರು ಬರಲಿ ।
ದಾತಾ ಮೆತ್ತಿದರಿಂದ ಏನಾದರಾಗಲಿ ।
ಸೋತು ಹಿಂದಗದು ಪೋದರೆ ನಿನ್ನ ಪದದಾಣೆ ।
ಯಾತಕ್ಕೆ ಸಂಶಯವೊ ಬಿಡೆನೊ ಬಿಡೆನೊ ಖ ।
ದ್ಯೋತಮಂಡಲ ಪೋಗಲು ಬಿಡೆನೊ ।
ಮಾತು ಪೊಳ್ಳಾದರ ನೂರೊಂದು ಕುಲ ಎನ್ನ ।
ಗೋತ್ರದವರಿಗೆ ಗತಿ ಎಲ್ಲಿದೋ ।

ವಾತನ್ನಮಗ ವಾತ ಆತನ್ನ ರೂಪವ ।
ಗಾತುರದಲ್ಲಿ ನಿನ್ನೊಳಗೆ ತೋರೋ ।
ಜ್യೋತಿರ್ಮಯ ರೂಪ ವಿಜಯವಿಠ್ಠಲರೇಯನ ।
ದೂತ ದುರ್ಜಹಾರಿ ದುಃಖನಿವಾರಿ ॥ ೧ ॥

### ಮಟ್ಟ ತಾಳ

ಭೂತಳದೊಳಗೆ ಇದ್ದ ಭೂಮಿಸುತ್ತಲು ಬಿಡೆ ।
ಭೀತಿನಾಮವನ್ನು ಇಟ್ಟುಕೊಂಡರೆ ಬಿಡೆ ।
ನೀ ತಿರಿದುಂಡರೆ ಬಿಡೆನೊ ಬಿಡೆನೊ ಆ– ।
ರಾತಿಗಳಿಗೆ ಸೋತು ಅಡವಿ ಸೇರಲು ಬಿಡೆನೊ ।
ಸೋತುಮತನ ಬಿಟ್ಟು ಅಡಿಗಿ ಮಾಡಲು ಬಿಡೆ ।
ಘಾತಕ ನೀನಾಗಿ ಕುಲವ ಕೊಂದರೆ ಬಿಡೆ ।
ಮಾತುಗಾರಿಕೆಯಿಂದ ಯತಿಯಾದರೆ ಬಿಡೆನೊ ।
ಪ್ರೀತ ಸಲಹೊ ಎನ್ನ ಸಾಕದಿದ್ದರೆ ನಿನ್ನ ।
ಪೂತರೆ ದ್ವಿತೀಯೇಶನೆಂದು ಪೊಗಳಲ್ಯಾಕೆ ।
ನಾಥನಲ್ಲಿ ನಿನ್ನ ಮಂತ್ರಿತನವೇನೊ ।
ಪೋತಭಾವ ನಮ್ಮ ವಿಜಯವಿಠ್ಠಲ ರೇಯನ ।
ಆತುಮದೊಳಗಿಟ್ಟ ಭಾರತಿ ರಮಣಾ ॥ ೨ ॥

### ತ್ರಿವಿಡಿ ತಾಳ

ಭಾರವೇ ನಾನೊಬ್ಬ ಶರಣಾ ನಿನಗಲ್ಲವೇ ।
ಭಾರಿ ಭಾರಿಗೆ ನಿನ್ನ ಅಹಿಕಸೌಖ್ಯಾ ।
ಮೀರದ ಕೊಡು ಎಂದು ಬೇಡಿ ಬ್ಯಾಸರಿಸು ವಿ– ।
ಸ್ತಾರವಾಗಿ ಗುರುವೆ ಕಾಡಿದೇನೇ ।
ಧಾರುಣಿಯೊಳು ಪುಟ್ಟಿ ಪಾರುಗಾಣದ ಸಂ– ।
ಸಾರ ಹೇಯವೆಂದು ಕೇಳಿ ನಿನಗೆ ।
ದೂರ್ದಿದೆನೊ ಇದು ದೈನ್ಯದಿಂದಲಿ ವಿ – ।
ಚಾರಿಸಿದರೊಳಿತೆ ಇಲ್ಲದಿದ್ದರೆ ಲೇಸೆ ।
ಸಾರಿ ಸಾರಿಗೆ ನಿನ್ನ ಸೌಭಾಗ್ಯ ಚರಣವ ।
ತೋರಿಸಿ ಧನ್ಯನ್ನ ಮಾಡೆಂದೆನೊ ।
ಕಾರುಣ್ಯದಲಿ ಕೈಟಭಾರಿ ಪ್ರಿಯನೆ ।
ಆರನ್ನ ಕಾಣೆನೊ ನಿನ್ನ ವಿನಾ ।
ಕೀರುತಿ ಅಪಕೀರ್ತಿ ನಿನ್ನದಯ್ಯಾ ।
ವಾರಣಾವರ ವಂದ್ಯ ವಿಜಯವಿಠ್ಠಲ ರೇಯನ ।
ಸೇರುವ ಪರಿ ಮಾಡೋ ತಾರತಮ್ಯ ಭಾವದಲಿ ॥ ೩ ॥

**ಅಟ್ಟ ತಾಳ**

ನೀನು ಒಲಿಯೇ ಹರಿ ತಾನೆ ಒಲಿವನಯ್ಯಾ ।
ನೀನು ಮುನಿದೆಡೆ ಹರಿ ತಾನೆ ಮುನಿವನು ।
ಏನೆಂಬೆ ನಿನ್ನ ಮೇಲಣ ಹರಿ ಕಾರುಣ್ಯ ।
ನೀನಲ್ಲದಿಲ್ಲದ ಸ್ನಾನದಿ ತಾನಿಲ್ಲಾ ।
ಪ್ರಾಣೇಶ ನಮೋ ನಮೋ ನಿನ್ನ ಪಾದಾಬ್ಜಕೆ ।
ವಾನರೇಶ ಸುಗ್ರೀವ ವಾಲಿ ಸಾಕ್ಷಿ ।
ಜ್ಞಾನೇಶ ಭಕ್ತಿ ವಿರಕ್ತೇಶ ಅಮರೇಶ ।
ಆನಂದ ಆನಂದ ಮೂರುತಿ ಗುರುರಾಯ ।
ಪಾಣಿಗ್ರಹಣ ಮಾಡು ಪತಿತಪಾವನ ದೇವ ।
ಪ್ರಾಣೇಂದ್ರಿಯಗಳು ದೇಹ ಚೇತನ ಚಿತ್ತವ ।
ಧ್ಯಾನ ಮಾಡಲಿ ಸರ್ವ ನಿನ್ನಾಧೀನವೆಂದು ।
ನೀನಿರೆಲಾವಾಗ ಅನ್ಯ ಜನರಿಗೆ ಮತ್ತಾನು ।
ಬಿನ್ನೈಪೇನೆ ದೇಹತ್ಯಾಗವಾಗಿ
ಶ್ರೀನಾಥ ವಿಜಯವಿಠ್ಠಲ ರೇಯನ ಪಾದ ।
ರೇಣು ಧರಿಸುವ ಸರ್ವರುದ್ಧಾರೀ ॥ ೪ ॥

**ಆದಿ ತಾಳ**

ಎಲ್ಲ ಕಾಲದಲ್ಲಿ ನಿನ್ನಲ್ಲಿ ಭಕ್ತಿ ಇಪ್ಪ ।
ಸಲ್ಲಲಿತ ಮನುಜರ ಪದಪಾಂಸು ಶಿರ- ।
ದಲ್ಲಿ ಧರಿಸುವಂತೆ ಸಂತತ ಮತಿ ಇತ್ತು ।
ಬಲ್ಲಿದ ಕಾಮ ಬಿಡಿಸು ಬಲವಂತ ಗುಣವಂತ ।
ಬಲ್ಲವ ಭವದೂರ ನೀನೇ ಗತಿಯೋ ಜಗ- ।
ದೊಲ್ಲಭ ಮುಂದಣ ವಾಣೀಶ ಸುಖಪೂರ್ಣ ।
ಅಲ್ಲದಿದ್ದರೆ ಎನ್ನ ಕಾವ ಕರುಣಿಯ ಕಾಣೆ ।
ಮಲ್ಲಮರ್ದನ ನಮ್ಮ ವಿಜಯವಿಠ್ಠಲರೇಯನ ।
ನಿಲ್ಲಿಸಿ ಮನದಲ್ಲಿ ಪ್ರತಿಕೂಲವಾಗದೆ ॥ ೫ ॥

**ಜತೆ**

ಅನಂತ ಜನುಮಕ್ಕೆ ನೀನೆ ಗುರು ಎಂಬ ।
ಜ್ಞಾನವೇ ಕೊಡು ಜೀಯಾ ವಿಜಯವಿಠ್ಠಲನ ದಾಸಾ ॥ ೬ ॥

* * *

# ಶ್ರೀಭೀಮಾವತಾರ



## ಸುಳಾದಿ - ೭೧

**ಪೂರ್ಣಕಾಮನಾದ, ಸುರಸಾರ್ವಭೌಮನಾದ, ಅಸೀಮ ಸದ್ಗುಣ ಮಹೋದಧಿಯಾದ, ಮೂಲ ಗುರು, ಜಗದ್ಗುರು, ವಿಶ್ವಗುರುವಾದ. ಅರಿಭಯಂಕರನಾದ ಭೀಮಸೇನನ, ಭೀಮಪರಾಕ್ರಮದ ಶಬ್ದಚಿತ್ರವನ್ನು ಈ ಸುಳಾದಿ ತೋರಿಸುತ್ತದೆ.**

**॥ ರಾಗ ನಾಟ - ಧ್ರುವ ತಾಳ ॥**

ಭೀಮಸೇನನೆ ಪೂರ್ಣಕಾಮನೆ ಸುರಸಾರ್ವ-
ಭೌಮನೆ ಸತತ ಭೂಮಿಭಾರವ ಹರಣಾ ।
ಸೀಮಾರಹಿತ ಗುಣ ಮಹೋದಧಿಯೇ ನಿ- ।
ಷ್ಕಾಮ ಫಲವನೀವ ಭಾವಿ ಬೊಮ್ಮ ।
ಭೀಮಾವತಾರ ಸ್ಮೇರಾನನ ಪ- ।
ರಮ ರಾಜೇಶ್ವರ ರಣರಂಗ ಧೀರ ।
ಕೋಮಲ ಕಾಯ ಮೂಲಾವತಾರ ಭಿನ್ನ ।
ಸೋಮ ಕುಲೋದುಭವ ಪಾಂಡವ ಕುವರ ।
ರೋಮ ರೋಮಾನಂತ ಸಿಂಹ ಸತ್ವ ಧಿಕ ಉ- ।
ತ್ತಮಾಂಗ ಮರಕತ ಮಕುಟ ಧಾರಾ ।
ಕಾಮಿನಿಗೆ ಸೌಗಂಧಿಕ ಕುಸುಮವನಿತ್ತ ।
ಸಾಮವಿಖ್ಯಾತ ರಿಪು ಸಾಮಜ ಬಲವ ।
ಯೋಮಕ್ಕೆ ತೆಗೆದಿಟ್ಟ ಎಲ್ಲರೊಳಗೆ ಧಿಟ್ಟ ।
ಶ್ರೀ ಮರುತನೆ ದ್ವಾಪರದ ಚರಿತ ।

ತಾಮಸ ಖಳರ ಗದೆಯಿಂದಪ್ಪಳಿಸಿ ।
ತಾಮಸ ಲೋಕಕ್ಕೆ ಕೆಡಹುವ ವೀರ್ಯಾ ।
ಕುಮತಿ ಕೀಚಕ ಕಿರ್ಮೀರ ಬಕ ಹಿಡಿಂ– ।
ಬ ಮಣಿಮ ಮಾಗಧ ವೈರಿ ।
ಘಾಮನೋವಲ್ಲಭ ವಿಜಯವಿಠ್ಠಲ ಕೃಷ್ಣನ ।
ನಾಮವ ನೆನಿಪ ಪೂರ್ಣಾನಂದ ಮಹಿಮಾ ॥ ೧ ॥

### ಮಟ್ಟ ತಾಳ

ಗುರುವೆ ಮೂಲ ಗುರುವೆ, ಗುರುವೆ ಪರಮ ಗುರುವೆ ।
ಗುರುವೆ ಜಗದ್ಗುರುವೆ ಗುರು ವಿಶ್ವ ಗುರುವೆ ।
ಗುರುವೆ ನಿತ್ಯ ಗುರುವೆ ಗುರುವೆ ಲಕ್ಷಣಗುರುವೆ ।
ಗುರುವೆ ಶಾಂತ ಗುರುವೆ ಗುರುವೆ ಎನ್ನ ಗುರುವೆ ।
ಗುರುಗಳಿಗೆ ಗುರುವೆ ಗುರುರಾಜವರ್ಯಾ ।
ಗುರುಕುಲೋತ್ತುಂಗ ಗುರು ಶಿರೋಮಣಿ ।
ಗುರುದಾತ ನಮ್ಮ ವಿಜಯವಿಠ್ಠಲನ್ನ ।
ಗುರು ಲಘುಮೂರ್ತಿಯ ಗುರು ಎಣಿಪ ಗುರುವೆ ॥ ೨ ॥

### ತ್ರಿವಿಡಿ ತಾಳ

ವಿಷದ ಲಡ್ಡಿಗಿ ಸವಿದು ದಕ್ಕಿಸಿಕೊಂಡ ಮಹಬಲ ಎನ್ನ– ।
ವಶವೇ ಪೊಗಳಲು ನಿನ್ನ ಅಸಮಶೌರ್ಯ ।
ವಸುಧಿಯೊಳಗೆ ನಿನ್ನ ಪೇಸರೇ ಅನ್ಯರಿಗೆ ಕ– ।
ರ್ಕಶವಾಗಿದೆ ನೋಡ ಅಸಂಗ ದೈವಾ ।
ಕುಶಲ ಮತಿಯಲಿ ಅರ್ಚಿಸಿದ ಜನಕೆ ಪೀ– ।
ಯುಷ ಪಾನವಧಿಕ ಸಂತಸ ವಾಗೋದು ।
ಬೆಸಸ ಬಲ್ಲೆನೆ ರಕ್ಕಸರೆದೆ ಶೂಲನೇ ।
ಹಸನಾಗಿ ಎನ್ನ ಪಾಲಿಪ ಬೇಕೋ ಜೀವೇಶ ।
ಅಸುರಧ್ವಂಸಿ ನಮ್ಮ ವಿಜಯವಿಠ್ಠಲನಂಘ್ರಿ ।
ಎಸಳು ಬಿಡದೆ ನೆನೆಯುವ ವೃಕೋದರಾ ॥ ೩ ।

### ಅಟ್ಟ ತಾಳ

ರೋಷದಿಂದಲಿ ದುಃಶ್ಯಾಸನ್ನ ಸಂಗಡ ।
ನೀ ಸಮರದಿ ವೀರ ವೇಷವ ಧರಿಸಿ ದು– ।
ಮೋಷದ ಗುಣ ಕುಲನಾಶಕ ಕರ್ಮಿಯಾ ।

ಬೀಸಿ ಗದೆಯಿಂದ ಲೇಸಾಗಿ ಹೊಡೆದಪ್ಪ– ।
ಳೀಸಿ ನೆಲಕೆ ಬೀಳಲೀಸಿದ ಈ ಗವನ ಭಂ– ।
ಗಿಸಿ ಮುಂದುರವಣಿಸಿ ಅಂದಿನ ಮಾತೆ– ।
ಣಿಸಿ ಕೋಪಗಡಿ ಸಂತೋಷದ ಕೇಳಿಕೆ ।
ಈ ಸಮಸ್ತರು ಒಪ್ಪಿಸಿಕೊಟ್ಟರು ನಿನ್ನ ।
ಬೀಸರಕ್ಕೆ ಒಬ್ಬ ಆಶೆಯಾಗುವನಲ್ಲ ।
ದೇಶವೆಲ್ಲಿದೊ ರಾಣಿವಾಸವೆಲ್ಲಿದೊ ಬಹು ।
ಕೋಶವೆಲ್ಲಿದೊ ವ್ಯಾಘೋಷವೆಲ್ಲಿದೊ ಇಂದು ।
ದ್ವೇಷಿಗ ಮಾರಿಗೆ ಗ್ರಾಸವಾಗು ಪೋಗು ।
ಈ ಸಮಯದಲ್ಲಿ ಬಿಡಿಸುವ ರಾರೆಂತೊ ।
ವಾಸುದೇವ ಕೃಷ್ಣ ವಿಜಯವಿಠ್ಠಲ ನಂಘ್ರಿ ।
ದಾಸನು ಅವನ ಆಭಾಸ ಮಾಡುತಲಿಪ್ಪ ॥ ೪ ॥

**ಆದಿ ತಾಳ**

ಪದತಳದಿಂದ ವರಿಸಿ ಕದನದಲ್ಲಿ ವೈರಿಯ ।
ಬದಿ ಬಗಲನು ತಿವಿದು ವದನ ದೊಳಗೆ ಉಗಳಿ ।
ರದನವ ಮುರಿದಿಟ್ಟು ಕುಟ್ಟು ಮ್ಯಾಲೊದದು ಅಟ್ಟಹಾಸದಲಿ ।
ಎದಿಯ ಮೇಲೆ ಕುಣಿದು ಉದರವನ್ನೇ ಬಗೆದು ।
ಏಂದಡು ಕರಳು ತೆಗೆದು ಭೂಮಿಗೆ ಈಡಾ– ।
ಡಿದನು ಅರ್ಥಿಯಲ್ಲಿ ಸುದತೆ ನೋಡುತಿರೆ ।
ಅದು ಭುತ ಚರಿತ ಅವನ ರುಧಿರವ ಪಿಡಿದು ಸು– ।
ರಿದ ಸರ್ವರು ನೋಡಲು ಸದಮಲ ದೇವಿಯ ।
ಹೃದಯ ತಾಪವೆ ಕಳೆದು ಪದೋಪದಿಗಾನಂದ ।
ಉದಧಿಯೊಳಗೆ ಸೊಸೆ ಎದಿರಾರೀತಗೆ ।
ತ್ರಿದಶರೊಳಗೆ ಇಲ್ಲ ಕದನ ಮಧ್ಯದಲ್ಲಿ ಮೌ– ।
ನದಲ್ಲಿ ಎಲ್ಲರೂ ಇರೆ ಹೃದಯನಿರ್ಮಳ ನಮ್ಮ ವಿಜಯವಿಠ್ಠಲಗರ್ಪಿಸಿ ।
ಸಿದ ತನ್ನ ಸಹಸದ ಮುದದಿಂದ ನಲಿಯುತಾ ॥ ೫ ॥

**ಜತೆ**

ಅರಿ ಭಯಂಕರ ಭೀಮ ವಿಜಯವಿಠ್ಠಲ ।
ನರಹರಿ ಮನ ಮೆಚ್ಚಿ ನಡದಾ ಭೀಮಾವತಾರಾ ॥ ೬ ॥

* * *

## ಶ್ರೀಮಧ್ವಾವತಾರ ಸ್ತೋತ್ರ



### ಸುಳಾದಿ – ೭೨

ಭಾಗವತ ಮಣಿ, ಆಗಮ ವಿಖ್ಯಾತ, ಯೋಗಿಗಳರಸ, ರಾಘವನ ಕಿಂಕರ, ಭಾವಿ ಬ್ರಹ್ಮನಾದ ಪವನನಾಮಕ ಶ್ರೀ ಗುರುವಿನಂಘ್ರಿಕಮಲವನ್ನು ಯೋಗದಿಂದ ತಿಳಿದು ಬಾಗಿ ನಮೋ ಎಂಬುವನೇ ಧನ್ಯ.

ಪರಮಾತ್ಮನಿಗೂ ಜೀವನಿಗೂ ಅಭೇದವೆಂದು ಪೇಳುವವನು, ಭೃತ್ಯನಾಗಿ ಒಡೆಯನನ್ನು ಹತ್ಯೆ ಮಾಡಿದಂತೆ. ಪಾಷಂಡ ಮತವನ್ನು ಖಂಡಿಸಿ ತತ್ತ್ವವನ್ನು ಸಾರುತ್ತ ವಿಷ್ಣುತತ್ತ್ವವಿನಿರ್ಣಯದಲ್ಲಿ ಶ್ರೀಮದಾಚಾರ್ಯರು "ಚಾಭೇದೇ ಕಶ್ಚಿದಾಗಮಃ ಸಂತಿ ಚ ಭೇದೇ ಸರ್ವಾಗಮಾಃ" ಎಂದು ಪ್ರತಿಜ್ಞೆಮಾಡಿ ಹೃದಯಂಗಮವಾದ ರೀತಿಯಲ್ಲಿ ಜೀವೇಶ್ವರರಿಗೆ ಭೇದವೇನೇ ಸರ್ವ ಶ್ರುತಿ ಸ್ಮೃತಿಗಳಿಗೆ ತಾತ್ಪರ್ಯವೆಂದು ಸಯುಕ್ತಿಕವಾಗಿ ನಿರ್ಣಯಿಸಿ ಡಂಗುರಂಹೊಯ್ಸಿದ್ದಾರೆ. ಆನಂದತೀರ್ಥರ ಮತವೇ ಪರಮಾನಂದದಾಯಕವಾದದ್ದು.

ಗುರುಮುಖವಿಲ್ಲದೇ ಜ್ಞಾನಮಾರ್ಗ ದೊರೆಯಲಾರದು. ಕಾರಣ ಮರುದಂಶ ಯತಿವರರನ್ನು ಅನುಸರಿಸಿ, ದುರುಳ ಮಾರ್ಗವನ್ನು ಬಿಟ್ಟು, ಸುಜನರಾದವರು ವೈಷ್ಣವರ ಚರಣಕ್ಕೆ ಮೊರೆ ಹೋಗಬೇಕು. ಅಂದರೇನೇ ಪರಮಾತ್ಮನ ಶಾಶ್ವತವಾದ ಕರುಣೆ ದೊರೆಯುತ್ತದೆ.

॥ ರಾಗ ಕಾಂಬೋಧಿ – ಧ್ರುವ ತಾಳ ॥

ಶ್ರೀಗುರು ವಿನಂಘ್ರಿಯ ಯೋಗದಿಂದಲಿ ತಿಳಿದು ।
ಬಾಗಿ ನಮೋ ಎಂದು ಬಾಗಿಸುವೆ ।
ಭಾಗವತರ ಮಣಿ ಆಗಮ ವಿಖ್ಯಾತ ।

ನಾಗಾರಿ ನಾಗ ಪನ್ನಗಾಭರಣಾದಿಗಳಿಗೆ ಜ್ಞಾನ– ।
ವಾಗಲಿಸಿದ ತತ್ವಸಾಗರ ಶುಭಚಂದ್ರ ।
ಯೋಗಿಗಳರಸ ರಾಗದ್ವೇಷದೂರ ।
ರಾಘವನ ಕಿಂಕರ ಮಾಗಧನ ಸಂಹಾರ ।
ಬಾಗೀರಥಿ ಪಾರ ಸಾಗರಶಯ ಮಹಾ– ।
ಭಾಗ ವಿಜಯವಿಠ್ಠಲನ್ನ ಭೋಗದಲಿಟ್ಟು ಭಾವಿ– ।
ವಾಗೀಶನು ಪವನಾ ॥ ೧ ॥

**ಮಟ್ಟ ತಾಳ**

ಕುಸುಮವ ತರಪೋಗಿ ಅಸಮಸಹಸ ಭೀಮ ।
ಅಸುರ ಮಣಿಮನ ಮರ್ದಿಸ ಲಾಹಗೆಯಲ್ಲಿ ।
ವಸುಧೆಯೊಳಗೆ ಜನಿಸಿ ಸಂಕರನೆಂದು ।
ಪೆಸರಾದ ದುರುಳನು ಕುಶಲಮತಿಗಳೆಲ್ಲ ।
ಹಸಗೆಡಿಸಿದನಂದೂ ವಸುಧಿಯೊಳಗೆ ಬಂದೂ ।
ಪ್ರಿ ಷಾಹನೆ ನಾಮಾ ವಿಜಯವಿಠ್ಠಲನ್ನ ।
ಬಿಸಿಜ ಪದಕೆ ಬಲು ದ್ವಿಷಗನು ತಾನಾಗೀ ॥ ೨ ॥

**ರೂಪಕ ತಾಳ**

ಮಿಥ್ಯಾ ಮಾಯಿ ದುರ ಮಿಥ್ಯಾ ಶಾಸ್ತ್ರವ ಮಾಡಿ ।
ಸತ್ಯಾಚಾರವ ಕಳೆದ ಸತ್ಯದಲ್ಲೀ ।
ನಿತ್ಯ ಪರಮಾತ್ಮಗೆ ನಿತ್ಯದುಃಖದವನೆ ।
ಅತ್ಯಂತ ಅಭೇದಾರ್ಥ ಪೇಳಲು ।
ಭೃತ್ಯಾ ತನ್ನೊಡಿಯನ ಹತ್ಯಾ ಮಾಡಿದಂತೆ ।
ಮೃತ್ಯುವಿಗೆ ಎಡೆಯಾಗಿ ನಿತ್ಯ ಬಾಳುವನು ।
ಸತ್ಯ ಧರ್ಮ ನಾಮ ವಿಜಯವಿಠ್ಠಲನಾ ।
ಸೌತ್ಯ ಮಾಡದಲೆ ಅಕೃತ್ಯ ನಾಗುವನು ॥ ೩ ॥

**ಝಂಪೆ ತಾಳ**

ಪಾಷಂಡಿ ಸಂಕರನು ಏಕಮೇವನು ತಾನೇ ।
ಲೋಕಕ್ಕೆ ಸೋಹಂ ಎಂದು ಸಂಚರಿಸೆ ।
ಪಾಕಶಾಸನಾದಿಗೆ ಕೊಡುವ ಆಹುತಿ ।
ಹಾಕಿ ತಾನೆ ಮರುಳಿ ಭುಂಜಿಸಲೂ ।
ನಾಕಾದಿ ಜನರು ಬಲು ವ್ಯಾಕುಲದಲಿ ಪೋಗಿ ।

ಆ ಕಮಲಾಸನಗೆ ಬಿನ್ನೈಸಲೂ ।
ವಾಕು ಕೇಳುತಲೆ ಶ್ರೀ ವೈಕುಂಠ ವಾಸಗೆ ।
ಲೋಕೇಶ ವಿವರಿಸಲು ಕರುಣದಿಂದಾ– ।
ನೇಕ ನಾಮ ನಮ್ಮ ವಿಜಯವಿಠ್ಠಲನು ಕೃ– ।
ಪಾಕರನಾಗಿ ಪವನಗೆ ನಿರೂಪಿಸಿದಾ ॥ ೪ ॥

### ತ್ರಿವಿಡಿ ತಾಳ

ವಸುಧಿಯೊಳಗೆ ಜನಿಸಿ ವಾಸುದೇವನೆಂಬ ।
ಪೆಸರಿಲಿ ಮೆರೆದು ರಕ್ಕಸ ಸಂಕರನ ಮುರಿದು ।
ದಶ ಪ್ರಕರಣಸೂತ್ರ ವ್ಯಾಖ್ಯಾನ ದಶ ಉಪ– ।
ನಿಷದ್ಭಾಷ್ಯ ಗೀತಾತ್ರಯ ತಾತ್ಪರ್ಯ ।
ಎಸೆವ ಯಮಕ ಭಾರತ ಸದಾಚಾರಸ್ಮೃತಿ ದ್ವಾ– ।
ದಶಸ್ತೋತ್ರ ಕೃಷ್ಣಾಮೃತ ಮಹಾರ್ನವ ಮೇಣು ।
ಅಸಮ ತಂತ್ರಸಾರ ಜಯಂತಿ ನಿರ್ಣಯ ।
ಹಸನಾಗಿ ಯತಿಕಲ್ಪ ನರಸಿಂಹಸ್ತುತಿ ಇನಿತು ।
ರಸಪೂರಿತವಾಗಿ ಪಸರಿಸಿದವು ತ್ರಿ– ।
ದಶ ಮ್ಯಾಲೆ ಏಳು ರಂಜಿಸುವ ಸುಧಾಕಥಾ ।
ಪ್ರಸರವಾಗರದು ತಾಮಸಜ್ಞಾನ ಪರಿದು ಕಿ–
ಮಸೆನೆ ನಾಮ ವಿಜಯವಿಠ್ಠಲನ್ನ ನೆನದೂ ॥ ೫ ॥

### ಅಟ್ಟ ತಾಳ

ದುರುಳ ಸಂಕರನ ಉತ್ತರವನ್ನು ಖಂಡಿಸಿ ।
ಪರಮಾತ್ಮ ಅಖಿಳ ದೇವರಿಗೆ ಭಿನ್ನವೆಂದು ।
ಬಿರಿದು ಡಂಗುರ ಹೊಯಿಸಿ ಧರೆಯೊಳು ಮೆರೆದು ಶ್ರೀ– ।
ಹರಿಯಲ್ಲ ದನ್ಯತ್ರ ಪರದೈವ ವಿಲ್ಲೆಂದು ।
ದರುಶನ ಗ್ರಂಥ ಶಿಷ್ಯರಿಗೆ ಬೋಧಿಸಿ ವೀರ– ।
ವರ ವೈಷ್ಣವರನ ಉದ್ಧರಿಸಿದ ಭಾರತಿ– ।
ಯರಸ ಜಗದ್ಗುರು ಧರೆಯರಸ ಗದಾ– ।
ಧರ ವಿಜಯವಿಠ್ಠಲನ್ನ ಚರಣ ವಿನುತನೆ ॥ ೬ ॥

### ಆದಿ ತಾಳ

ಗುರು ಮುಖವಿಲ್ಲದೆಲೆ ದೊರಿಯದು ಜ್ಞಾನಮಾರ್ಗ ।
ಅರಿದು ಸುಜನರೆಲ್ಲ ಮರುದಂಶ ಯತಿವರನ ।

ಮರಿಯದಲನು ಸರಿಸಿ ದುರುಳ ಮಾರ್ಗವ ತೊರೆದು ।
ಸುರಳಿತರಾದ ವೈಷ್ಣವರ ಚರಣ ಮೊರೆಯೋಗು ।
ಕರುಣಿಸುವ ಮಹಧನ ವಿಜಯವಿಠ್ಠಲ ಬಿಡದೆ ।
ಸರಿಯಲ್ಲ ಮಧ್ವಮತ ಶರಧಿಯಲ್ಲಿದ್ದವನಿಗೆ ॥ ೭ ॥

ಜತೆ

ಅದ್ವೈತ ವನದಾವಾ ಮಧ್ವರಾಯರ ಶ್ರೀಪಾ- ।
ದದ್ವಯ ನೆನೆದು ವಿಜಯವಿಠ್ಠಲನ್ನ ಸೇರೋ ॥ ೮ ॥

* * *

## ಸುಳಾದಿ – ೭೩

ದುಷ್ಕರ್ಮಿಗಳಿಗೆ ನಿತ್ಯತಮವಾಗಬೇಕೆಂದು ವೇದವ್ಯಾಸದೇವರು ತಾಮಸ ಪುರಾಣಗಳನ್ನು ರಚಿಸಿದರು. ಅವು ದುರ್ಮತಿಗಳಿಗೆ ರುಚಿಸಿದವು. ಧರ್ಮಸಾಧನವೆಂದು ತಿಳಿದು ಮಾಯಿಮತವನ್ನು ಅನುಸರಿಸಿದರೆ ಯಮನು ಅಂಥವರ ಚರ್ಮವನ್ನು ಸುಲಿಸುತ್ತಾನೆ.

ಮಣಿಮಂತನೆಂಬ ದೈತ್ಯನು ಸಂಕರನೆಂಬ ಹೆಸರಿನಿಂದ ಕಲಿಯುಗದಲ್ಲಿ ಅವತರಿಸಿದನು. ತಾನೇ ಯತಿಯಾಗಿ ಮೋಹಕಶಾಸ್ತ್ರವನ್ನು ಬೀರಿದನು. ಕುಲವೆಲ್ಲ ಜಾತಿ ಸಂಕರವಾಯಿತು. ಸ್ವಧರ್ಮವಳಿದಾಗ ಸುರರಿಗೂ ಹವಿಸ್ಸು ಇಲ್ಲದಾಯಿತು. ಆಗವರು ಕಮಲಾಸನನಲ್ಲಿ ಮೊರೆಯಿಟ್ಟರು. ಬೊಮ್ಮನು ಶ್ರೀಹರಿಯಲ್ಲಿ ಬಿನ್ನೈಸಿದನು. ಕಲಿಯುಗದಲ್ಲಿ ಅವತರಿಸಿ ಸಜ್ಜನರಿಗೆ ಸನ್ಮಾರ್ಗದರ್ಶನ ಮಾಡುವಂತೆ ಶ್ರೀಹರಿಯು ಪವನನಿಗೆ ಆಜ್ಞಾಪಿಸಿದನು.

ಶ್ರೀಶನ ಆಜ್ಞೆಯನ್ನು ಪಡೆದು ಪವನನು ವಾಸುದೇವನಾಗಿ ನಡುಮನೆ ಬ್ರಾಹ್ಮಣನಲ್ಲಿ ಅವತರಿಸಿದನು. ಶ್ರೀ ಅಚ್ಯುತಪ್ರೇಕ್ಷರಿಂದ ಚತುರಾಶ್ರಮವನ್ನು ಪಡೆದು ಶ್ರೀ ಪೂರ್ಣಪ್ರಜ್ಞ, ಮಧ್ವಮುನಿಯೆಂದನಿಸಿದನು. ಶುದ್ಧ ತತ್ತ್ವವನ್ನು ಸಾರಿ ಶಿಷ್ಯರಿಗೆ ವೇದಸುಧೆಯನ್ನುಣಿಸಿ ಮೋದಬಡಿಸಿದನು.

"ಮಾಯಿಯ ಮನೆ ಮುಂದೆ ಮದಕರಿಯಾಗಿದ್ದು । ಆಯುಷ್ಯಾಭಿವೃದ್ಧಿ ಸುಖಬಡುವದಕ್ಕಿಂತ । ನಾಯಿಯ ಮರಿಯಾಗಿ ಮಧ್ವಮತದವರ । ಕಾಯಿದು ಮನೆ ಮುಂದೆ ಇಪ್ಪ ಕ್ಷಣವೇ ಲೇಸು ।" ಎಂದು ದಾಸರಾಯರು ಹೇಳುತ್ತ "ಪ್ರಾಣಗತಿ ಬಂದರೂ ಮಧ್ವಮತ ಬಿಡದಿರಿ, ಇದೇ ಪರಮಾತ್ಮನಿಗೆ ಬಲು ಪ್ರೀತಿ" ಎನ್ನುತ್ತಾರೆ. ಇದೇ ಈ ಸುಳಾದಿಯ ಸಾರ.

ಆ ಕಮಲಾಸನಗೆ ಬಿನ್ನೈಸಲೂ ।
ವಾಕು ಕೇಳುತಲೆ ಶ್ರೀ ವೈಕುಂಠ ವಾಸಗೆ ।
ಲೋಕೇಶ ವಿವರಿಸಲು ಕರುಣದಿಂದಾ- ।
ನೇಕ ನಾಮ ನಮ್ಮ ವಿಜಯವಿಠ್ಠಲನು ಕೃ- ।
ಪಾಕರನಾಗಿ ಪವನಗೆ ನಿರೂಪಿಸಿದಾ ॥ ೪ ॥

**ತ್ರಿವಿಡಿ ತಾಳ**

ವಸುಧಿಯೊಳಗೆ ಜನಿಸಿ ವಾಸುದೇವನೆಂಬ ।
ಪೆಸರಿಲಿ ಮೆರೆದು ರಕ್ಕಸ ಸಂಕರನ ಮುರಿದು ।
ದಶ ಪ್ರಕರಣಸೂತ್ರ ವ್ಯಾಖ್ಯಾನ ದಶ ಉಪ- ।
ನಿಷದ್ಭಾಷ್ಯ ಗೀತಾತ್ರಯ ತಾತ್ಪರ್ಯ ।
ಎಸೆವ ಯಮಕ ಭಾರತ ಸದಾಚಾರಸ್ಮೃತಿ ದ್ವಾ- ।
ದಶಸ್ತೋತ್ರ ಕೃಷ್ಣಾಮೃತ ಮಹಾರ್ನವ ಮೇಣು ।
ಅಸಮ ತಂತ್ರಸಾರ ಜಯಂತಿ ನಿರ್ಣಯ ।
ಹಸನಾಗಿ ಯತಿಕಲ್ಪ ನರಸಿಂಹಸ್ತುತಿ ಇನಿತು ।
ರಸಪೂರಿತವಾಗಿ ಪಸರಿಸಿದವು ತ್ರಿ- ।
ದಶ ಮ್ಯಾಲೆ ಏಳು ರಂಜಿಸುವ ಸುಧಾಕಥಾ ।
ಪ್ರಸರವಾಗರದು ತಾಮಸಜ್ಞಾನ ಪರಿದು ಕಿ-
ಮಸೆನೆ ನಾಮ ವಿಜಯವಿಠ್ಠಲನ್ನ ನೆನದೂ ॥ ೫ ॥

**ಅಟ್ಟ ತಾಳ**

ದುರುಳ ಸಂಕರನ ಉತ್ತರವನ್ನು ಖಂಡಿಸಿ ।
ಪರಮಾತ್ಮ ಅಖಿಳ ದೇವರಿಗೆ ಭಿನ್ನವೆಂದು ।
ಬಿರಿದು ಡಂಗುರ ಹೊಯಿಸಿ ಧರೆಯೊಳು ಮೆರೆದು ಶ್ರೀ- ।
ಹರಿಯಲ್ಲ ದನ್ಯತ್ರ ಪರದೈವ ವಿಲ್ಲೆಂದು ।
ದರುಶನ ಗ್ರಂಥ ಶಿಷ್ಯರಿಗೆ ಬೋಧಿಸಿ ವೀರ- ।
ವರ ವೈಷ್ಣವರನ ಉದ್ಧರಿಸಿದ ಭಾರತಿ- ।
ಯರಸ ಜಗದ್ಗುರು ಧರೆಯರಸ ಗದಾ- ।
ಧರ ವಿಜಯವಿಠ್ಠಲನ್ನ ಚರಣ ವಿನುತನೆ ॥ ೬ ॥

**ಆದಿ ತಾಳ**

ಗುರು ಮುಖವಿಲ್ಲದೆಲೆ ದೊರಿಯದು ಜ್ಞಾನಮಾರ್ಗ ।
ಅರಿದು ಸುಜನರೆಲ್ಲ ಮರುದಂಶ ಯತಿವರನ ।

ಮರಿಯದಲನು ಸರಿಸಿ ದುರುಳ ಮಾರ್ಗವ ತೊರೆದು ।
ಸುರಳಿತರಾದ ವೈಷ್ಣವರ ಚರಣ ಮೊರೆಯೋಗು ।
ಕರುಣಿಸುವ ಮಹಧನ ವಿಜಯವಿಠ್ಠಲ ಬಿಡದೆ ।
ಸರಿಯಲ್ಲ ಮಧ್ವಮತ ಶರಧಿಯಲ್ಲಿದ್ದವನಿಗೆ ॥ ೭ ॥

**ಜತೆ**

ಅದ್ವೈತ ವನದಾವಾ ಮಧ್ವರಾಯರ ಶ್ರೀಪಾ- ।
ದದ್ವಯ ನೆನೆದು ವಿಜಯವಿಠ್ಠಲನ್ನ ಸೇರೋ ॥ ೮ ॥

* * *

## ಸುಳಾದಿ – ೭೩

ದುಷ್ಕರ್ಮಿಗಳಿಗೆ ನಿತ್ಯತಮವಾಗಬೇಕೆಂದು ವೇದವ್ಯಾಸದೇವರು ತಾಮಸ ಪುರಾಣಗಳನ್ನು ರಚಿಸಿದರು. ಅವು ದುರ್ಮತಿಗಳಿಗೆ ರುಚಿಸಿದವು. ಧರ್ಮಸಾಧನವೆಂದು ತಿಳಿದು ಮಾಯಿಮತವನ್ನು ಅನುಸರಿಸಿದರೆ ಯಮನು ಅಂಥವರ ಚರ್ಮವನ್ನು ಸುಲಿಸುತ್ತಾನೆ.

ಮಣಿಮಂತನೆಂಬ ದೈತ್ಯನು ಸಂಕರನೆಂಬ ಹೆಸರಿನಿಂದ ಕಲಿಯುಗದಲ್ಲಿ ಅವತರಿಸಿದನು. ತಾನೇ ಯತಿಯಾಗಿ ಮೋಹಕಶಾಸ್ತ್ರವನ್ನು ಬೀರಿದನು. ಕುಲವೆಲ್ಲ ಜಾತಿ ಸಂಕರವಾಯಿತು. ಸ್ವಧರ್ಮವಳಿದಾಗ ಸುರರಿಗೂ ಹವಿಸ್ಸು ಇಲ್ಲದಾಯಿತು. ಆಗವರು ಕಮಲಾಸನನಲ್ಲಿ ಮೊರೆಯಿಟ್ಟರು. ಬೊಮ್ಮನು ಶ್ರೀಹರಿಯಲ್ಲಿ ಬಿನ್ನೈಸಿದನು. ಕಲಿಯುಗದಲ್ಲಿ ಅವತರಿಸಿ ಸಜ್ಜನರಿಗೆ ಸನ್ಮಾರ್ಗದರ್ಶನ ಮಾಡುವಂತೆ ಶ್ರೀಹರಿಯು ಪವನನಿಗೆ ಆಜ್ಞಾಪಿಸಿದನು.

ಶ್ರೀಶನ ಆಜ್ಞೆಯನ್ನು ಪಡೆದು ಪವನನು ವಾಸುದೇವನಾಗಿ ನಡುಮನೆ ಬ್ರಾಹ್ಮಣನಲ್ಲಿ ಅವತರಿಸಿದನು. ಶ್ರೀ ಅಚ್ಯುತಪ್ರೇಕ್ಷರಿಂದ ಚತುರಾಶ್ರಮವನ್ನು ಪಡೆದು ಶ್ರೀ ಪೂರ್ಣಪ್ರಜ್ಞ, ಮಧ್ವಮುನಿಯೆಂದನಿಸಿದನು. ಶುದ್ಧ ತತ್ತ್ವವನ್ನು ಸಾರಿ ಶಿಷ್ಯರಿಗೆ ವೇದಸುಧೆಯನ್ನುಣಿಸಿ ಮೋದಬಡಿಸಿದನು.

"ಮಾಯಿಯ ಮನೆ ಮುಂದೆ ಮದಕರಿಯಾಗಿದ್ದು । ಆಯುಷ್ಯಾಭಿವೃದ್ಧಿ ಸುಖಬಡುವದಕ್ಕಿಂತ । ನಾಯಿಯ ಮರಿಯಾಗಿ ಮಧ್ವಮತದವರ । ಕಾಯಿದು ಮನೆ ಮುಂದೆ ಇಪ್ಪ ಕ್ಷಣವೇ ಲೇಸು ।" ಎಂದು ದಾಸರಾಯರು ಹೇಳುತ್ತ "ಪ್ರಾಣಗತಿ ಬಂದರೂ ಮಧ್ವಮತ ಬಿಡದಿರಿ, ಇದೇ ಪರಮಾತ್ಮನಿಗೆ ಬಲು ಪ್ರೀತಿ" ಎನ್ನುತ್ತಾರೆ. ಇದೇ ಈ ಸುಳಾದಿಯ ಸಾರ.

॥ ರಾಗ ಕಲ್ಯಾಣಿ – ಧ್ರುವ ತಾಳ ॥

ದುರ್ಮತವನು ನೆಚ್ಚಿ ಕರ್ಮಕ್ಕೆ ಬೀಳದಿರು ।
ನಿರ್ಮಾಣವನು ವೇದವ್ಯಾಸ ದೇವರು ದು– ।
ಷ್ಕರ್ಮಿಗಳಿಗೆ ನಿತ್ಯತಮವಾಗಲಿಬೇಕೆಂದು ।
ಪೆರ್ಮೆಯಿಂದಲಿ ರಚಿಸಿ ತಾಮಸ ಪುರಾಣ ।
ದುರ್ಮತಿಗಳಿಗೆ ರುಚಿಕರವೆಸಿದರು ।
ಧರ್ಮಸಾಧನವೆಂದು ಮಾಯಿಮತವ ಭಜಿಸೆ ।
ಧರ್ಮರಾಯ ಅವರ ಚರ್ಮವ ಸುಲಿವನು ।
ದುರ್ಮನುಷನಾಮ ವಿಜಯವಿಠ್ಠಲಗೆ ಈ ।
ಕರ್ಮವೊಪ್ಪಿಸಸಲ್ಲಾ ವಿಬುಧರ ಮತವಂತಾ ॥ ೧ ॥

ಅಟ್ಟ ತಾಳ

ಚರಣಡಿ ಎಂದೆಂಬೊ ಪುರದೊಳಗೆ ಸಂ– ।
ಕರ ಜನಿಸಿದ್ದ ಪರಿಯನು ಎಲ್ಲ ।
ಅರಿತದ್ದೆ ಕಾಣೊ ಮರೆ ಪರದೆ ಇಲ್ಲ ।
ಅರಿವನು ನಿನ್ನ ಗುರುವಿನ ಜನನ ।
ಸುತರೊಡಿಯ ಭಾಸ್ಕರ ದ್ಯುತಿ ನಾಮ ವಿಜಯವಿಠ್ಠಲಗೆ
ಶರಣೆಂದೆನ್ನದಲೆ ವರಲುವಾ ನಿತ್ಯಾ ॥ ೨ ॥

ರೂಪಕ ತಾಳ

ಗುರುವಾರು ಸಂಕರಗೆ ಕರದು ಉಪದೇಶದ–
ನರುಹಿವನಾವನೊ ಪೇಳೊ ಮುಗ್ಧಾ ।
ಹರುವ ನದಿಯೊಳಗೆ ಈಸಿ ಪೋಗುತಲಿರಲು ।
ವರ ಯಜ್ಞೋಪವೀತ ಜಿಗುಳಿ ಪೋಗೆ ।
ಜರಿದು ಗೃಹಸ್ಥಾಶ್ರಮ ಸನ್ನ್ಯಾಸಾಶ್ರಮಕೆ ಮನ– ।
ಎರಗಿ ನಮ್ಮ ಸತ್ಯ ಪ್ರಾಜ್ಞತೀರ್ಥರ ಕೇಳಿ ।
ಪರಿಹಾರವಾದ ಉತ್ತರ ಕೊಡಲು ತಾನೆ ।
ದುರುಳ ಮತಿಯಲಿ ಚತುರಾಶ್ರಮವೆ ಕೊಂಡಾ ।
ಹಿರಿಯರ ಮತವಿದು ಪುಶಿಯಲ್ಲ ಮಾತು ಚ– ।
ತುರರ್ಗತ ವಿಜಯವಿಠ್ಠಲನೆ ಸಾಕ್ಷಿ ॥ ೩ ॥

ಝಂಪೆ ತಾಳ

ಕಲಿಸಂಕರನ ಪುಟ್ಟು ಕುಂಬಳಕಾಯಿ ಗುರುತು ।
ಕಲಿಯುಗದೊಳಗೆ ಸೋಹಂ ಎಂದು ತಿರುಗಿ ।

ಸಲೆ ಸುಮಾರ್ಗವ ಬಿಡಿಸಿ ಮೋಹಕ ಶಾಸ್ತ್ರವನು ।
ಇಳಿಯೊಳಗೆ ಸರ್ವ ಮಿಥ್ಯಾವ ತುಂಬಿದ ।
ಕುಲವೆಲ್ಲ ಜಾತಿ ಸಂಕರವಾಗಿ ಸ್ವಧರ್ಮ– ।
ವಳಿದು ಸುರರಿಗೆ ಹವಿಸ್ಸು ಇಲ್ಲದಿರಲು ।
ಜಲಜ ಸಂಭವಗೆ ಸುಮನಸರು ಮೊರೆ ಇಡಲಾಗಿ ।
ಲಲಿತದಿಂದಲಿ ಹರಿಗೆ ಬಿನ್ನೈಸಲೂ ।
ಸುಲಭಾ ಮಹಾ ಸಿರಿ ವಿಜಯವಿಠ್ಠಲನು ।
ಒಲಿದು ಜಯತನುಜಗೆ ಕರದು ನೇಮಿಸಿದಾ ॥ ೪ ॥

**ತ್ರಿವಿಡಿ ತಾಳ**

ಹುಟ್ಟಿದನು ವಾಸುದೇವನೆಂಬೊ ನಾಮದಲಿ ।
ಸೃಷ್ಟಿಗೆ ಮಧ್ವ ಮುನಿ ಎನಿಸಿಕೊಂಡೂ ।
ಕುಟ್ಟಿ ದಾರದ್ವೈತಮತ ಕೋಲಾಹಲ ಮಾಡಿ ।
ವೈಷ್ಣವಮತವನು ಉದ್ಧರಿಸೀ ।
ವಿಷ್ಣು ಸರ್ವೋತ್ತಮನಹುದೆಂದು ಸ್ಥಾಪಿಸಿ ।
ಶಿಷ್ಟರಿಗೆ ವೇದಸುಧೆಯಕರದೂ ।
ವೈಷ್ಣವಾಚಾರ್ಯರ ಮತವಿಡಿದು ಬದುಕೋದು ।
ಪುಷ್ಟಿನಾಮ ವಿಜಯವಿಠ್ಠಲಗೇ ಬಲುಪ್ರೀತಿ ॥ ೫ ॥

**ಅಟ್ಟ ತಾಳ**

ಮಾಯಿಯ ಮನೆಮುಂದೆ ಮದಕರಿಯಾಗಿದ್ದು ।
ಆಯುಷ್ಯಾಭಿವೃದ್ಧಿ ಸುಖಬಡುವದಕ್ಕಿಂತಾ ।
ನಾಯಿಯ ಮರಿಯಾಗಿ ಮಧ್ವಮತದವರ ।
ಕಾಯಿದು ಮನೆ ಮುಂದೆ ಇಪ್ಪ ಕ್ಷಣವೆ ಲೇಸು ।
ಭೂಯೋಮ ಪಾತಾಳದೊಳಗಿದು ಸಿದ್ಧವು ।
ರಾಯ ಧರ್ಮಜ ಮಿಕ್ಕ ಹರಿದಾಸರ ನೋಡೆ ।
ಶ್ರೀಯರಸನೆ ಪರನೆಂದು ಪೋದರು ಗತಿಗೆ
ವಾಯುಮತ ಬಿಟ್ಟು ಅನ್ಯಮತವಸಾರೆ ।
ತಾಯಿಯ ಜರಿದು ಶ್ವಬಜಿಗೆರಗಿದಂತೆ ।
ನೀಯಂತೆ ನಾಮ ಶ್ರೀ ವಿಜಯವಿಠ್ಠಲಗೆ ।
ಮಾಯಿಮತದವರು ಆಗರು ಕಾಣೋ ॥ ೬ ॥

**ಆದಿ ತಾಳ**

ಹನುಮಾವತಾರಕೆ ಕಾಲಯಮ ಎನಿಸಿದಾ ।
ಮಣಿಮಾನಾಸುರನಾದಾ ಭೀಮಾವತರಕ್ಕೆ ।
ಮುನಿ ಮಧ್ವರಾಯನಾಗೆ ಭಣಗು ಸಂಕರನಾದಾ ।
ಜನಿಸಿದನು ವೈರವನ್ನು ಜನುಮ ಮೂರರಲ್ಲಿ ಬಿಡದೆ ।
ಅನಿಲದವೆನಕೂಡ ಶೆಣಿಸಿ ಸಂಕಟಬಟ್ಟು ।
ಅನುವ ಕಾಣದಲೆ ತಮಸೀನಲ್ಲೀಗ ಬಳಲುತಿಪ್ಪಾ ।
ಫಣನಾಮ ವಿಜಯವಿಠ್ಠಲ ಹನುಮನ ಮತದಂತೆ ।
ಮನುಜೋತ್ತಮ ಕಡೆ ಮೊದಲು ಮನದಂತೆ ಫಲವೀವಾ ॥ ೭ ॥

**ಜತೆ**

ಪ್ರಾಣಗತಿ ಬಂದರು ಮಧ್ವಮತ ಬಿಡದಿರೀ ।
ಪ್ರಾಣಧೃತುನಾಮ ನಮ್ಮ ವಿಜಯವಿಠ್ಠಲಗರ್ಪಿಸೊ ॥ ೮ ॥

* * *

## ಸುಳಾದಿ – ೭೪

ಶ್ರೀಮದ್ವಿಠ್ಠಲಪಾದಾಂಬುಜ ಮಧುಪನಾದ, ಕಾಮವರ್ಜಿತ ಕೃಪಾಸಾಗರ ಯತಿರೂಪನಾದ, ಸಾಮವಿಖ್ಯಾತ, ಸುರರೊಳಗೆ ಸಿದ್ಧ ಪ್ರಸಿದ್ಧನಾದ, ದಂಡ ಕಮಂಡಲಧರ ಶೋಭನಕಾಯನಾದ ಮಧ್ವಮುನಿರಾಯನು ಗುರುಸಾರ್ವಭೌಮನೆನಿಸಿ ಸದಾ ರಾಮ, ಕೃಷ್ಣ, ವ್ಯಾಸರನ್ನು ಹೃನ್ಮಂದಿರದಲ್ಲಿಟ್ಟ ಧಿಟ್ಟ.

ಶೂನ್ಯವಾದಿ ಮಿಕ್ಕಾದ ಇಪ್ಪತ್ತೊಂದು ಕುಭಾಷ್ಯಗಳನ್ನು ಗೆದ್ದು ಅವರ ದರ್ಪವನ್ನಡಗಿಸಿ, ಕಂದರ್ಪಜನಕನೇ ಸರ್ವತಂತ್ರ ಸ್ವತಂತ್ರ, ಗುಣಪೂರ್ಣ, ದೋಷದೂರ, ಅಪಾರ ಮಹಿಮ, ಸಾಕಾರ, ಸತ್ಪುರುಷ, ತ್ರಿಲೋಕಕ್ಕೆ ಒಡೆಯ, ಜಗಜ್ಜೀವ, ಸರ್ವಾಂತರಂಗದೊಳಗೆ ಸದಾಕಾಲವಿರುವ ವಿಶ್ವ ಮೂರುತಿ, ಮುಪ್ಪಿಲ್ಲದ ಅಜನಪ್ಪ, ಎಂಬ ನಿಜತತ್ತ್ವವನ್ನು ತೋರಿ, ಸಾರಿ ನೆರೆನಂಬಿದವರ ಮಾರ್ಗವನ್ನು ತೋರಿದ ತ್ರಿಲೋಕ ಗುರುಗಳಾದ ಶ್ರೀಮದಾನಂದತೀರ್ಥರ ಸತತ ಸ್ಮರಣೆಯು ಆನಂದಮಾರ್ಗದ ಹೆದ್ದಾರಿ ಎಂಬ ವಿಷಯವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.

**॥ ರಾಗ ಭೈರವಿ – ಧ್ರುವ ತಾಳ ॥**

ಶ್ರೀಮದ್ವಿಠಲ ಪಾದಾಂಬುಜ ಮಧುಪರಾಜಾ ।
ಶ್ರೀಮದಾಚಾರ್ಯ ಧೈರ್ಯ ಯೋಗಧುರ್ಯಾ ।
ಕಾಮವರ್ಜಿತ ಕೃಪಾಸಾಗರ ಯತಿರೂಪಾ ।

ರೋಮ ರೋಮ ಗುಣ ಪೂರ್ಣಪರಣಾ ।
ಸಾಮವಿಖ್ಯಾತಸಿದ್ಧ ಸುರರೊಳಗೆ ಪ್ರಸಿದ್ಧ ।
ಸೀಮ ರಹಿತ ಮಹಿಮ ಭುವನ ಪ್ರೇಮ ।
ತಾಮಸ ಜನದೂರ ದಂಡಕ ಮಂಡಲ ಧರ ।
ಶ್ರೀಮಧ್ವ ಮುನಿರಾಯ ಶೋಭನ ಕಾಯಾ ।
ಆ ಮಹಾ ಜ್ಞಾನದಾತ ಅನುಮಾನ ತೀರಥ ।
ಕೋಮಲಮತಿ ಧಾರ್ಯ ವೈಷ್ಣವಾರ್ಯಾ ।
ಕಾಮ ಸಂತ್ರಾಮ ಶರ್ವ ಸುರನುತಗುರುಸಾರ್ವ– ।
ಭೌಮಾತಿ ಭಯನಾಶ ಭಾರತೀಶಾ ।
ರಾಮಕೃಷ್ಣ ವ್ಯಾಸ ವಿಜಯವಿಠ್ಠಲನ ಹೃದಯ – ।
ಧಾಮದೊಳಗಿಟ್ಟ ಸತತ ಧಿಟ್ಟಾ ॥ ೧ ॥

### ಮಟ್ಟ ತಾಳ

ಹರಿಯೆ ಗುಣಶೂನ್ಯ ಹರಿಯೆ ನಿರಾಕಾರ ।
ಹರಿಯು ದೊರೆಯು ಅಲ್ಲ ಹರಿ ಪರತಂತ್ರ ।
ಹರಿಯು ದುರ್ಬಲನು ಹರಿಗೆ ಎಂಟು ಗುಣ ।
ಹರಿಯು ತಾನೆಂದು ತಾರತಮ್ಯವೆನದೆ ।
ಧರೆಗೆಲ್ಲ ಮಿಥ್ಯಾ ಪರಿಪರಿ ಕರ್ಮಗಳು ।
ಹರಿ ತಾನೇ ಪುಟ್ಟೆ ಚರಿಸುವ ಲೀಲೆಯಲಿ ।
ನರ ನಾನಾ ಜನ್ಮ ಧರಿಸಿ ತೋರುವನೆಂದು ।
ದುರುಳ ದುರ್ಮತದವರು ಸರಿಸರಿ ಬಂದಂತೆ ।
ವರಲಿ ಸಜ್ಜನರನ್ನು ತಿರಸ್ಕರವನೆ ಮಾಡಿ ।
ತಿರುಗುತಿರೆ ಇತ್ತ ಸುರರು ಕಳವಳಿಸಿ ।
ಪರಮೇಷ್ಠಿಗೆ ಪೇಳೆ ಹರಿಗೆ ಬಿನ್ನೈಸಲು ।
ಮರುತ ದೇವನೆ ಅವತರಿಸಿದ ಹರುಷದಲ್ಲಿ ।
ಕರುಣಾಕರ ಮೂರ್ತಿ ವಿಜಯವಿಠ್ಠಲರೇಯ ।
ಪರನೆಂದು ಸಾರಿ ಧರೆಯೊಳಗೆ ಮೆರೆದಾ ॥ ೨ ॥

### ತ್ರಿವಿಡಿ ತಾಳ

ಶೂನ್ಯವಾದಿ ಮಿಕ್ಕ ದುರ್ಮತದವರೆಲ್ಲ ।
ಸನ್ಯಾಯವಿಲ್ಲದ ವಚನದಿಂದ ।
ಸನ್ಯಾಸಿಗಳೆಂಬೊ ಗರ್ವವಲ್ಲದೆ ವೇದ ।
ಸನ್ಮತವಾಗದ ದುರ್ಲಕ್ಷಣ ।
ವನ್ನೆ ಕಲ್ಪಿಸಿ ಶುದ್ಧ ಆಚಾರವನೆ ಕೆಡಿಸಿ ।

ಭಿನ್ನವಿಲ್ಲದೆಂದು ತಿರುಗುತಿರೆ ।
ಪುಣ್ಯಶ್ಲೋಕ ನಮ್ಮ ವಿಜಯವಿಠ್ಠಲನ ।
ಸನ್ನುತಿಸದೆ ದ್ವೇಷವ ತಾಳಿರೆ ॥ ೩ ॥

**ಅಟ್ಟ ತಾಳ**

ಇಪ್ಪತ್ತು ಒಂದು ಕುಭಾಷ್ಯವ ರಚಿಸಿರೆ ।
ಒಪ್ಪದಿಂದಲಿ ಗೆದ್ದು ಅವರವರ ಮಹಾ ।
ದರ್ಪವ ತಗ್ಗಿಸಿ ದಶ ದಿಕ್ಕು ಪೊಗಿಸಿ ಕಂ – ।
ದರ್ಪ ಜನಕನು ಸ್ವತಂತ್ರ ಗುಣಪೂರ್ಣ ।
ಅಪಾರ ಮಹಿಮನು ಸಾಕಾರ ಸತ್ಪುರುಷ ।
ತಪ್ಪದೆ ತ್ರಿಲೋಕಕ್ಕೊಡೆಯ ಜಗಜೀವ– ।
ನಪ್ಪನು ಸರ್ವಾಂತರಂಗದೊಳಗೆ ಬಿಡ– ।
ದಿಪ್ಪ ವಿಶ್ವಮೂರುತಿ ವಿಲಕ್ಷಣರೂಪ ।
ಸರ್ಪಶಯನ ನಮ್ಮ ವಿಜಯವಿಠ್ಠಲ ರೇಯ ।
ಮುಪ್ಪಿಲ್ಲದ ದೈವ ಅಜಭವ ಸುರವಂದ್ಯಾ ॥ ೪ ॥

**ಆದಿ ತಾಳ**

ದರುಶನ ಗ್ರಂಥವ ರಚಿಸಿ ಸುಜನರಪಾಲಿಸಿ ।
ಮರುತಮತದ ಬಿರಿದೆತ್ತಿದೆ ಮಹಾಯತಿ ।
ಸರಿಗಾಣೆ ನಿಮಗೆಲ್ಲ ವರ್ಣಿಸಲೆನ್ನಳವೆ ।
ದುರುಳರ ಗಂಟಲಗಾಣ ವಿದ್ಯಾಪ್ರವೀಣಾ ।
ನೆರೆನಂಬಿದವರಿಗೆಲ್ಲ ಮನೋವೆಥೆಗಳ ಬಿಡಿಸಿ ।
ವರಸು ಭಕುತಿ ಜ್ಞಾನ ವಿರಕ್ತಿ ಮಾರ್ಗವ ತೋರಿಸಿ ।
ಪೊರೆವ ತತ್ವದ ವನಧಿ ಪೊಡವಿಯೊಳಗೆ ।
ಸುರನರೋರಗಾದಿಗೆ ಗುರುವೆ ಪರಮ ಗುರುವೆ ।
ಸರಸ ಸದ್ಗುಣ ಸಾಂದ್ರ ವಿಜಯವಿಠ್ಠಲ ರೇಯನ ।
ಚರಣವ ನಂಬಿದ ಪ್ರಧಾನ ವಾಯುದೇವಾ ॥ ೫ ॥

**ಜತೆ**

ಅದ್ವೈತ ಮತಾರಣ್ಯ ದಾವಾ ವ್ಯಾಸಶಿಷ್ಯ ।
ಮಧ್ವಮುನಿ ವಿಜಯವಿಠ್ಠಲನ ನಿಜದಾಸಾ ॥ ೬ ॥

* * *

## ಸುಳಾದಿ – ೭೫

ಮುನಿಗಳ ಮಸ್ತಕರತ್ನನಾದ, ಭಾರತೀರಮಣನು ತೃಣ ಮೊದಲಾದವುಗಳಲ್ಲಿ ವ್ಯಾಪ್ತನು. ಗುಣನಿಧಿಯಾದ ಪಾವನ ಶರೀರನು. ಬ್ರಹ್ಮಾಂಡವನ್ನೇ ತಾಳವನ್ನಾಗಿ ಮಾಡಿ ಬಾರಿಸುವ ಘನ ಸಮರ್ಥನು. ಸಜ್ಜನರ ಪಾಲ, ಶುಭಲೋಲ, ಸಂಕರುಷಣನ ಮುದ್ದು ಬಾಲ.

ಪ್ರಧಾನವಾಯುವು ಹನುಮ, ಭೀಮ, ಮಧ್ವಮುನಿಯಾಗಿ ಬಲ ಜ್ಞಾನ ಕಾರ್ಯವನ್ನು ಮಾಡಿದನು. ಜನುಮ ಜನುಮಕ್ಕೂ ಸಾಧನ ಮಾಡಿಸುವ ಕರುಣಿ, ನೆನೆವರ ಚಿಂತಾಮಣಿ.

ಲೋಕವೆಲ್ಲ ಇವನ ಅಧೀನ. ಇವನು ಹರಿಯಾಧೀನ. ತನ್ನ ಬಿಂಬನಲ್ಲಿ ಅವಿಚ್ಛಿನ್ನ ಭಕ್ತಿಯುಳ್ಳವನು, ಸನ್ಯಾಸಿಗಳ ಒಡೆಯನು.

ಇಂತಹ ಮಹಾಮಹಿಮನಾದ ಮುಖ್ಯಪ್ರಾಣನ ಅವತಾರರಾದ ಆಚಾರ್ಯ ಮಧ್ವರ ಸಮಗ್ರ ಚರಿತ್ರೆಯು ಶ್ರೀಸುಮಧ್ವವಿಜಯದಲ್ಲಿ ಹೃದಯಂಗಮವಾಗಿ ವರ್ಣಿತವಾಗಿದೆ. ದಾಸರಾಯರು ಅದನ್ನೇ ಈ ಸುಳಾದಿಯಲ್ಲಿ ಸಂಗ್ರಹವಾಗಿ ತಿಳಿಸಿದ್ದಾರೆ.

### ॥ ರಾಗ ಮಾರವಿ – ಧ್ರುವ ತಾಳ ॥

ಮುನಿಗಳ ಮಸ್ತಕ ರತುನಾ ರಮಣಾ ಭಾರತಿ ।
ತೃಣ ಮೊದಲಾದ ವ್ಯಾಪ್ತನೆ ಪಾವನ ಶರೀರ ।
ಗುಣನಿಧಿ ಪವಮಾನಾ ಪವಮಾನಾ ಪಂಚಪರನಾ ।
ಅಣುಮಹತ್ತುರೂಪನೆ ಸನಕಾದಿಗಳ ಪ್ರೀಯ ।
ವನಜಜಾಂಡವನ್ನು ತಾಳವನೆ ಮಾಡಿ ಬಾರಿಸುವ ।
ಘನ ಸಮರ್ಥನೆ ಸಜ್ಜನಪಾಲ ಶುಭಲೋಲ ।
ಅನಿಲಾ ಪ್ರಧಾನವಾಯು ಹನುಮ ಭೀಮ ಮಧ್ವ ।
ಮುನಿ ಜ್ಞಾನದಾತಾ ಕರಣಾಭಿಮಾನಿಗಳ ।
ಗಣಣೆ ಮಾಡದೆ ಗೆದ್ದ ಅನಿಮಿತ್ತ ಬಂಧು ಜಗ– ।
ಜ್ಜನಕ ಚತುರ ಹಸ್ತ ಮಿನಗುವ ಗದಾಪಾಣಿ ।
ದನುಜರ ಸದಾ ಬಡಿದ ರಣರಂಗಧೀರ ಶೂರ ।
ಇನ ಮೊದಲಾದ ಠಾವಿನಲ್ಲಿ ಸರ್ವದಾ ತೇಜಾ ।
ವನಜಾರಿ ಕುಲಾಧೀಶ ವನಮುದ್ದು ಪೂರ್ಣಪ್ರಜ್ಞಾ ।
ಪ್ರಣತಾರ್ತಿಹಾರಾ ಆರ್ಯಾ ಅನುಗಾಲ ಜಗದ್ಗುರು ।
ಜನುಮ ಜನುಮ ಸಾಧನ ಮಾಡಿಸುವ ಕರುಣಿ ।
ನೆನೆದವರಿಗೆ ಚಿಂತಾಮಣಿ ಸುರಧೇನು ತರುವೆ ।
ಪ್ರಣವ ಮೂರುತಿ ನಮ್ಮ ವಿಜಯವಿಠ್ಠಲ ನಾರಾ– ।
ಯಣನಂಘ್ರಿ ಗುಪ್ತದಲ್ಲಿ ಮನದೊಳೆಣಿಪ ಮೌನಿ ॥ ೧ ॥

### ಮಟ್ಟ ತಾಳ

ನಿನ್ನಾಧೀನವೆ ಲೋಕಾ ನೀ ಹರಿಯಾಧೀನಾ ।
ನಿನ್ನ ಪ್ರೇರಣೆ ಜಗಕೆ ನಿನಗೆ ಪ್ರೇರಣೆ ಹರಿ ।
ನಿನ್ನಾಧಾರ ನಮಗೆ ನಿನಗಾಧಾರ ಹರಿ ।
ನಿನ್ನ ಬೆಳಗು ಜಗಕೆ ನಿನಗೆ ಬೆಳಗು ಹರಿ ।
ನಿನ್ನ ಧ್ಯಾನಾ ನಮಗೆ ನಿನಗೆ ಹರಿಧ್ಯಾನ ।
ನಿನ್ನ ಸ್ತೋತ್ರವೆ ನಮಗೆ ನಿನಗೆ ಹರಿಯ ಸ್ತೋತ್ರ ।
ನಿನ್ನ ಕಾಣೆವು ನಾವು ನೀ ಹರಿಯನ್ನು ಕಾಣ್ವೆ ।
ನಿನ್ನ ಮಾಯವು ನಮಗೆ ನಿನಗೆ ಹರಿಯ ಮಾಯಾ ।
ನಿನ್ನೊಳಗೆ ಹರಿ ನೀನು ಹರಿಯೊಳಗೆ ।
ಅನ್ಯೋನ್ಯವಾಗಿ ಭಕುತರ ಮನದಲ್ಲಿ ।
ಕಣ್ಣಿಗೆ ಪೊಳವುತ್ತ ಪೊಳದಾಡುವ ಪ್ರಾಣ ।
ಚಿಣ್ಣವತಾರ ಶ್ರೀ ವಿಜಯವಿಠ್ಠಲಂಗೆ ಅ- ।
ವಿಚ್ಛಿನ್ನ ಭಕ್ತನಾದ ಸನ್ಯಾಸಿಗಳೊಡಿಯಾ ॥ ೨ ॥

### ರೂಪಕ ತಾಳ

ಕಲಿ ಮೊದಲಾದ ಖಳರು ಸತ್ಕರ್ಮ ಮಾಡುವ ।
ಹಳಿದು ಯೋಚನೆ ಮಾಡಿ ಮಣಿಮಂತನೆಂಬವನ ।
ಬಲವಂತ ನಹುದೆಂದು ಕರದು ಉಪದೇಶಿಸಿ ।
ಇಳಿಯೊಳು ಜನಿಸಿ ಭೇದಾರ್ಥ ಜ್ಞಾನವಲ್ಲ ।
ಅಳಿದು ಸಜ್ಜನರನ್ನು ಮಂದಮತಿಗಳ ಮಾಡಿ ।
ಕುಲಮರಿಯಾದಿಗಳ ಕೆಡಿಸಿ ಜಗವ ।
ಬಲು ಮಿಥ್ಯಾವೆಂದು ಸ್ಥಾಪಿಸಿ ಜೀವೇಶಗೆ ಐಕ್ಯ ।
ತಿಳಿಸಿ ಪರಗತಿಯ ಮಾರ್ಗ ತೋರದಂತೆ ।
ಹೆಲೆಗಲಿಸ ಪೋಗೆಂದು ಮನ್ನಿಸಿ ಮುದದಿಂದ ಪೇ- ।
ಳಲು ಹರುಷವ ತಾಳಿ ಖಳನು ಮನ- ।
ದೊಳು ನೆನೆದಾ ನಿಲಸಾ ನಿನ್ನ ಅಂದಿನ ವೈರವ ।
ಒಳಿತೆಂದು ಕೈಕೊಂಡು ವಿಜಯವಿಠ್ಠಲನ್ನ ।
ಸುಲಭ ಭಕ್ತರ ಮತಿ ಅಳಿದು ಬಿಡುವೆನೆಂದು ॥ ೩ ॥

### ಝಂಪೆ ತಾಳ

ಚರಣಡಿ ಎಂಬೊ ಗ್ರಾಮದಲಿ ವಿವಶಳಾಗಿ ।
ಚರಿಸುವ ಸ್ತ್ರೀಯಳಲ್ಲಿ ಜನಿಸಿ ಬಂದು ।

ದುರುಳ ಸಂಕರದನೆಂಬೊ ನಾಮದಲ್ಲಿ ।
ಧರೆಯೊಳಗೆ ಮೆರದು ಮನೋವಾಚಾಕಾಯದಲ್ಲಿ ತಾನಾಗ ।
ಎರಡೆಂಬೊ ವಾಕ್ಯವನು ಪೇಳದಲೆ ।
ತಿರುಗಿದನು ಬಹುಬಗೆ ದುಃಶಾಸ್ತ್ರವನೆ ರಚಿಸಿ ।
ಶಿರ ಬಲಿತು ಧರ್ಮಗಳ ನಿರಾಕರಿಸಿ ।
ಪರಮಾತ್ಮಗೆ ನಿರ್ಗುಣ ಪೇಳಿ ಉತ್ತಮ ।
ಪರವೆಲ್ಲ ಜೀವದಲ್ಲಿ ಸಾಧಿಸುತ್ತ ।
ಇರಲು ಸಜ್ಜನರೆಲ್ಲ ಹಸಗೆಟ್ಟು ಕೇವಲ ।
ಮೊರೆ ಇಡಲು ಹರಿ ಕರುಣದಿಂದ ನೀನು ।
ಸುರರು ಪೊಗಳಾಗಿ ವಿಜಯವಿಠ್ಠಲ ನಾಜ್ಞ- ।
ಶಿರದಲ್ಲಿ ಧರಿಸಿ ಅವತರಿಸಿದ ವೃಕೋದರ ॥ ೪ ॥

### ತ್ರಿವಿಡಿ ತಾಳ

ಜನಸಿದೆ ಪರಶುಕ್ಲತ್ರಯನೆ ವೇಗದಿ ನಡು- ।
ಮನೆಯ ಬ್ರಾಹ್ಮಣ ನಿಜನಾರಿಯಲ್ಲೀ ।
ತನಯ ಲೀಲೆಯ ತೂರಿ ಹುರುಳಿಗುಗ್ಗುರಿ ಮೆದ್ದು ।
ಜನನಿಗಾಶ್ಚರ್ಯವ ಮಿಗಿಲೆನಿಸಿ ।
ಕುಣಿದಾಡಿ ಬಲಿವರ್ಧನನ ಪೋಗಿ ।
ಹುಣಿಸೆಬೀಜ ಲಿ ಸಾಲವನೆ ತಿದ್ದಿ ।
ತೃಣ ಮಾಡಿ ಶಿವಶಾಸ್ತ್ರಿಯನು ಸೋಲಿಸಿ ಆ- ।
ಕ್ಷಣದಲ್ಲಿ ಯತಿಯಾದೆ ಜನಕನಿಂದ ।
ಪಣಿಮಾದ್ಯರಿಗೆ ಗುರುವಾದ ನಾರಿಯ ರಮಣ ।
ಅನುಸರಿಸಿ ಅಚ್ಯುತಪೇಕ್ಷನಲ್ಲಿ ।
ವಿನಯದಲಿ ಪೋಗಿ ನಿಯಮನಾಗಿ ಶಿಷ್ಯ- ।
ತನಪಡದಿ ಮಧ್ವಾಖ್ಯನಾಮದಲ್ಲಿ ।
ಅನಿಮಿಷ ನದಿಯ ದಾಟಿ ಭೂಪತಿಯ ವಂಚಿಸಿ ।
ಬಿನಗು ಚೋರರರನ್ನು ಮೋಸಗೊಳಿಸೀ ।
ಮನೇವೇಗದಲಿ ಮಹಾ ಬದರಿಕಾಶ್ರಮದಲ್ಲಿ ।
ದನುಜಾರಿಇರೇ ಪೋಗಿ ನಮಿಸಿ ವಿದ್ಯಾ- ।
ಅನುವಾಗಿ ಕಲಿತು ಸರ್ವದ ಅಲ್ಲಿದ್ದ ಸರ್ವ- ।
ಮುನಿಗಳಿಂದ ಪೂಜೆಗೊಂಡು ತೆರಳಿ ।
ಜನುಮರಹಿತ ವ್ಯಾಸಮುನಿಯನ್ನೆ ಕಂಡು ವಂ- ।
ದನೆ ಮಾಡಿ ಎಂಟು ಮಳಲಮುಟ್ಟಿಗೆ- ।

ಯನು ಪಡೆದು ಬಂದೆ ರಜತಪೀಠಪುರದಲ್ಲಿ ।
ಇನನಂತೆ ಪೊಳೆವ ಆನಂದತೀರ್ಥಾ ।
ಗುಣಪೂರ್ಣ ಅನಂತೇಶ್ವರ ವಿಜಯವಿಠ್ಠಲನ್ನ ।
ಅನುದಿನ ನೆನೆಸುವ ವೈಷ್ಣವಾಚಾರ್ಯ ॥ ೫ ॥

**ಅಟ್ಟ ತಾಳ**

ವಸುಧಿಯೊಳಗೆ ರಕ್ಕಸರೂಪ ಸಂಕರ ।
ಮಸದು ಮತ್ಸರಿಸಿ ತಾಮಸ ಶಾಸ್ತ್ರಗಳು ನ್ಯಾವ– ।
ರಿಸಿ ನಿರ್ಮಲ ಜ್ಞಾನ ಪುಶಿಯಂದು ವರದು ವೊ– ।
ಲಿಸಿಕೊಂಡು ಅವರಿಗೆ ಭಸುಮವ ಬಡಿಸಿ ವೆ– ।
ಕ್ಕಸನಾಗಿರಲಿತ್ತ ಶ್ವಸನಾವ ತಾರನೆ ।
ನಸುನಗುತ್ತ ವೇಗ ದಶಪ್ರಕರಣ ರಂ– ।
ಜಿಸುವ ಸೂತ್ರವೆ ನಾಲ್ಕು ।
ದಶ ಉಪನಿಷತ್ ಎಸವಾ ಋಗ್ಗಾ ಗೀತಾ ।
ಹಸನಾದೆರಡು ಭಾಷ್ಯ ತ್ರಿಸ ತಾತ್ಪರ್ಯವು ।
ಎಸಳು ಯಮಕ ಭಾರತಾಗಮ ಸದಾಚಾರ ।
ಕುಶಲಸ್ಮೃತಿ ದ್ವಾದಶ ಸ್ತೋತ್ರ ಕೃಷ್ಣ ಸು– ।
ರಸ ಮಹಾರ್ಣವ ಮಿಸಣಿಪ ತಂತ್ರಸಾರ ।
ವಸುದೇವ ಸುತ ಜನಿಸಿದ ನಿರ್ಣಯ ಮತ್ತೆ ।
ಋಷಿಕಲ್ಪ ನರಸಿಂಹ ಪೊಸ ಬಗೆ ನಖಸ್ತುತಿ ।
ನಿಷಿಕರನಂತೆ ಶೋಭಿಸುವ ಮೂವತ್ತೇಳು ।
ರಸಪೂರಿತವಾದ ದರುಶನ ಗ್ರಂಥಗಳು ರ– ।
ಚಿಸಿ ಏಕವಿಂಶತಿ ಅಸುರ ಭಾಷ್ಯಗಳ ಖಂ– ।
ಡ್ರಿಸಿ ವಾದಿಗಳ ಭಂಗಿಸಿ ಸೋಲಿಸಿ ಚತು– ।
ರ್ದಶಲೋಕಕ್ಕೆ ದೈವ ಝುಷಕೇತು ಪಿತನೆಂದು ।
ಬೆಸಸಿ ಡಂಗುರ ರವ ಹೊಯಿಸಿ ಬಿರದನೆ ಎ– ।
ತ್ತಿಸಿ ಸುಜನರ ಉದ್ಧರಿಸಿ ಪೊಗಳಿಸಿಕೊಂಡು ।
ದಶದಿಕ್ಕಿನೊಳು ಕೀರ್ತಿ ಪಸರಿಸಿ ಮೆರೆವ ವಿ– ।
ಕಸಿತ ವದನ ತ್ರಿದಶ ಮನೋಹರಾ ।
ಹಸಿದವನಂತೆ ಭುಂಜಿಸಿದೆ ಕದಳಿಫಲ ।
ವಶವೆ ಪೊಗಳಲು ಮಾನಿಸಗೆ ನಿಮ್ಮ ಮಹಿಮೆ ।
ಶಶಿಕೋಟಿ ಲಾವಣ್ಯ ವಿಜಯವಿಠ್ಠಲನಂಘ್ರಿ– ।
ವಶಮಾಡಿಕೊಂಡ ಸಂತಸ ಜ್ಞಾನದಾತಾ ॥ ೬ ॥

**ಆದಿ ತಾಳ**

ದುರುಳ ಮೋಹಕ ಶಾಸ್ತ್ರಗಿರಿಗೆ ಕುಲಿಶನೆ ನಿಶಿ- ।
ತರಿದು ಸಿದ್ಧಾಂತ ಮತ ಪರಮತತ್ತ್ವವೇ ತಾ- ।
ತ್ಪರ್ಯ ಗುಣತಾರತಮ್ಯ ಅರುಹಿ ಮುಕ್ತಿಗೆ ದಾರಿ ।
ಕರದು ಕರದೊಳು ತೋರಿ ಎರಡಾರು ಪುಂಡ್ರ ಮುದ್ರೆ ।
ಧರರ ಮಾಡಿ ಪಾಮರರ ಪಾಲಿಸಿ ತಾಮಸರ ತಮಸಿಗೆ ಅಟ್ಟಿ ।
ಸಿರಿ ಪತಿ ಪ್ರೀತಿ ಬಡಿಸಿ ಶರಧಿಯೊಳಗೆ ಹಡಗ- ।
ಬರುತ ನಿಲ್ಲಲು ನೋಡಿ ಕರೆದು ಗೋಪಿಚಂದನ ।
ಕರಣೆ ತೆಗೆದುಕೊಂಡು ಭರದಿ ದ್ವಾದಶ ಸ್ತೋತ್ರ ಮಾಡುತ ಆ- ।
ದರವಳಗುಳ್ಳ ಸೋದರ ಮಾವನ ವೈರಿಯ ।
ನಿರೀಕ್ಷಿಸಿ ಮಧ್ವ ಸರೋವರದಲ್ಲಿ ತೊಳೆದು ನಿಂ- ।
ದಿರಿಸಿ ರಜತಪೀಠ ಪುರದಲ್ಲಿ ಉತ್ಸಾಹದಿ ।
ಸರಸದಲಿ ಪೂಜಿಸಿ ತರುವಾಯರ್ಚನಿಗೆ ನಾ- ।
ಲ್ಕೆರಡು ಸನ್ಯಾಸಿಗಳ ಕರಕಮಲದಿಂದ ಪಡೆದೆ ।
ವರ ಮಧ್ವ ತಾಳಮತ ನರಸಿಂಹ ಬ್ರಹ್ಮಣ್ಯ ।
ಪರಮಕ್ಷೇತ್ರದಲಿ ಇಬ್ಬರ ಯತಿಗಳ ಇಟ್ಟು ।
ಪರಿ ಪರಿಯಿಂದ ಈ ಮೂರು ಕ್ಷೇತ್ರ ವಾ- ।
ಸರ ಒಂದು ಬಿಡದೆ ಸಂಚರಿಸಿದ ಮಹಕಾಯ ।
ಸರಸಿಜನಾಭಮುನಿ ನರಹರಿ ಮಾಧವ ।
ವರ ಅಕ್ಷೋಭ್ಯ ಏಕೋದರ ವಿಷ್ಣು ತೀರ್ಥ ಮಹಾ- ।
ಶರಣ ತ್ರಿವಿಕ್ರಮಾರ್ಯಾ ದುರಿತ ನಾಶನ ಭಗವ- ।
ತ್ಪರನಾದ ಸತ್ಯತೀರ್ಥ ತರುವಾಯ ನಾರಾಯಣಾ- ।
ಚಾರ್ಯ ಎಂಬೊ ಶಿಷ್ಯರನ ಪಡೆದು ಅ- ।
ವರ ಗುರುಭಾವನೆ ಇದ್ದನಿತು ।
ಅರುಹಿ ಮೂಲರಾಮನ್ನ ಚರಣವನ್ನು ಭಜಿಸೆ ।
ಧರೆಯೊಳಗಿಟ್ಟು ಇಹಪರದಲ್ಲಿ ಬೋಧವೆಂಬೊ ।
ಚರಿತೆಯನ್ನು ತೋರಿಸಿ ಮರಳೆಸುರರು ಕುಸುಮ ।
ವರುಷವಗರೆಯಲು ಬದರಿಗೆ ಪೋಗುತೆ ದಿವ್ಯ ।
ಕರಬೀಸಿ ಸತ್ಯತೀರ್ಥರ ತಿರುಗಿ ಸ್ಥಳ ಕಟ್ಟಿದೆ ।
ನಿರುತ ವೇದವ್ಯಾಸನ್ನ ಕರುಣವೆ ಸಂಪಾದಿಸಿ ।
ವರವಿದ್ಯಾ ಓದುವ ರಮುಗುರುವೆ ಸತ್ಯ ।
ಕರದಂಡವನ್ನು ತಿರುಹಿ ನೆಲ್ಲು ಬೆಳೆವ ಪರಿ ಮಾಡಿದ ಶಕ್ತ ।
ಪರಮಜ್ಞಾನಿ ವಿರಕ್ತ ಯರಗೂವೆ ನಿನ್ನ ಲೀಲೆ ।
ಅರಿತಷ್ಟು ಪೇಳಿದೆ ಹಿರಿದುವರ್ಣಿಸೆ ನಮ್ಮ ।

ಹಿರಿಯರು ಬಲ್ಲರಯ್ಯಾ ತರುಳತನದಲಿಂದ ।
ಗಿರಿಯ ಧುಮುಕಿದವನೆ ಸರಿಗಾಣೆ । ನಿನಗೆಲ್ಲಿ ।
ಸರಿಗಾಣೆ ನಿನಗೆಲ್ಲಿ ಎರವು ಮಾಡದೆ ಎನ್ನಂ ।
ತರಯಾಮಿಲಿಪ್ಪನೆ ಪರಿಪಾಲಿಸು ನಿಜ– ।
ಶರಣರೊಳಗೆ ಇಟ್ಟು ಜರಮರಣರಹಿತ ವಿಜಯವಿಠ್ಠಲನ್ನ ।
ಎರಡೊಂದವತಾರ ಧರಿಸಿದ ಧರ್ಮಶೀಲಾ ॥ ೭ ॥

**ಜತೆ**

ಅದ್ವೈತಮತ ಕೋಲಾಹಲ ರಿಪುಮಸ್ತಕ ಶೂಲಾ ।
ಮಧ್ವರಾಯಾ ವಿಜಯವಿಠ್ಠಲನ್ನ ಮಹಾಪ್ರಿಯಾ ॥ ೮ ॥

* * *

## ೭ – ಯತಿವರರ ಸ್ತೋತ್ರ

**ದಾಸರಾಯರು ಈ ಭಾಗದ ಸುಳಾದಿಯಲ್ಲಿ ನಾಲ್ಕು ಜನ ಯತಿಪುಂಗವರ ಸಂಗ್ರಹವಾದ ಚರಿತ್ರೆಯನ್ನು ಹೇಳುತ್ತ, ಲೋಕಕ್ಕೆ ಅವರಿಂದಾದ ಮಹೋಪಕಾರವನ್ನು ವರ್ಣಿಸುತ್ತಾರೆ. ಇಂತಹ ಮಹಾಮಹಿಮರ ಸ್ಮರಣೆಯಿಂದ ನಮ್ಮ ದುರಿತಗಳು ದೂರಾಗಿ ಶಾಶ್ವತ ಸುಖದ ದಾರಿ ಸುಗಮವಾಗುತ್ತದೆ.**

### ಶ್ರೀಜಯರಾಯರ ಸ್ತೋತ್ರ



**ಇಂದ್ರಾಂಶರಾದ ಯೋಗಿಶ್ರೇಷ್ಠರಾದ ಶ್ರೀಮಜ್ಜಯತೀರ್ಥರು ಶೇಷಾವೇಶರು. ತಮ್ಮ ಭಜಕರ ಭವಭಯವನ್ನು ಪರಿಹರಿಸಿ ಜ್ಞಾನ ವೈರಾಗ್ಯದೊಡನೆ ಹರಿಭಕ್ತಿಯನ್ನು ಕೊಟ್ಟು ಕಾಪಾಡುತ್ತಾರೆ.**

ಸದ್ಗುಣಶೀಲ ಸುಜನಪಾಲರಾದ ಇವರ ಸಂದರ್ಶನವು ಸಕಲ ತೀರ್ಥಯಾತ್ರೆಯ ಫಲಕ್ಕಿಂತ ಅಧಿಕವಾದದ್ದು. ದೇವಾಂಶರಾದ ಇವರ ಸ್ವರೂಪವನ್ನು ಭಾವದಿಂದ ತಿಳಿದುಕೊಂಡಾಡಿದವನೇ ಧನ್ಯ. ಮಾನ್ಯ ವೈಷ್ಣವ ಜನ್ಮ ಬಂದು ವಿಷ್ಣು ಭಕುತಿ ದೊರಕಿದುದೇ ಸಾಧನ. ಇದರಿಂದ ಕಷ್ಟ–ನಷ್ಟಗಳೆಲ್ಲವೂ ದೂರಾಗುವುವು.

ವೈಷ್ಣವಾಚಾರ್ಯರ ಮತೋದ್ಧಾರಕರಾದ ಜಯರಾಯರು ಭ್ರಷ್ಟವಾದಿಗಳನ್ನು ನುಗ್ಗಲೊತ್ತಿ ಶ್ರೀಹರಿಯ ಜಗಜ್ಜನ್ಮಾದಿ ಅಷ್ಟಕರ್ತೃತ್ವವನ್ನು ಸ್ಥಾಪಿಸಿ ಮೆರೆದ ಧೀರರು. ಇವರ ದರ್ಶನವಾಗದೇ ಸ್ಪಷ್ಟವಾದ ಜ್ಞಾನೋದಯವಾಗದು.

ಆಚಾರ್ಯ ಮಧ್ವರ ೧೮ ಗ್ರಂಥಗಳಿಗೆ ಟೀಕಾಗ್ರಂಥಗಳನ್ನು ಹಾಗೂ ನಾಲ್ಕು ಸ್ವತಂತ್ರ ಗ್ರಂಥಗಳನ್ನು ರಚಿಸಿದ್ದಾರೆ. ಇದರಿಂದ ಇವರಿಗೆ "ಟೀಕಾಕೃತ್ಪಾದ" ಎಂಬ ಹೆಸರು ಅನ್ವರ್ಥಕ.

ಶ್ರೀ ಸರ್ವಜ್ಞಕಲ್ಪತರು, ಶಾಸ್ತ್ರೀಯ ಪ್ರಪಂಚದ ಸೀಮಾಪುರುಷರು ಎನಿಸಿದ ಶ್ರೀ ಟೀಕಾಚಾರ್ಯರು ಶ್ರೀಮಧ್ವಾಚಾರ್ಯರ ಅನುವ್ಯಾಖ್ಯಾನಕ್ಕೆ ಬರೆದ ಟೀಕಾಗ್ರಂಥವಾದ "ಶ್ರೀಮನ್ನ್ಯಾಯಸುಧಾ" ಇವರ ಕಲಶಕೃತಿ.

ಈ ಮುನಿಯೊಲಿದವನೇ ಭಾಗ್ಯವಂತ, ಭೀಮಭವಾಂಬುಧಿಯು ಬತ್ತಿ ಹೋಗುವುದು ಎಂಬ ಮುಂತಾದ ವಿಷಯವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.

## ಸುಳಾದಿ – ೭೬

### ॥ ರಾಗ ತೋಡಿ – ಧ್ರುವ ತಾಳ ॥

ಜಯರಾಯ ಜಯರಾಯ ಜಯದೇವಿ ಅರಸನ್ನಾ– ।
ಶ್ರಯ ಮಾಡಿಕೊಂಡಿಪ್ಪ ತಪೋವಿತ್ತಪ ।
ಭಯವ ಪರಿಹರಿಸಿ ಭವದೂರರ ಹರಿಭ– ।
ಕ್ತಿಯ ಕೊಡು ಜ್ಞಾನವೈರಾಗ್ಯದೊಡನೆ ।
ದಯದೃಷ್ಟಿಯಿಂದ ನೋಡು ಕಾಪಾಡು ಮಾತನಾಡು ।
ಲಯವಿವರ್ಜಿತವಾದ ವೈಕುಂಠಕೆ ।
ಸ್ವಯಮಾಗಿ ಮಾರ್ಗ ತೋರು ಸಜ್ಜನರೊಳಗಿಟ್ಟು ।
ಜಯವ ಪಾಲಿಸು ಎನಗೆ ಯತಿಕುಲರನ್ನ ।
ಅಯುತಕ್ಕಾದರು ನಾನು ಐಹಿಕ ಸೌಖ್ಯವನೊಲ್ಲೆ ।
ಬಯಸುವೆ ಸತತದಲ್ಲಿ ಹರಿಯ ನಾಮ ।
ತ್ರಯಗಳೆ ನಾಲೆಗೇಲಿ ನೆನೆದು ನೆನೆದು ಕರ್ಮ– ।
ಕ್ಷಯವಾಗುವಂತೆ ಕ್ಷಿಪ್ರದಲ್ಲಿ ಬಿಡದೆ ।
ಪ್ರಯತ್ನವೆಂಬೋದಿದಕೆ ಸಾರ್ಥಕವಾಗಲಿ ।
ಪಯೋನಿಧಿ ಸುತೆ ರಮಣ ಮನದೊಳು ನಿಲ್ಲಲು ।
ಪಯಃ ಪಾನದಿಂದಧಿಕ ನಿಮ್ಮ ದರುಶನ ಎನಗೆ ।
ಪ್ರಿಯ ಮತ್ತೊಂದಾವದಿಲ್ಲ ಇದೇ ಬಲು ಲಾಭ ।

ಗಯ ಕಾಶಿ ತ್ರಿಸಂಗಮ ಮೊದಲಾದ ತೀರ್ಥಕ್ಷೇತ್ರ ।
ನಯದಿಂದ ಮಾಡಿದ ಫಲವೊಪ್ಪುದು ।
ಪಯೋಧರಗಳ ತಿನದಂತೆ ಮಾಳ್ಪುದು ಹೃ- ।
ದಯದೊಳಗಿಪ್ಪದೆನೆಗೆ ಇದೇ ಏಕಾಂತ ।
ಭಯ ಕೃದ್ಭಯನಾಶ ವಿಜಯವಿಠ್ಠಲನ ಸೇ- ।
ವೆಯ ಮಾಡುವ ಸದ್ಗುಣ ಶೀಲ ಸುಜನ ಪಾಲಾ ॥ ೧ ॥

## ಮಟ್ಟ ತಾಳ

ಆವ ಜನುಮದ ಪುಣ್ಯಾ ಲಭಿಸಿತು ಎನಗಿಂದು ।
ರಾವುತನಾಗಿದ್ದ ಜಯ ತೀರ್ಥರ ಕಂಡೆ ।
ದೇವಾಂಶರು ಇವರ ಸ್ವರೂಪವನ್ನು ।
ಭಾವದಿಂದಲಿ ತಿಳಿದು ಕೊಂಡಾಡುವ ಬಲುಧನ್ಯ ।
ಪಾವಿನ ಪರಿಯನ್ನು ಇಲ್ಲಿ ಇರುತಿಪ್ಪ ।
ಕಾವುತ ಭಕುತರ ಪಾವನಗೈ ಸುವ ।
ದೇವ ದೇವೇಶ ಸಿರಿ ವಿಜಯವಿಠ್ಠಲನಂಘ್ರಿ- ।
ತಾವರೆ ಭಜಿಸುವ ನಿಷ್ಕಾಮುಕ ಮೌನಿ ॥ ೨ ॥

## ತ್ರಿವಿಡಿ ತಾಳ

ವೈಷ್ಣವ ಜನ್ಮ ಬಂದುದಕಿದೇ ಸಾಧನ ।
ವಿಷ್ಣುವಿನ ಭಕುತಿ ದೊರಕಿದುದಕೆ ।
ನಷ್ಟವಾಯಿತು ಎನ್ನ ಸಂಚಿತಗಾಮಿ ಕರ್ಮ ।
ಕಷ್ಟ ದಾರಿದ್ರಗಳು ಹಿಂದಾದವೋ ।
ತುಷ್ಟನಾದೆನು ಎನ್ನ ಕುಲಕೋಟಿ ಅಹಿತ ಅ – ।
ರಿಷ್ಟಮಾರ್ಗಕೆ ಇನ್ನು ಪೋಗೆ ನಾನು ।
ಸೃಷ್ಟಿಯೊಳಗೆ ಇವರ ದರ್ಶನ ವಾಗದಲೆ ।
ಸ್ಪಷ್ಟವಾದ ಜ್ಞಾನ ಪುಟ್ಟದಯ್ಯಾ ।
ಇಷ್ಟುಕಾಲ ಬಿಡದೆ ಮುಂದೆ ಮಾಡುವ ಬಲು – ।
ನಿಷ್ಟಗೆ ಅನುಕೂಲ ತಾತ್ವಿಕರು ।
ಶಿಷ್ಟಾಚಾರವನ್ನು ಮೀರದಲೆ ನಿಮ್ಮ ।
ಇಷ್ಟಾರ್ಥ ಬಯಸುವದು ಉಚಿತದಲ್ಲಿ ।
ವೈಷ್ಣವಾಚಾರ್ಯರ ಮತ ಉದ್ಧಾರ ಕರ್ತ ।
ಭ್ರಷ್ಟ ವಾದಿಗಳನ್ನು ನುಗ್ಗಲೊತ್ತಿ ।
ಕೃಷ್ಣ ವಂದಿತ ನಮ್ಮ ವಿಜಯ ವಿಠಲ ರೇಯನ ।
ಅಷ್ಟ ಕರ್ತೃತ್ವ ಸ್ಥಾಪಿಸಿದ ಧೀರ ॥ ೩ ॥

**ಅಟ್ಟ ತಾಳ**

ಕುಶರಾಯ ಇಲ್ಲಿ ತಪಸು ಮಾಡಿದಂಥ
ವಸತಿಯ ನೋಡಿ ದಿಗ್ದೇಶ ಜಯಸಿ ಮಾ – ।
ನಸದಲ್ಲಿ ತಿಳಿದು ಅಕ್ಷೋಭ್ಯ ತೀರ್ಥರು ಇಲ್ಲಿ ।
ನಸುನಗುತಲೆ ವಾಸವಾದರು ಬಿಡದಲೆ ।
ಋಷಿ ಕುಲೋತ್ತಮರಾದ ಜಯರಾಯರು ನಿತ್ಯ ।
ಬೆಸನೆ ಬೆಸನೆ ಬಂದು ಗುಪ್ತದಲ್ಲಿ ಪೂ –।
ಜಿಸುವರು ಪ್ರೀತಿಲೆ ಏನೆಂಬೆ ನಾ ಚರ್ಯ ।
ಶಶಿ ವರ್ಣದಂತೆ ಪೊಳೆವ ದರುಶನ ಗ್ರಂಥ ।
ರಸ ಪೂರಿತವಾಗಿ ವಿಸ್ತರಿಸಿದರು ವಿ –।
ಕಸಿತವ ಮಾಡಿ ಕರದ ಕನ್ನಡಿಯಂತೆ ।
ಕುಶಲ ಮಾನವರಿಗೆ ಜ್ಞಾನಹೆಚ್ಚುವಂತೆ ।
ವಸುಧೆ ಯೊಳಗೆ ನಮ್ಮ ವಿಜಯ ವಿಠಲರೇಯನ ।
ವಶವಾಗುವದಕ್ಕೆ ಪ್ರಸಾದ ಮಾಡಿದರು ॥ ೪ ॥

**ಆದಿ ತಾಳ**

ಈ ಮುನಿ ವೊಲಿದರೆ ಅವನೆ ಭಾಗ್ಯವಂತ ।
ಭೂಮಿಯೊಳಗೆ ಮುಕ್ತಿ ಯೋಗ್ಯ ನೆನಿಸುವನು ।
ಭೀಮ ಭವಾಂಬುಧಿ ಬತ್ತಿ ಪೋಗುವದು ನಿ –।
ಸ್ಸೀಮನಾಗುವ ಪಂಚ ಭೇದಾರ್ಥ ಪ್ರಮೇಯದಲ್ಲಿ ।
ತಾಮಸ ಜನರಿಗೆ ಭಕ್ತಿ ಪುಟ್ಟದು ದುಃ –।
ಖ ಮಹೋದಧಿಯೊಳು ಸೂಸುತಲಿಪ್ಪರು ।
ಸ್ವಾಮಿ ಈಗಲೆ ಬಂದು ದುರುಳ ಮನುಜನ ನೋಡಿ ।
ನಾ ಮೊರೆ ಇಡುವೆನು ಕಾಯೊ ಕರುಣದಲ್ಲಿ ।
ಯಾಮಯಾಮಕೆ ನಿಮ್ಮ ಸ್ಮರಣೆ ಪಾಲಿಸಿ ಉ–।
ತ್ತಮ ಬುದ್ಧಿ ಕೊಟ್ಟು ಕೃತಾರ್ಥನ್ನ ಮಾಡು ।
ರಾಮ ಸುಗುಣಧಾಮ ವಿಜಯ ವಿಠಲರೇಯನ್ನ ।
ನಾಮ ಕೊಂಡಾಡುವ ಟೀಕಾಚಾರ್ಯ ॥ ೫ ॥

**ಜತೆ**

ಮೇಘನಾಥ ಪುರ ಕಕುರ ವೇಣಿವಾಸ ।
ರಾಘವೇಶ ವಿಜಯ ವಿಠಲನ್ನ ನಿಜದಾಸ ॥ ೬ ॥

* * *

# ಶ್ರೀ ಶ್ರೀಪಾದರಾಜರ ಸ್ತೋತ್ರ



ದೃಢಭಕುತಿಯಿಂದ ಶ್ರೀ ಶ್ರೀಪಾದರಾಜರ ಶ್ರೀಪಾದಕಮಲವನ್ನು ನೆರೆನಂಬಿದವನ ಭಾಗ್ಯ ಅಪಾರ, ಸ್ವಲ್ಪವೂ ಕೊರತೆ ಕಾಣದು. "ಗೋಪಾದ ಉದಕದೊಳು ರತುನ ದೊರಕಿದಂತೆ। ಪ್ರಾಪುತವಾಗುವದು ಬಾಹೀರಂತರ ಸೌಖ್ಯ" ಎನ್ನುತ್ತಾರೆ ದಾಸರು.

ಭಕುತಿ ಬೇಕಾದವನು ರಾಗದ್ವೇಷಾದಿಗಳನ್ನು ನೀಗಿ ಇವರ ಪಾದ ಪದುಮದಲ್ಲಿ ದೃಢವಾದ ನಂಬಿಗೆಯನ್ನಿಟ್ಟರೆ ಮುಕುತಿ ಮಾರ್ಗಕ್ಕೆ ಅನುಮಾನವೇ ಇಲ್ಲ. ಕಾರಣ ಸುಜನರು ಕಂಡಲ್ಲಿ ತಿರುಗಿ ದಣಿಯುವುದು ವ್ಯರ್ಥ. ಅನ್ಯಮಾರ್ಗಕ್ಕಾಗಿ ಎಂದೂ ಹಂಬಲಿಸಬಾರದು.

ಅರುಣೋದಯದಲ್ಲೆದ್ದು ಶ್ರೀಪಾದರಾಜರನು ಸ್ಮರಿಸಿದ ಮಾನವನು ಜೀವನದಲ್ಲಿ ಸರ್ವಸಾಧನೆಯನ್ನು ಪಡೆದು ಪರಗತಿಯನ್ನು ಹೊಂದುವುದು ನಿಶ್ಚಯ. ಎಂದು ನುಡಿಯುತ್ತ ದಾಸರಾಯರು "ಧ್ರುವನೇ ಇವನೆಂದು ನಿಶ್ಚಯವಾಗಿ ನಂಬಿದ ಮಾನವನ ಭವರೋಗವನ್ನು ಕಳೆದು ಪರಮಾತ್ಮನು ಒಲಿಯುತ್ತಾನೆ" ಎಂಬುದಾಗಿ ಇಲ್ಲಿ ಹೇಳಿದ್ದಾರೆ.

## ಸುಳಾದಿ – ೭೭

॥ ರಾಗ– ರೇಗುಪ್ತಿ– ಧ್ರುವ ತಾಳ ॥

ಶ್ರೀಪಾದರಾಯ ಗುರುವೆ ದೃಢಭಕುತಿಯಿಂದ ನಿಮ್ಮ ।
ಶ್ರೀಪಾದ ಪದುಮವನ್ನು ನೆರೆನಂಬಿದವನ ಭಾಗ್ಯ ।
ಅಪಾರವಲ್ಲದೆ ಲೇಶ ಕೊರತೆ ಇಲ್ಲ ।
ಗೋಪಾದ ಉದಕದೊಳು ರತುನ ದೊರಕಿದಂತೆ ।
ಪ್ರಾಪುತವಾಗುವದು ಬಾಹೀರಂತರ ಸೌಖ್ಯ ।
ಲೋಪವಾಗದು ಒಂದು ಇಷ್ಟಾರ್ಥ ಪ್ರತಿದಿನ ।
ಆಪರ್ಥ ಎನಿಸದು ಪೇಳಿದವಚನಂಗಳು ।

ಆಪವರ್ಗಕೆ ಮಾರ್ಗ ಕೇವಲ ಖ್ಯಾತಿಯಾಗಿ ।
ತಾಪಸಿಯಾಗುವನು ಜನುಮಜನುಮವ ಬಿಡದೆ ।
ಗೋಪಾಲಕೃಷ್ಣನ ಗುಣವೆಕೊಂಡಾಡುತ ।
ಆಪಾದ ಮೌಳಿ ಪರಿಯಂತ ನೋಡುವ ಮಹ- ।
ಪಾಪರಹಿತರಾಗಿ ಸಂಚರಿಸುವರು ನಿತ್ಯ ।
ಪ್ರಾಪುತವಲ್ಲದೆ ಒಂದಾದರವರಿಗೆ ।
ಭೂಪಾರ ಬೇಡಿದ ಮನೋರಥಂಗಳು ।
ಶ್ರೀಪಾದರಾಯ ಶಿರಿ ನಾರಾಯಣಯೋಗಿ ।
ಈಪರಿ ಸ್ಮರಿಸಿದ ಜನರ ಸಂಗದಲ್ಲಿದ್ದ ।
ಆ ಪುಣ್ಯಪುರುಷನಿಗೆ ಕೈವಲ್ಯ ಇದ್ದಲ್ಲಿಗೆ ।
ಪೋಪಾದಲ್ಲದೆ ಅವನ ಆಯುಷ್ಯ ವ್ಯರ್ಥವಾಗಿ ।
ಭಾಪು ಇವರ ಬಿರುದು ಪೊತ್ತುತಿರುಗಿದರೆ ।
ಶಾಪಾದಪಿ ಶರಾದಪಿ ಎನಿಸಿಕೊಂಬ ।
ದೀಪದ ಬೆಳಕಿನಲ್ಲಿ ಸರ್ವವು ಕಂಡಂತೆ ।
ವ್ಯಾಪುತದರ್ಶಿಯಾಗಿ ಯೋಗ್ಯತದಂತೆ ಕಾಂಬ ।
ದ್ವಿಪಾದಪಶುಗಾಣೊ ಈ ಮುನಿಯ ನಂಬದವ ।
ಕೂಪಾರವೆಂಬು ಮಹ ಘೋರದೊಳಗೆ ಇಪ್ಪ ।
ಆಪತ್ಕಾಲ ಮಿತ್ರ ವಿಜಯ ವಿಠಲರೇಯನ ।
ವ್ಯಾಪಾರವನ್ನೆ ನೆನೆದು ನಲಿನಲಿದಾಡುವ ॥ ೧ ॥

**ಮಟ್ಟ ತಾಳ**

ಭಕುತಿ ಬೇಕಾದವರು ಇವರ ಪಾದದಲ್ಲಿ ।
ಸಕಲಕಾಗೆ ಇದೇ ಸಾಧ್ಯವೆ ನಮಗೆಂದು ।
ಸಕುತನಾಗಲಿಬೆ ಕು ರಾಗಂಗಳ ತೊರೆದು ।
ಮುಕುತಿ ಮಾರ್ಗಕೆ ಇನ್ನು ಯಾತಕೆ ಅನುಮಾನ ।
ಕಕುಲಾತಿಯಿಂದ ಕಂಡಲ್ಲಿ ತಿರುಗಿ ।
ಹಕ್ಕಲ ಮನಸಿನಲ್ಲಿ ಕೆಟ್ಟು ಪೋಗದಿರಿ ।
ಲಕುಮಿರಮಣ ನಮ್ಮ ವಿಜಯ ವಿಠಲರೇಯನ ।
ಭಕುತರೊಳಗೆ ಮಹಮಹಿಮೆ ಎನಿಸಿಕೊಂಬಾ ॥ ೨ ॥

**ತ್ರಿವಿಡಿ ತಾಳ**

ನಂಬಿರೋ ಶ್ರೀಪಾದರಾಯರ ಚರಣವ ।
ಹಂಬಲೀಸದೀರಿ ಅನ್ಯಮಾರ್ಗ ।
ತುಂಬಿ ತುಳುಕುತಿಪ್ಪದು ಇಹಪರದ ಭಾಗ್ಯ ।

ಉಂಬುವದುಡುವದು ಅಡಿಗಡಿಗೆ ।
ಡಿಂಬದೊಳಗೆ ಹರಿಯ ಧ್ಯಾನಂಗತವಾಗಿ ।
ಕಾಂಬುವ ಲೇಶ ಪಾಪಂಗಳಿಲ್ಲದೆ ।
ಗಂಭೀರ ಸಂಸಾರವಾದದು ಅದೆ ಅವಗೆ ।
ಇಂಬುಗೊಡುವದು ವೈದಿಕವೆನಿಸಿ ।
ಅಂಬುಜಸಖ ತೇಜ ವಿಜಯವಿಠಲರೇಯ ।
ಬೆಂಬಿಡದೆ ಭಜಿಸಬೇಕು ಈ ಪರಿಯಲ್ಲಿ ॥ ೩ ॥

**ಅಟ್ಟ ತಾಳ**

ಇವರ ಪ್ರಸಾದವಾದರೆ ವ್ಯಾಸಮುನಿರಾಯಾ ।
ಕವಿರಾಯ ಪುರಂದರದಾಸರು ಮೊದಲಾ– ।
ದವರ ಕರುಣವನ್ನು ಸಿದ್ಧಿಸುವದು ಕೇಳಿ ।
ನವಭಕುತಿ ಪುಟ್ಟುವದು ವ್ಯಕ್ತವಾಗಿ ।
ತವಕದಿಂದಲಿ ಚರ್ಮದೇಹ ಬರುವದು ।
ದಿವಿಜರು ವೊಲಿದು ಸತ್ಕರ್ಮ ಮಾಡಿಸುವರು ।
ಸುವಿರುದ್ಧವಾದ ಜನರೆಲ್ಲ ನೆರೆದು ಭಾ–।
ಗ್ಯವನು ಬರಲಿಎಂದು ಕೊಂಡಾಡುವರು ನಿತ್ಯ ।
ಶ್ರವಣಕ್ಕೆ ತೋರುವ ವಿಜಯವಿಠಲರೇಯನ ।
ದಿವಾರಾತ್ರಿಯಲಿ ನೋಡಿ ಸುಜನರ ಕೂಡುವಾ ॥ ೪ ॥

**ಆದಿ ತಾಳ**

ನರಕ ನರಕದಲ್ಲಿ ಹೊರಳುವ ಆಮನುಜ ।
ಧರೆಯೊಳು ಇವರ ಚರಿತೆ ಒಂದೊಂದದ್ಭುತವಾಗಿ ।
ನಿರುತದಲ್ಲಿ ನೋಡೆ ತುಂಬಿ ಸೂಸುತಲಿದೆ ।
ಅರುಣೋದಯದಲೆದ್ದು ಶ್ರೀಪಾದರಾಯರೆಂದು ।
ಸ್ಮರಿಸಿದ ಮಾನವಂಗೆ ಸರ್ವಸಾಧನದಿಂದ ।
ಮರಮಗತಿಯಾದಂತೆ ಆಗುವದು ಸಿದ್ಧ ।
ಪರಿಹಾಸವಲ್ಲ ಕೇಳಿ ಅನುಭವ ತಿಳಿದವಗೆ ।
ಸುರ ಭೂಸುರರ ಪ್ರಿಯ ವಿಜಯ ವಿಠಲನ ।
ಕರುಣದಿಂದಲಿ ಮಹಉನ್ನತದಲ್ಲಿಪ್ಪರೂ ॥ ೫ ॥

**ಜತೆ**

ಧ್ರುವಮರಿಯದಲೆ ಇದನೆ ಓದಿದವಗೆ ಬಂದೆ ।
ಭವರೋಗ ಪರಿಹಾರ ವಿಜಯವಿಠಲ ವೊಲಿವಾ ॥ ೬ ॥

* * *

## ಶ್ರೀ ವ್ಯಾಸರಾಯರ ಸ್ತೋತ್ರ



ದ್ವಾಪರದಲ್ಲಿ ದೇವಋಷಿಗಳಾದ ನಾರದ ಮಹಾಮುನಿಗಳು ನಂದಗೋಪನ ಕಂದ ಇಂದಿರಾರಮಣನನ್ನು ಸಂದರ್ಶಿಸಿ ಹರುಷಿತರಾಗಿ ಹರಿವರ್ಷಖಂಡಕ್ಕೆ ಬರುತ್ತಾರೆ. ಆನಂದದಿಂದ ಗಾಯನ ಮಾಡುತ್ತ ಅಲ್ಲಿದ್ದ ನರಹರಿರೂಪನಿಗೆರಗಿ ತೆರಳಲನುವಾಗುತ್ತಾರೆ. ಆಗ ಅಲ್ಲಿಯೇ ಇದ್ದ ಪ್ರಹ್ಲಾದರಾಜರು ಗುರುಗಳ ಪದಪಲ್ಲವಿಗಳಿಗೆ ವಂದನೆ ಸಲ್ಲಿಸಿ "ತಾವಿಂದು ದ್ವಾರಕೆಯಿಂದ ಬಂದಿರಲ್ಲವೆ? ಅಲ್ಲಿಯ ವಾರ್ತೆಯನ್ನು ತಿಳಿಸಬೇಕು" ಎಂದು ಪ್ರಾರ್ಥಿಸುತ್ತಾರೆ. ಆಗ ನಾರದರು ಶ್ರೀಕೃಷ್ಣನ ಅನಂತಲೀಲಾಮಹಿಮೆಯನ್ನು ವರ್ಣಿಸುತ್ತಾರೆ. ಅದನ್ನು ಕೇಳಿದ ಪ್ರಹ್ಲಾದ ರಾಜರು ಅಹ್ಲಾದದಿಂದ ಮೈಮರೆಯುತ್ತಾರೆ" ನಾನೆಂದಿಗೆ ಕೃಷ್ಣನ ವಂದಿಸುವೆ? ಎಂದು ಮಂದಹಾಸದಿಂದ ಗುರುಗಳನ್ನು ವಿಚಾರಿಸುತ್ತಾರೆ. ಆಗ ನಾರದರು "ಪರಮ ಭಾಗವತ ಶಿರೋಮಣಿಯಾದ ಪ್ರಹ್ಲಾದ, ನೀನು ಶೇಷಾಂಶದಿಂದ ಕಲಿಯುಗದಲ್ಲಿ ಅವತರಿಸಿ, ಮಾರುತ್ತ ಮತದಲ್ಲಿ ಚರಿಸಿ, ಕೃಷ್ಣನ ಪೂಜೆಯನ್ನು ನಿರುತ ಬಿಡದೆ ಮಾಡಿ ಹರುಷ ಪಡು" ಎಂದು ಅನುಗ್ರಹಿಸುತ್ತಾರೆ.

ಶ್ರೀ ಪ್ರಹ್ಲಾದರಾಜರು ವ್ಯಾಸ ಮುನಿಗಳಾಗಿ ಅವತರಿಸಿದ ವಿಷಯವನ್ನು ದಾಸರಾಯರು ಈ ಸುಳಾದಿಯ ಅಟ್ಟ ಹಾಗೂ ಆದಿ ತಾಳಗಳಲ್ಲಿ ಸಂಗ್ರಹವಾಗಿ, ವಾಚ್ಯವಾಗಿ ಹೇಳಿದ್ದಾರೆ.

ಪ್ರಹ್ಲಾದನೇ ವ್ಯಾಸ ಮುನಿಯೇ ರಾಘವೇಂದ್ರರೆಂದು ಭಜಿಸಿದರೆ ಭಗವಂತ ಒಲಿದು ಭವಸಾಗರದಿಂದ ದಾಟಿಸುತ್ತಾನೆ ಎಂದು ದಾಸರಾಯರು ದೃಢನುಡಿಯಲ್ಲಿ ನಿರೂಪಿಸಿದ್ದಾರೆ.

## ಸುಳಾದಿ – ೭೮

**॥ ರಾಗ– ಕಲ್ಯಾಣಿ– ಧ್ರುವ ತಾಳ ॥**

ಒಂದು ದಿವಸ ನಾರಂದ ಮುನೀಶ್ವರ ।
ನಂದಗೋಪನ ಕಂದ ಇಂದಿರಾರಮಣನ ।
ಸಂದರುಶನ ಮಾಡಿ ಬಂದ ಹರಿವರ್ಷ–।
ವೆಂನೆಂಬೊಖಂಡದೊಳಾನಂದ ಗಾಯನದಿಂದ ।
ನಿಂದು ನರ ಮೃಗಗೆ ವಂದಿಸಿ ತೆರಳುತಿರೆ ।
ಅಂದು ಪ್ರಹ್ಲಾದನು ದ್ವಂದ್ವ ಪಾದಕೆರಗಿ ।
ಇಂದು ದ್ವಾರಕ ಪುರದಿಂದ ಪೊರಟು ನಡೆ–।
ತಂದ ವಾರ್ತೆ ಎನಗೊಂದುಸಾಲಿಲ್ಲ ದೀನ್ನ–।
ಬಂಧು ಎನಿಸಿಕೊಂಬ ವೃಂದಾರಕ ಮುನಿ ।
ಮುಂದುಗಾಣದಲೆ ಕಣ್ಣಿಂದ ಬಾಷ್ಪೋದಕ–।
ಬಿಂದುಗಳುದರಿಸುತ ನಂದನಂದನ ಚರಿತೆ ।
ಒಂದೊಂದು ಪೇಳಲದರಿಂದ ಮೈಮರೆದು ಹೋ–।
ಎಂದು ಶಿರವದೂಗಿ ಮುನಿಗೆ ಎರಗಿ ।
ಕಂಧರ ಬಾಗಿ ನಾನೆಂದಿಗೆ ಕೃಷ್ಣನ ।
ವಂದಿಸುವೆನೆನಲು ಮಂದಹಾಸದಿಂದ ।
ಮಂದರೋದ್ಧರ ವಿಜಯವಿಠಲ ಯಶೋದೆ–।
ಕಂದನ ಲೀಲೆಯಾನಂದ ಪೇಳೆನ್ನ ಮುನಿ–।
ಅಂದು ವಿವರಿಸಿದ ಅಂದವಾದ ನಲಿದು ॥ ೧ ॥

**ಮಟ್ಟ ತಾಳ**

ಸಕಲದೇವರೊಳು ರುಕ್ಮಿಣಿ ಅರಸನ್ನ ।
ಸುಖಸಮುದಾಯಕೆ ಅಕಟ ನನೇನೆಂಬೆ ।
ಸಕಲಭೂಷಣ ಸುರನಿಕರ ಸಂದಣಿಯಲ್ಲಿ ।
ಮುಕುತಾಮುಕುತರ ಸೇವಕರ ಕರದಿಂದ ।
ಅಕಳಂಕನಾಗಿ ಸಕಲ ಸೇವಿಯಗೊಂಬ ।
ಮಕ್ಕಳಮಾಣಿಕ ರಂಗ ವಿಜಯವಿಠಲನ್ನ ।
ಭಕುತರೊಳಗ್ರಣಿ ಯುಕುತಿಯಲಿ ಪೇಳಿದನು ॥ ೨ ॥

**ತ್ರಿವಿಡಿ ತಾಳ**

ಹರಿಯ ಪಾದಕ್ಕೆರಗಿ ವರಪ್ರಹ್ಲಾದನು ।
ಎರಡೊಂದು ಮಾರ್ಗದಲ್ಲಿ ಕೃಷ್ಣನ ಮೂರುತಿಯ।

ಪರಿ ಪರಿಯಲ್ಲಿ ಭಜಿಸಿ ಧನ್ಯನಾಗುವೆನೆಂದು ।
ಸುರ ಮುನಿಗೆರಗಿ ನಿಂದಿರಲಾಗಿ ನಾರದ ।
ಕರುಣದಿಂದಲಿ ಉತ್ತರವ ಪೇಳಿದ ನಾ ನೀ–।
ಧರೆಯೊಳು ಜನಿಸುವ ವರವ ಪಡೆದು ಇಪ್ಪೆ ।
ಪರಮ ಭಾಗವತರ ವರಮಣಿಯೆ ನೀನು ।
ಧಾರುಣಿಯೊಳಗವತರಿಸಿ ಅಧಿಕವಾದ ।
ಮಾರುತ ಮತದೊಳಗೆ ಚರಿಸಿ ಕೃಷ್ಣನ ಪೂಜೆ ।
ನಿರುತ ಬಿಡದೆ ಮಾಡಿ ಹರುಷ ಬಡೆಂದೆನಲು ।
ಕರುಣವಾರಿಧಿ ನರಹರಿ ವಿಜಯ ವಿಠಲನ್ನ ।
ಸ್ಮರಿಸಿ ಶೇಷಾಂಶ ಧರಿಸಿ ದೇಹವ ತಾಳ್ದಾ ॥ ೩ ॥

**ಅಟ್ಟ ತಾಳ**

ಬನ್ನೂರು ಸ್ಥಳದಲ್ಲಿ ಜನಿಸಿದರು ಬ್ರ–।
ಹ್ಮಣ್ಯ ತೀರ್ಥರ ಪಾವನ್ನ ಕರದಲ್ಲಿ ।
ಸನ್ಮನವಾಗಿ ಪಾಲನವಾದರು ಮುನಿ–।
ರನ್ನ ಶ್ರೀ ಪಾದರಾಯನ್ನ ಬಳಿಯಲ್ಲಿ ।
ಚನ್ನಾಗಿ ವಿದ್ಯಾ ಸಂಪನ್ನವಾದರು ಬಲು ।
ಅನ್ಯ ಮತವ ಬೇವಾಟನ್ಯ ಮಾಡಿ ಸಂಪ್ರ–।
ಸನ್ನ ಹರಿಯ ಕಾರುಣ್ಯವ ಪಡೆದರು ।
ಚನ್ನಾಗಿ ಕೃಷ್ಣ ಶ್ರೀ ವಿಜಯ ವಿಠಲನ್ನ ।
ಸನ್ನುತಿಸಿ ಧ್ಯಾನವನ್ನೆ ಕೈ ಕೊಂಡ ॥ ೪ ॥

**ಆದಿ ತಾಳ**

ಗುರು ವ್ಯಾಸಮುನಿಯೆಂದು ಧರಣಿಯೊಳಗೆ ಪೆಸರಾಗಿ ।
ನೆರೆದು ಸಜ್ಜನರಿಗೆ ಗರದುನ್ಯಾಯಶಾಸ್ತ್ರ ।
ಅರುಹಿ ವೈಷ್ಣವಮತ ಅದರಿಂದ ಉದ್ಧರಿಸಿ ।
ಪೊರೆದು ನಂಬಿದವರ ಎರಡೊಂದು ಜನ್ಮ ।
ಸುಂದರ ಗರ್ಭದಲಿ ಬಂದು ।
ಪರಿಪೂರ್ಣ ಜ್ಞಾನಭಕ್ತಿ ವೈರಾಗ್ಯದಲ್ಲಿ ನಡದು ।
ಎರಡೊಂದು ಉತ್ತಮ ಗುರುಸಂತತಿಯೊಳಗೆ ।
ಚರಿಸಿ ಚತುರಾಶ್ರಮ ಧರಿಸಿ ಚತುರರಾಗಿ ।
ಭರತ ಖಂಡದೊಳು ಪಸರಿಸಿ ಕೀರ್ತಿಯ ಪಡೆದು ।
ಭರದಿಂದ ವಾಲಗವು ಸುರರಿಂದ ಕೈಕೊಳುತ ।

ಪರಲೋಕದಲಿ ಒಪ್ಪಿ ನಿರಾಮಯ ಗುಣನಿಧಿ ವಿಜಯವಿಠಲರೇಯನ
ನೆರೆನಂಬಿ ಪ್ರತಿದಿನ ಮೆರೆದು ಮೂರ್ಧನ್ಯರಾಗಿ ॥ ೫ ॥

**ಜತೆ**

ಪ್ರಹ್ಲಾದನೇ ವ್ಯಾಸಮುನಿಯೇ ರಾಘವೇಂದ್ರ ।
ಅಹುದೆಂದು ಭಜಿಸಿರೊ ವಿಜಯವಿಠಲವೊಲಿವಾ ॥ ೬ ॥

* * *

## ಶ್ರೀ ವಾದಿರಾಜರ ಸ್ತೋತ್ರ



"ಮಾಧವನಂಘ್ರಿ ಕಮಲವನ್ನು ಮೋದದಿಂದ ನಿತ್ಯವೂ ಭಜಿಸುವ ಸಾಧು ಸನ್ಮುನಿವರ್ಯರಾದ, ಮೋದತೀರ್ಥರ ಪಾದಕಮಲಗಳನ್ನು ಸಾದರದಿಂದ ಭಜಿಸಿ, ಮೇದಿನಿಗೆ ಭಾರವಾದ ಮಾಯಾವಾದಿಗಳನ್ನು ಗೆದ್ದ, ಭಾವಿ ಸಮೀರರಾದ ಶ್ರೀ ಮದ್ವಾದಿರಾಜರ ಮಹಿಮೆಯನ್ನು ವರ್ಣಿಸುವ ಯೋಗ್ಯತೆ ನನಗಿಲ್ಲ" ಎಂದು ಸ್ವಾಹಂಕಾರ ಖಂಡನೆಯೊಂದಿಗೆ ದಾಸರಾಯರು ಈ ಸುಳಾದಿಯನ್ನು ಪ್ರಾರಂಭಿಸುತ್ತಾರೆ.

"ಕಡಲೆ ಸಕ್ಕರೆ ಬೆರೆಸಿದ ಲಡ್ಡುಗೆಯನ್ನು ತುಪ್ಪ ಬೆರೆಸಿ, ನವರತ್ನ ಖಚಿತವಾದ ಬಂಗಾರದ ಹರಿವಾಣದಲ್ಲಿ ಹಾಕಿ, ತಲೆಯ ಮೇಲೆ ಹೊತ್ತು ಕರೆದಾಗ, ಜಗದೊಡೆಯನು ಹಯವದನನಾಗಿ ಬಂದು ಅದನ್ನು ಸವಿದು, ಆನಂದಿಸಿದ ಬಗೆ ವರ್ಣಿಸಲಸದಳ, ತಾಮಸ ಗುಣವುಳ್ಳ ಜನರಿಗೆ ಈ ಮಹಿಮೆಯ ಮರ್ಮ ತಿಳಿಯದು"

ಋಜುಗಳ ಪಂಕ್ತಿಯಲ್ಲಿ ಕುಳಿತ, ನಿಜ ನಿರ್ಮಲ ಸುಜ್ಞಾನ ಧ್ಯಾನದಿಂದ ಜ್ಞಾನ ಪಕ್ವವಾದ ಮನವುಳ್ಳ, ಸುಜನ ಶಿರೋಮಣಿಗಳಾದ ಶ್ರೀಮದ್ವಾದಿರಾಜರನ್ನು ಸಾಮಾನ್ಯರೆಂದು ಎಣಿಸಿದವರನ್ನು ಯಮರಾಜನು ಘನವಾಗಿ ಶಿಕ್ಷಿಸುತ್ತಾನೆ.

ಮೋದ ತೀರ್ಥರ ಮತದ ಸೇನಾಧಿಪತಿಯಾದ ಶ್ರೀ ಮದ್ವಾದಿರಾಜರನ್ನು ಸುಜನರು ದಿನವೂ ಸ್ಮರಿಸಿ ಆನಂದ ಹೊಂದಲಿ.

## ಸುಳಾದಿ – ೭೯

॥ ರಾಗ– ಶಂಕರಾಭರಣ– ಧ್ರುವ ತಾಳ ॥

ಮಾಧವನಂಘ್ರಿ ನಿತ್ಯ ಮೋದದಲ್ಲಿ ಭಜಿಪ ।
ಸಾಧು ಸನ್ಮುನಿವರ್ಯ ಸಮ್ಮೋದ ತೀರ್ಥರ ಪಾದ–।
ಸಾದರದಿಂದ ಭಜಿಸಿ ಮೇದಿನಿಗೆ ಭಾರ–।
ವಾದ ಮಾಯಾವಾದಿಗಳ ಗೆದ್ದ ।
ವಾದಿರಾಜರ ಮಹಿಮೆ ವರ್ಣಿಸಲರ್ಹನಲ್ಲಾ ।
ಮಾಧವ ವೇದವೇದ್ಯ ವಿಜಯವಿಠಲ ತಾನು ।
ಆದರದಿಂದವರ ಭುಜದಿ ಹಯವಕ್ತ್ರನಾಗಿ ।
ಪಾದವನ್ನು ಇಟ್ಟು ಸ್ವಾದವಾದ ಕಡಲೆ ಹೂರಣವನುಂವುಡ ।
ಶ್ರೀಧರನ ಮಹಿಮೆ ಸಾಧುಜನರುಕೇಳಿ ॥ ೧ ॥

### ಮಟ್ಟ ತಾಳ

ಕಡಲಲ್ಲಿ ಪವಡಿಸಿದ ಒಡಿಯ ತಾ ಪೊಡವಿಯಲಿ ।
ಮೃಡನುತ ಗೋವಿಂದ ಜಡ ಥರಿವಾಣದಲಿ ।
ಕಡಲಿ ಸಕ್ಕರೆ ಬೆರೆಸಿ ಲಡ್ಡುಗೆಯಮಾಡಿದ ।
ಸಡಗರದಿಂದ ಭಕ್ಷ ಪಾಯಸ ಘೃತ ನೀಡೆ ।
ಒಡಿಯನು ಬ್ರಹ್ಮಾದಿ ಪರಿವಾರ ಸಹಿತುಂಡು ।
ಕಡಗೋಲು ನೇಣು ಪಿಡಿದುಡು ಪಿಲಿನಿಂದ ।
ಉಡುರಾಜಮುಖ ನಮ್ಮ ವಿಜಯವಿಠಲನು ।
ಬೆಡಗು ಕಾರ್ಯವನ್ನು ನಡೆಸಿದ ಬಗೆ ಕೇಳಿ ॥ ೨ ॥

### ತ್ರಿವಿಡಿ ತಾಳ

ತಾಮಸಗುಣವುಳ್ಳ ಪಾಮರ ಜನರಿಗೆ ।
ಈ ಮಹಿಮೆ ದೊರಕುವುದೇ ಸ್ವಾಮಿ ಸಿಲಕುವನೆ ।
ಕಾಮಿಸಿ ಕೋಟಿ ವರುಷ ನಾಮನುಡಿಯೆ ಪರಂ–।
ಧಾಮ ದೊರಿಯದು ಭೂಮಿಯೊಳಗಿದ್ದ ।
ಭ್ರಾಮಕ ಜನರಿಗೆ ವಾಮದೇವನೆ ಹಿರಿಯನೆಂದು ಬುದ್ಧಿಯ ಕೊಡುವ ।
ಕಾಮಾರಿವಂದ್ಯ ನಮ್ಮ ವಿಜಯ ವಿಠಲನು ।
ಸಾಮಾನ್ಯ ಜನರಿಗೆ ದೊರಕುವನೆ ಕೇಳಿ ॥ ೩ ॥

### ಅಟ್ಟ ತಾಳ

ಅಜ ಸತ್ಯಲೋಕಾಧಿ ಪತ್ಯವನ್ನು ಮಾಡಿ ದಿ–।
ಗ್ವಿಜಯ ಮಾಡಲು ಪುರಕೆ ।

ನಿಜ ಸಂಜ್ಞಾನ ಪೂರ್ಣ ಪ್ರಜ್ಞರೆಂಬೋ ಮುನಿಯು ।
ಅಜ ಪದಕೆ ಬಂದು ಅಖಿಳರನಾಳಿದಾ ।
ನಿಜವಾಯು ಹನುಮ ಭೀಮ ಮಧ್ವನೆನಿಸಿದ ।
ವಿಜಯಸಾರಥಿ ಪಾದರಜದ ಮಹಾತ್ಮೆಯಿಂದ ।
ಗಜವೈರಿ ಭಂಜನ ವಿಜಯವಿಠಲನ್ನ ।
ಭಜನಿಯ ಗೈಯುತ ಬಹುಕಾಲದಿ ।
ಋಜುಗಣ ಪಙ್ತಿಯೊಳಗೆ ಕುಳಿತಾ ।
ನಿಜ ನಿರ್ಮಲ ಸುಜ್ಞಾನ ಧ್ಯಾನದಿಂದ ಜ್ಞಾನಪಕ್ವಾದ ಮನವುಳ್ಳ ।
ಸುಜನ ಶಿರೋಮಣಿ ವಾದಿರಾಜನು ತಾ-।
ನಿಜವಾಗಿ ಬೊಮ್ಮಾಂಡ ಪುರಾಣ ಸಾಧಕದಿಂದ ।
ಅಜಪದ ಸಲ್ವದು ಲೇಶ ಸಂಶಯಬೇಡಿ ।
ನಿಜ ನಿಜ ನಿಜವೆಂದು ನಿತ್ಯದಿಕೊಂಡಾಡಿ ॥ ೪ ॥

**ಆದಿ ತಾಳ**

ಮನ ಶುದ್ಧರಾಗಿ ಮಾಧವ ನಂಘ್ರಿಯನು।
ದಿನ ದಿನದಲ್ಲಿ ನಂಬಿ ಕೊಂಡಿಪ್ಪರೆ ।
ಅನವರ ತಾನಂದ ಗುರು ಮಧ್ವರಾಯರು ದಿವ್ಯ-।
ವನಜ ಪಾದಂಗಳ ಸ್ಮರಿಸಲು ।
ಹನುಮೇಶ ನಮ್ಮ ಸಿರಿ ವಿಜಯವಿಠ್ಠಲ ತಾನು ।
ಮುನಿವಾದಿರಾಜರ ಸಾಮಾನ್ಯರಂತೆಂದು ।
ಎಣಿಸಿದವರನ್ನು ಘನವಾಗಿ ಶಿಕ್ಷಿಪ ।
ಇನತನೋದ್ಭವ ಕೋಪದಿಂದೀ ಕಾರಣ ಮಹಿಮಿ-।
ಯನು ಕೊಂಡಾಡಿ ಅನುದಿನ ಸುಜನರು ॥ ೫ ॥

**ಜತೆ**

ಮೋದತೀರ್ಥ ಮತ ಸೇನಾಧಿಪತಿಯಾದ ।
ವಾದಿರಾಜ ಮುನಿಯು ವಿಜಯವಿಠ್ಠಲದಾಸಾ ॥ ೬ ॥

* * *

## ಶ್ರೀ ಪುರಂದರದಾಸರ ಸ್ತೋತ್ರ



ಮಾನವನಾಗಿ ಹುಟ್ಟಿ ಪವಮಾನ ಮತವನ್ನು ನಂಬಿ ಜ್ಞಾನೋಪದೇಶವನ್ನು ಹೊಂದುದಲೇ ಗಾಯನ,

ಧ್ಯಾನ, ತಪಸ್ಸು ಮಾಡುತ್ತಾ ಬಹುಕಾಲ ಬದುಕಿದರೂ ಬಾಣವಿಲ್ಲದ ಬಿಲ್ಲಿನಂತೆ ಫಲವಿಲ್ಲ. ಕಾರಣ ಮಾನವಂತರಾದ ಗುರುಗಳ ಉಪದೇಶ ಬಹು ಮುಖ್ಯ. ದೋಷವರ್ಜಿತರಾದ ಗುರುಗಳ ದಯವಿದ್ದರೆ ಈಶಾನುಗ್ರಹ ಸಿದ್ಧಿ, ಬಾಳು ಸಮೃದ್ಧಿ.

"ಗುರುಗಳೆಂದರೆ ಇವರೆ ಗುರುಗಳು ಎನಗೆ ಕಾಣೋ ।

ಧರೆಯೊಳು ಪುರಂದರದಾಸರೇ ಗುರುಗಳು" "ಅಡವಿಗೆ ಬಿದ್ದವನ ದಾರಿಗೆ ತಂದಂತೆ" "ಮಡುವಿನೊಳು ಬಿದ್ದವಗೆ ನಾವಿ ದೊರಕಿದಂತೆ" ಎಂದು ಮುಂತಾಗಿ ದಾಸರಾಯರು ತಮ್ಮ ಗುರುಗಳಾದ ಶ್ರೀ ಪುರಂದರದಾಸರ ಔದಾರ್ಯಾದಿ ಗುಣಗಳನ್ನು ವರ್ಣಿಸುತ್ತ "ಇಂಥ ಗುರುಗಳು ದೊರೆತದ್ದು ನನ್ನ ಭಾಗ್ಯ" ಎಂಬ ಮುಂತಾದ ವಿಷಯವನ್ನು ಈ ಸುಳಾದಿ ತಿಳಿಸುತ್ತದೆ.

### ಸುಳಾದಿ – ೮೦

॥ ರಾಗ– ನಾಟ–ಧ್ರುವ ತಾಳ ॥

ಗುರುಗಳೆಂದರೆ ಇವರೆ ಗುರುಗಳು ಎನಗೆ ಕಾಣೊ ।
ಧರೆಯೊಳು ಪುರಂದರದಾಸರೆ ಗುರುಗಳು ।
ಮರಳೆ ಮತ್ತೊಬ್ಬಾರುಂಟೆ ಕರುಣಿಸಿ ನೆನೆದಂತೆ ।
ವರಗಳು ಇತ್ತು ನಿತ್ಯ ಪರಿಪಾಲಿಸುವ ಹರಿ–।
ಮರುತನ್ನ ಲೀಲೆಗಳು ಹಿರಿದಾಗಿ ತಿಳಿಪಿ ವಿ–।
ಸ್ತರವಾಗಿ ಎನ್ನಿಂದಾ ಬರಿಸಿದರು ಹರಿಚರಿತೆ ।
ದುರಿತ ಸಂದಣಿಯಲ್ಲಿ ಶೆರೆಬಿದ್ದು ತಪಿಸುತ–।

ಲಿರೆ ನೋಡಿ ಲಾಲಿಸಿದರು ತಮ್ಮ ಕರುಣದಿಂದಾ ।
ಹರಿಯಳೆ ಮರಿ ತಾರುಕ್ಷನ ವನದೊಳು ।
ಇರಲು ಶಳದು ಕಡಿಗೆ ತೆಗೆದಂತೆ ಇಂದಿಗಾ-।
ಗುರು ಶಿರೋಮಣಿ ಎನ್ನ ದುರಿತದಿಂದ ಶಳದು ।
ಪರಮಾರ್ಥದ ಮಾರ್ಗ ಅರಪುಮಾಡೀ ।
ಕರುಣಾಸಾಗರ ನಮ್ಮ ವಿಜಯ ವಿಠ್ಠಲನ್ನ ।
ಸ್ಮರಿಸುವದಕೆ ಜ್ಞಾನವನ್ನೆ ತೋರಿದರೂ ॥ ೧ ॥

**ಮಟ್ಟ ತಾಳ**

ಅಡವಿಗೆ ಬಿದ್ದವನ ದಾರಿಗೆ ತಂದಂತೆ ।
ಒಡಲಿಗೆ ಇಲ್ಲದವನ ಸುಧಿಯೊಳಗಿಟ್ಟಂತೆ ।
ಕೊಡೆ ಇಲ್ಲಾದವಗೆ ಸುರತರು ವಲಿದಂತೆ ।
ನಡಿಯಲರಿಯದವಗೆ ನಡಿಯಕಲಿದಂತೆ ।
ನುಡಿಯಲರಿಯದವಗೆ ನಿಗಮತಿಳಿಸಿದಂತೆ ।
ಮಡುವಿನೊಳು ಬಿದ್ದವಗೆ ನಾವಿದೊರಕಿದಂತೆ ।
ಪೊಡವಿ ಎಡಯವಗೆ ಹರಿವಾಣದೊರೆತಂತೆ ।
ಮುಡಿಯಪೊತ್ತು ಪೋಪಗೆ ಊಟವು ಸಿಕ್ಕಿದಂತೆ ।
ಕಡುರೋಗಾದವಗೆ ಸಂಜೀವನದಂತೆ ।
ಜಡಮತಿ ನಾನಾಗಿ ಪೊಡವಿಯೊಳಗೆ ಭವನ ।
ಒಡನೊಡನೆ ನಿತ್ಯ ಎಡೆಬಿಡದೆ ಇರಲೂ ।
ಕೆಡಿಸುವ ಕಳ್ಳರ ನಡುಪಿ ನುಡಿಯಾ ।
ತೊಡಕಿಸದಾನೆ ಕೈಪಿಡಿದು ಪಾಲಿಸುವಂತೆ ।
ಮೃಡಬಾಂಧವನಾದ ವಿಜಯವಿಠ್ಠಲರೇಯನ ।
ಅಡಿಗಳ ನಾಮವನು ನುಡಿಸಿದರು ವಲಿದು ॥ ೨ ॥

**ತ್ರಿವಿಡಿ ತಾಳ**

ಏನು ಕರುಣಿಗಳೋ ಎಮ್ಮಾ ಗುರುಗಳು ।
ಏನು ಸ್ವಾಭಾವಿತಾನಂದವು ತಿಳಿಯದೂ ।
ಮಾನವ ಯೋನಿಯಲ್ಲಿ ಬಂದು ಬಾಳುವೆಯನ್ನಾ ।
ಮೀನು ಉದಕದೊಳಗಿದ್ದಂತೆ ಮಾಳ್ಪರು ।
ಆನವರಿಗೆ ಲೇಶ ಅಧಿಕರ ಕಾಣೆನೊ ।
ಅನಂತ ಜನ್ಮವಧರಿಸಲೂ ।
ಈ ನಾಡಿನೊಳು ಎನಗೆ ಪ್ರಾಣಕೆ ಬಲುಪರಿ ।

ಏನೇನು ದುರಿತಗಳು ಬಂದಟ್ಟಲೂ ।
ಮಾಣಗಳದು ಎನ್ನಾ ಮಾನಸದರ್ಪಣ-।
ವನು ಇತ್ತರುಮುದದಿಂದ ಕರುಣಿಸೀ ।
ಶ್ವಾನ ಛಳಿಯೊಳಿರೆ ವಜ್ರಕವಚನ್ನು ।
ಮೇಣುದೊರತದ್ದು ನೋಡು ಎನ್ನಾಭಾಗ್ಯಾ ।
ನಾನಾರಿಗಂಜಿನೊ ವಿಜಯ ವಿಠ್ಠಲರೇಯನಾ ।
ಧ್ಯಾನವನು ಮಾಳ್ಪಂಥ ಜ್ಞಾನಿಗಳನುಕಂಡೆ ॥ ೩ ॥

**ಅಟ್ಟ ತಾಳ**

ಗಾನಮಾಡಿದರೇನು, ಧ್ಯಾನಮಾಡಿದರೇನೂ ।
ಕಾನನದೊಳು ಪೋಗಿ ತಪವೆಸೇರಾಲೇನು ।
ಮಾನವನು ಪವಮಾನ ಮತವನಂಬಿ ।
ಜ್ಞಾನ ಉಪದೇಶ ವಾಗದಲೆ ।
ತಾನು ಯೇಸುಕಾಲ ಬದುಕಿದ ಫಲವೇನು ।
ಬಾಣಇಲ್ಲದ ಬಿಲ್ಲಿನಂತೆ ಕಾಣೊ ।
ಮಾನವಂತರಾದ ಗುರುಗಳ ಉಪದೇಶ ।
ವನು ಪಡೆದರೆ ಸ್ನಾನದಿ ವ್ಯಾಪಾರವೇನು ।
ವಾಣಿಪತಿ ಜನಕ ವಿಜಯ ವಿಠ್ಠಲರೇಯಾ ।
ತಾನಾಗಿ ವಲಿವಾ ಗುರುಭಕ್ತಿ ಉಳ್ಳವಂಗೆ ॥ ೪ ॥

**ಆದಿ ತಾಳ**

ಏಸುಬಲ ಇದ್ದರೇನು, ತನ್ನ ಗುರುಗಳ ಬಲಾ ।
ಲೇಸಾಗಿ ಇಲ್ಲದಿರೆ ಒಂದುಫಲನೀಯವೊ ।
ದೇಶದೊಳಗೆ ಉಳ್ಳವರ ಲೇಸುತಪ್ಪಿದರೇನೊ ।
ದೋಷವರ್ಜಿತರಾದ ಗುರುಗಳ ದಯವಿರೆ ।
ಮೋಸವೆಂಬೋದೆಂದಿಗಿಲ್ಲ ದಿನಪ್ರತಿದಿನ ಬಿಡದೆ ।
ಈಶಾನುಗ್ರಹ ಉಂಟು ಸಿದ್ಧಾರ್ಥಎನ್ನಿರೊ ।
ಕಾಶಿಮೊದಲಾದ ಸರ್ವ ಯಾತ್ರಿ ತೀರಥಾ ಮಿಂದು ।
ರಾಶಿ ಹಣಕೂಡಿಸಿ ದಾನವಿತ್ತರನೇಕಾಸಮಾನವಲ್ಲ ಸುಲ-।
ಭಾ ಸುಲಭ ಗುರುಗಳ ಸ್ಮರಣೆಗೆ ಸರಿ ಉಂಟೆ ।
ಕ್ಲೇಶಬಡದೆ ನಿತ್ಯ ಶುದ್ಧಮನದಿ ನಂಬಿರೊ ।
ದಾಸರ ಪ್ರೀಯ ನಮ್ಮ ವಿಜಯ ವಿಠ್ಠಲರೇಯಾ ।
ಲೇಸು ತೋರಿಸುವ ಬಿಡದೆ ಇನಿತುನಡೆದವಗೆ ॥ ೫ ॥

**ಜತೆ**

ಗುರು, ಪುರಂದರದಾಸರ ನೆರೆನಂಬಲೂ ।
ನಿರುತ ಕಲಿತು ವಿಜಯವಿಠ್ಠಲ ವಲಿದಾ ॥ ೬ ॥

* * *

## ಸುಳಾದಿ – ೮೧

"ಲೇಶವಾದರು ಕಾಮಕ್ರೋಧಾದಿಗಳಿಲ್ಲದೆ ವಾಸುದೇವನ ಪಾದಪದುಮಗಳನ್ನು ಹೃದಯದಲ್ಲಿಟ್ಟು ಲೇಸಾಗಿ ಪೂಜಿಸುವ ಶ್ರೀ ಪುರಂದರದಾಸರ ಮಹಿಮೆಗೆ ಸರಿಗಾಣೆನು. ಇವರೇ ನನಗೆ ತಂದೆ, ತಾಯಿ, ಬಂಧು–ಬಳಗ ಸರ್ವಸ್ವ ಇವರಾಡಿದ ಭೂಮಿ, ಇವರಿದ್ದ ಸ್ಥಳ ನನಗೆ ಶ್ವೇತದ್ವೀಪ, ವೈಕುಂಠ, ಅನಂತಾಸನ. ಇವರಿಂದಲೇ ಈ ದೇಹ ಉದ್ಧಾರವಾಗುವುದು. ಇವರ ಪಾದರೇಣು ನನಗೆ ವಜ್ರಪಂಜರ, ಇವರ ಚರಿತೆಯು ನನಗೆ ಪುರಾಣ, ಇವರೇ ನನ್ನ ಮನದೈವ" ಎಂಬುದಾಗಿ ದಾಸರಾಯರು ಈ ಸುಳಾದಿಯಲ್ಲಿ ಶ್ರೀ ಪುರಂದರಾದಾಸರ ಮಹಾಮಹಿಮೆಯನ್ನು ವರ್ಣಿಸಿದ್ದಾರೆ.

**॥ ರಾಗ– ಭೈರವಿ–ಧ್ರುವ ತಾಳ॥**

ದಾಸರ ಮಹಿಮೆಗೆ ಅನಂತ ನಮೊ ನಮೊ ।
ದೇಶದೊಳಗೆಲ್ಲ ಸರಿಗಾಣೆನೋ ।
ವಾಸುದೇವನ ಪಾದ ಹೃದಯಮಧ್ಯದಲಿಟ್ಟು ।
ಲೇಸಾಗಿ ಪೂಜಿಪರು ಭಕುತಿಯಲ್ಲಿ ।
ಲೇಶವಾದರು ಕಾಮಕ್ರೋಧಾದಿಗಳು ಇಲ್ಲಾ ।
ಸಾಸಿರ ಜನ್ಮವೆತ್ತಿ ಬಮ್ದು ಕಾಲಕ್ಕೂ ನಾನು ।
ಈ ಸುಲಭ ಗುರುಗಳಿಗೆ ಆವಲ್ಲಿ ಸರಿಗಾಣೆ ।
ಏಸುಬಗೆಯಿಂದ ಕರುಣವ ಮಾಡುವರು ।
ಈ ಶರೀರವೆ ಅವರ ಸದನದಲ್ಲಿ ಇಪ್ಪ ।
ದಾಸನು ದಾಸರ ಯುಗಳಪಾದಕ್ಕೆ ನಿವಾ–।
ಳಿಸಿ ಬಿಸುಟುವೆನು ಅನಂತ ಜನುಮದಲ್ಲಿ ।
ಈ ಸುಖ ತಪ್ಪದೆ ಏನಗಾಗಲಿ ಬಿಡದೇ ।
ಕೇಶವ ವಿಜಯವಿಠ್ಠಲ ದಯದಿಂದ ।
ದಾಸ ಪುರಂದರ ಗುರುಗಳ ವಲಿಮೇ ॥ ೧ ॥

**ಮಟ್ಟ ತಾಳ**

ಕೇವಲ ದೃಢವಾಗಿ ಶ್ರೀ ವಲ್ಲಭನ ರಾ–।
ಜೀವ ಪಾದವನ್ನು ಭಾವದಲ್ಲಿ ನಿಲಿಸಿ ।

ಪಾವನವಾಗಿಪ್ಪ ಪಾವ ಮಾನಿಮತದ ।
ಕೋವಿದರನುಸರಿಸಿ ದೇವ ವಿಜಯ ವಿಠ್ಠಲ ವಡಿಯನೆ ।
ಸರ್ವಜೀವರಿಗೆ ಭಿನ್ನಾ ದೇವರೆಜಕಕೆಂದು
ದೇವರೆಜಗಕೆಂದೂ ॥ ೨ ॥

### ತ್ರಿವಿಡಿ ತಾಳ

ಈ ಪರಿಯಲಿ ವಿಜಯ ನಗರದಲ್ಲಿ ಇದ್ದು ।
ತಪಿಸಿ ಗಾರಾಗುರುವ ಗುರು ವ್ಯಾಸರಾಯ ಮು-।
ನಿಪನ್ನ ಮನಮೆಚ್ಚುವಂತೆ ಸೋಜಿಗ ತೋರಿ ।
ಭೂಪಾಲಕರ ಮಿಗಿಲಾದವರ ತೃಣವೆಂ-।
ದಾ ಪತಿಕರಿಸದೆ ತುಚ್ಛ್ಯಯಮಾಡಿ ।
ಆ ಪಾರ ಮಹಿಮಿಯ ತೋರುವ ಶ್ರೀ ಹರಿಯ ।
ರೂಪವೆ ಮನದೊಳಗಿಟ್ಟು ನಲಿವಾ ।
ಗೋಪಾಲ ವಿಜಯ ವಿಠ್ಠಲನ ದಾಸರೊಳು ।
ಈ ಪುರಂದರ ದಾಸರಿಗೆ ಸಮನುಂಟೆ ॥೩॥

### ಅಟ್ಟ ತಾಳ

ಇವರಾಡಿದ ಭೂಮಿ ಎನಗದು ವೈ ಕುಂಠ ।
ಇವರಿದ್ದ ಸ್ಥಾನ ಎನಗೆ ಸ್ವೇತದ್ವೀಪ ।
ಇವರಿದ್ದದೆ ಎನಗೆ ಅನಂತಾಸನ ।
ಇವರಿದ್ದ ಅವನಿ ಎನಗೆ ತ್ರೈ ಲೋಕ ।
ಇವರು ಮಾಡಿದ ಲೀಲೆ ಎನಗೆ ವೇದೋಕ್ತಿಯು ।
ಇವರ ಚರಿತೆ ಎಲ್ಲಾ ಎನಗದು ಪುರಾಣ ।
ಇವರ ಪಾದಾಂಗುಟದಲ್ಲಿ ಸರ್ವ ತೀರ್ಥಾ ।
ಇವರ ಪಾದಾಂಗುಟದಲ್ಲಿ ಸರ್ವ ಕ್ಷೇತ್ರಾ ।
ಇವರ ಪಾದರೇಣು ಎನಗೊಜ್ರ ಪಂಜರ ।
ಇವರಿಂದಲಿ ದೇಹ ಉದ್ಧಾರವಾಗೋದು ।
ಇವರ ಪಾದ ಹೆಜ್ಜೆ ಬಿದ್ದಲ್ಲಿ ಈಕಾ-।
ಯವನು ಮಾಡೆ ಹೊರಳಿಸಿ ತೆಗುವೆನೂ ।
ಅವ ನೀಶ ವಿಜಯ ವಿಠ್ಠಲನ್ನ ನಂಬಿದಾ ।
ಹವಣರಾ ಪೊಳವ ಪಾದವನು ಸೇರುವೆನೊ ॥ ೪ ॥

### ಆದಿ ತಾಳ

ತಂದೆ ತಾಯಿಗಳೆ ದಾಸರು, ಬಂಧು ಬಳಗವೆ ದಾಸರು ।
ಹಿಂದೆ ಮುಂದೆ ಕಟ್ಟು ಕಾವಲಿಯಿಂದ ಸಾಕುವರೆ ದಾಸರು ।

ಅಂದು ಇಂದು ಬಿಡದಲೆ ಬಂದ ಬಂಧನಗಳೆಲ್ಲಾ ।
ಪೊಂದ ದಂತೆ ಮಾಡಿ ಪುಣ್ಯ ತಂದುಕೊಡುವರೆ ದಾಸರು ।
ಸಂದಿ ದೇನೊ ಸಂದಿದೇನೊ ಎನ್ನ ಕುಲಸಹಿತ ಪು-।
ರಂದರ ದಾಸರ ಪಾದ ದ್ವಂದ್ವದಲ್ಲಿಗೆ ಪೋಗಿ ।
ಮಂದರಾದ್ರಿ ಧರ ನಮ್ಮ ವಿಜಯ ವಿಠ್ಠಲ ಹರಿಯಾ ।
ಮಂದಿರಕೆ ಸೋಪಾನ ಸಂದೇಹ ತೊಲಗಿತು ॥ ೫ ॥

**ಜತೆ**

ದಾಸರೆ ಮನ ದೈವ, ದಾಸರೆ ಮನದೈವ ।
ದಾಸರಲ್ಲದೆ ಇಲ್ಲಾ ವಿಜಯ ವಿಠ್ಠಲ ಬಲ್ಲಾ ॥ ೬ ॥

* * *

## ಸುಳಾದಿ – ೮೨

**ಪಾತಕಗಳ ಸಮೂಹವಾದ, ಪುಣ್ಯವನ್ನರಿಯದ, ಅವಿದ್ಯಾ ಆವರ್ತವಾದ ಜೀವಿಯು ಮೂರಕ್ಕೆ ವಶನಾಗಿ ಸೋತು ಭವಸಾಗರದಲ್ಲಿ ತಿರುಗುತ್ತಾನೆ. ಯಾವುದಕ್ಕೂ ಹೊಂದದ ಕೇವಲ ಮೂಢ ಮಾನವನಾಗಿ ಮರುಗುತ್ತಾನೆ, ಕೊರಗುತ್ತಾನೆ.**

**ಈ ಭವ ಬಂಧನದಿಂದ ಬಿಡುಗಡೆಯಾಗಲು ಶ್ರೀ ವ್ಯಾಸಮುನಿ ಮುಂತಾದ ಯತಿಪುಂಗವರು, ಮೋದ ಮನಸ್ಸುಳ್ಳ ಶ್ರೀ ಪುರಂದರದಾಸರು ಮೋದ ಮತದ ಸಹಜವಾದ, ಸರಳವಾದ ಸನ್ಮಾರ್ಗವನ್ನು ತೋರಿದ್ದಾರೆ. ದುರುಳರೆದೆ ಮೆಟ್ಟಿ, ದುಃಸಂಗವನ್ನು ಜರೆದು ಹರಿಸರ್ವೋತ್ತಮ, ವಾಯುಜೀವೋತ್ತಮನೆಂದು ಕೂಗುತ್ತ ಹರಿನಾಮ ರಸವೆಂಬುವ ರುಚಿ ಪದಾರ್ಥವನ್ನು ಸವಿದು ಪರಮ ತೃಪ್ತರಾಗಿ ಬಾಳಿದರು, ಬೆಳಗಿದರು. ಧರೆಯ ಸುಜನರಿಗೆ ಉಣಿಸಿದರು, ತಣಿಸಿದರು.**

**ಮೇಧಾವಿಗಳಿಗೂ ಅಧಿಕವೆನಿಸುವ ಶ್ರೀಹರಿಯ ಪಾದಸ್ಮರಣೆ ಎನ್ನುವ ಪರಿಪರಿ ಬಗೆಯು ಆರಾಧನೆಮಾಡಿ ಭಕ್ತಿಯಿಂದ ಬೇಕಾದ್ದನ್ನು ಸವಿದು, ಮಿಕ್ಕ ಪದಾರ್ಥವನ್ನು ಮುಂದಿನವರಿಗಾಗಿ ಈ ಧರೆಯಲ್ಲಿ ಇಟ್ಟಿದ್ದಾರೆ ಜ್ಞಾನಿಗಳು.**

**ಹರಿದಾಸರು ಮಿಗಿಸಿದ್ದ ಪ್ರಸಾದ ನಮಗೆ ದೊರೆತಮೇಲೆ ಚಿಂತೆಯೆ ಇಲ್ಲ. ತನ್ನನ್ನು ಸ್ಮರಿಸಿದ ಭಕ್ತರ ಬಗ್ಗೆ ಭಗವಂತನೇ ಚಿಂತಿಸುತ್ತಾನೆ ಎಂಬುದೇ ಈ ಸುಳಾದಿಯ ಸಂದೇಶ.**

**॥ ರಾಗ ಭೈರವಿ–ಧ್ರುವ ತಾಳ ॥**

ಯಾತರೊಳಗೆ ಗಣನೆ ಎನ್ನಯ ಸ್ವರೂಪ ಬಲು ।
ಜಾತಿಯಲ್ಲಿ ಪುಟ್ಟಿ ಬಂದದಿದಕೋ ।

ಪಾತಕ ಪುಂಜವಾದ ಪಾಮರ ನಾನಾಗಿ ।
ಪೋತ ತನದಾರಭ್ಯ ಪುಣ್ಯ ವರಿಯೇ ।
ಯಾತಕ್ಕೆ ಬಾತಿಯಲ್ಲ ಮೂರಕ್ಕೆ ವಶವಾಗಿ ।
ಸೋತು ತಿರುಗುತಿಪ್ಪೆ ಚಾತುರದಲ್ಲಿ ।
ಚೇತನ ಮತ್ತಾವದೋ ಅವಿದ್ಯಾವರ್ಕವಾಗಿ ।
ಈ ತೆರದಲ್ಲಿ ಬಿಡದೆ ಸುತ್ತಿಪ್ಪ ದದಕೊ ।
ಮಾತು ಒಂದು ಪೇಳುವ ಸ್ವಾತಂತ್ರ್ಯತನ ಕ್ಷಣ–।
ಮಾತುರ ಎನಗುಂಟೆ ಪೇಳಿರಯ್ಯಾ ।
ಭೂತಳ ದೊಳಗಾನು ಜನುಮಜನುಮ ಪಂ–।
ಡಿತ ವ್ಯಾಖ್ಯಾತ ವಿದ್ಯಾ ವಂತನಲ್ಲಾ ।
ನೀತ ಗಾಯಿಕನಲ್ಲಾ ಧರ್ಮದಾನಂಗಳಲ್ಲ ।
ಗಾತುರ ದಂಡಿಸಿ ಯಾತ್ರೆತೀರ್ಥ–।
ವಾ ತಿರುಗಲಿಲ್ಲ ಆಚಾರವಂತನಲ್ಲ ।
ಚಾತುರ್ಮಾಸಾದಿ ಮೃತಗಳೊಂದೂ ಇಲ್ಲ ।
ಯಾತಕ್ಕೆ ಹೊಂದದ ಕೇವಲ ಮೂಢನಾನು ।
ಆತುಮ ಯಾತರದೊ ಆದಿಯಲ್ಲಿ ।
ಮಾತಿಗುತ್ತರನರಿಯೆ ಆರಾರರ್ಚಿಸುವ ಮೂ–।
ರುತಿಯ ನೀಕ್ಷಿಸಿ ಪೇಳಲೋಶವೇ ।
ಸೋತ್ತಮನವನಯ್ಯಾ ಈಪರಿ ನಿರ್ಣಯ–।
ವಾರ್ತೆ ತಿಳಿದು ಪೇಳುವನಾಗೆ ಗು–।
ಪುತದಲ್ಲಿಪ್ಪನು ಬಾಹಿರಕ್ಕೆಬಾರದು ।
ಖ್ಯಾತಿಆಗನು ಕಾಣೊ ಜಗದೊಳಗೆ ।
ಆತುಮಸ್ತುತಿ ಇಲ್ಲ ಒಬ್ಬರ ನಿಂದಿಸನು ।
ವಾತದೇವನ ಮತ ಸಾರಿಯಿಪ್ಪಾ ।
ಈ ತೆರದಲ್ಲಿ ಕಾಲಕಳಿದವನೇ ಧನ್ಯಾ ।
ದಾತನು ಅವ ನಮ್ಮ ಕುಲಕೋಟಿಗೆ ।
ಶಾತಕುಂಭವರ್ನ ವಿಜಯವಿಠಲ ಬೆ–।
ನಾತ್ನು ಕಾವುತಲಿಪ್ಪ ಈ ಪರಿ ಉಳ್ಳವರ ॥ ೧ ॥

**ಮಟ್ಟ ತಾಳ**

ಮೇದಿನಿಯೊಳಗೆಂದು ವ್ಯಾಸಮುನಿ ನಿತ್ಯ ।
ಮೋದ ಮನಸುಳ್ಳ ಪುರಂದರರದಾಸರೂ ।
ವಾದಿರಾಜ ಸ್ವಾಮಿ ಬಲುಜನ ಆದ್ಯರು ।
ಭೇದ ಸಿದ್ಧರು ಶ್ರೀ ನಾರಾಯಣಯೋಗಿ ।

ವೇದ ವೇದಾಂತರು ಇವರು ಕಾಣೊ ।
ಸಾಧು ಜನರು ಎನ್ನಿ ಇವರಿವರಿಂದಲಿ ।
ಆದ ಶಿಷ್ಯರು ಮತ್ತೆ ಕೆಲವರು ನಂದನರು ।
ಮೇಧಾದಿಗೆ ಅಧಿಕ ಎನಿಸುವ ಶ್ರೀಹರಿಯ ।
ಪಾದಸ್ಮರಣೆ ಎಂಬೊ ಪರಿ ಪರಿ ಬಗೆಯಾ-।
ಸಾಧನೆಮಾಡಿ ಭಕುತಿಯಿಂದಲಿ ಬೇ-।
ಕಾದುದನೆ ಸವಿದು ಮಿಕ್ಕಪದಾರ್ಥ ।
ಈಧರೆ ಮೇಲಿಟ್ಟು ಮುಂಣಗತಿ ತಿಳಿದು ।
ಪೋದರು ಸದ್ಗತಿಗೆ ।
ಮಾಧವ ಮೂರುತಿ ವಿಜಯ ವಿಠಲ ಜಗಕೆ ।
ಆದಿದ್ಯೆವವೆಂದು ಕೊಂಡಾಡಿ ನಗುತ ॥ ೨ ॥

### ತ್ರಿವಿಡಿ ತಾಳ

ಹರಿನಾಮ ರಸವೆಂಬೊ ರುಚಿ ಪದಾರ್ಥಂಗಳು ।
ಗುರುವ್ಯಾಸಮುನಿ ಮಿಕ್ಕಾದ ಸುಜನರು ।
ಮರುತ ಪ್ರೇರಣೆಯಿಂದ ಸುರಿದು ಮದವೇರಿದ ।
ಕರಿವಿಂಡಿನಂತೆ ಚರಿಸಿದರು ಕಾಣೊ ।
ದುರುಳರೆದಿಯ ಮೆಟ್ಟಿ ದುಃಸಂಗವನು ಜರಿದು ।
ಹರಿ ಸರ್ವೋತ್ತಮನೆಂದು ಕೂಗುತಲಿ ।
ಹರಿದಾಡಿ ಓಡ್ಯಾಡಿ ಬೀದಿ ಬೀದಿಯೊಳಗೆ ।
ತಿರುಗುತಲಿಪ್ಪ ಕರಿಗಳಂದದಲಿ ।
ಧರೆಮೇಲೆ ಸುರಿದ ಆ ಪದಾರ್ಥದ ಚೂರು ।
ಇರುವು ಮೊದಲಾದ ಜೀವರಾಶೀ ।
ಹರಿದು ಪೋಗುತ ನಿಂದರಿಸಿಕೊಂಡು ಸವಿದುಂಡು ।
ಪರಮ ತೃಪ್ತಿಯಾಗಿ ಬಾಳಿದಂತೆ ।
ಧರೆ ಮೇಲೆ ಕವನ ಪೇಳುವ ಬಲುಜಾಣರು ।
ಅರಿಯರು ಹೊಸಬಗೆ ಮಾತುಗಳು ।
ಪರಿ ಪರಿ ಚಾತುರ್ಯದಿಂದ ಪೇಳಿದ ರೇನು ।
ಹಿರಿಯ ರಂದದ ರೊಳಗಿದು ಸಿದ್ಧವೋ ।
ಇರುವ ಮೆದ್ದದರಿಂದ ಕರಿ ವಿಂಡಿಗೇನು ।
ಕೊರತೆ ಯಾಗದು ಕೇಳಿ ಜ್ಞಾನಿಗಳು ।
ಶರಣರ ಪರಿಪಾಲ ವಿಜಯ ವಿಠಲ ರೇಯ ।
ಎರವು ಮಾಡದೆ ಕಾವಾ ಹಿರಿಯರ ಪೊಹಳಲು ॥೩॥

**ಅಟ್ಟ ತಾಳ**

ವ್ಯಾಸ ಮುನಿ ಮಿಕ್ಕಾದ ಹರಿದಾಸರು ।
ಬೀಸೂರಿಗೆ ಎಣ್ಣುರಿಗೆ ಶಾವಿಗೆ ।
ಸೂಸಲ ಗಡುಬು ಮಂಡಿಗೆ ಭಕ್ಷ ಆಪ್ಪಾಲು ।
ಲೇಸಾದ ಗುಳ್ಳೋರಿಗೆ ಮೆತ್ತನ ದೋಸೆ ।
ರಾಸಿ ದಧ್ಯನ್ನ ಪರಮಾನ್ನಾ ವಾರನ್ನ ।
ಆಸ ರಾಳಿಗೆ ಮತ್ತೆ ಗವಲಿ ಪರಡಿ ಫೇಣಿ ।
ಸೀ ಶಾಖಾ ಮಿಕ್ಕಾದ ಮೊದಲಾದ ಪದಾರ್ಥಂಗಳು ಎಲ್ಲ ।
ತಾ ಸವಿದರು ಅದರೊಳಗೆ ಪುರಂದರ-।
ದಾಸರು ಗೋಘೃತ ವೆಂಬೊದೆ ಭುಂಜಿಸಿ ।
ಈಸು ಜನಂಗಳು ಪರಮ ತೃಪ್ತಿಯಾಗಿ ।
ದೇಶದೊಳ ಗಿದ್ದು ಹೆಚ್ಚಾದವರ ಪೀ-।
ಯೂಷ ಹರಿನಾಮವೆಂಬೊ ಪದಾರ್ಥ ಉ-।
ಳಿಸಿ ಪೋದರು ಕಾಣೊ ಭೇದ ಬಲ್ಲವರಿಗೆ ।
ಲೇಶ ನಾನದರೊಳಗವರವ ಉಂಡದ್ದು ।
ಮೀಸಲವಾಗಿರೆ ನೋಡಿ ತೆಗೆದುಕೊಂಡು ।
ಲೇಸಾಗಿ ಘೃತದ ಸಂಗಡ ಭುಂಜಿಸುವೆನಯ್ಯಾ ।
ಈ ಸುಖ ಕಂಡವರಿಗೆ ದೊರಕುವದೇನೋ ।
ಶಾಶ್ವಿತ ಮೂರುತಿ ವಿಜಯ ವಿಠ್ಠಲರೇಯ ।
ನಾಶ ವಿಲ್ಲದೆ ಜ್ಞಾನಕೊಟ್ಟು ರಕ್ಷಿಸುವ ॥೪॥

**ಆದಿ ತಾಳ**

ಇಂಥ ಹರಿದಾಸರು ಮಿಗಿಸಿದ್ದ ಪ್ರಸಾದ ।
ಇಂತು ಎನಗೆ ಬಂದು ಪ್ರಾಪುತ ವಾದ ಮೇಲೆ ।
ಚಿಂತಿ ಯಾತಕೆ ಮನವೇ ಆನಂದ ತೀರ್ಥರ ।
ಗ್ರಂಥ ದಲ್ಲಿಗೆ ಸಮ್ಮತವಾಗಿ ಇಪ್ಪದು
ಪಂಥವಾಡುವ ಜನರು ಆಡಿಕೊಳ್ಳಲವರ ।
ಪಂಥ ಪೋಗದಲಿರು ಕಂಡರೆ ಕೆಲಸಾರು ।
ಕಂತು ಜನಕ ರಂಗ ವಿಜಯ ವಿಠ್ಠಲ ತಾನೆ ।
ಚಿಂತಿ ಮಾಡುವ ತನ್ನ ನೆನಿಸಿದ ಭಕ್ತನಿಗೆ ॥ ೫ ॥

**ಜತೆ**

ಹರಿ ಪ್ರಸಾದಾದವಗೆ ಆವದಾದರು ಕಡಿಮೆ ।
ನರರಿಗೆ ಆಗುವದೆ ವಿಜಯ ವಿಠ್ಠಲ ಪೊಳಿವಾ ॥ ೬ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ಹರಿಃ ಓಂ॥

# ಕಠಿಣ ಶಬ್ದಾರ್ಥ
## (ಸುಳಾದಿಗಳ ಅನುಕ್ರಮದಂತೆ)

೧

ಶೃಂಗಾರ ಗುಣಾಕಾರ = ಅಲಂಕಾರವೇ ಸ್ವಭಾವವುಳ್ಳ ಆಕಾರ
ದಾನವರ ವಿಪಿನ ಕುಠಾರ = ದೈತ್ಯರೆಂಬ ಅಡವಿಗೆ ಕೊಡಲಿಯಿದ್ದಂತೆ
ಪಾರಾವಾರ = ಸಮುದ್ರ
ವಿನುತಜ ಗಮನಾ = ಗರುಡಗಮನ
ರಸಹೀನವಾಗೆ = ಶಕ್ತಿಗುಂದಲು
ಸುಮನಸರು = ದೇವತೆಗಳು
ಪಶುಪತಿಪಿತ = ರುದ್ರದೇವರ ತಂದೆ ಬ್ರಹ್ಮ
ಸೂಕರ = ವರಹಾ
ಪೊಳವದಾಡಿ = ಹೊಳೆಯುವ ಕೋರೆಹಲ್ಲು
ಕುಕ್ಕಿರಿದು (ಕುಕ್ಕಿ+ಇರಿದು) = ಅಪ್ಪಳಿಸಿ ತಿವಿದು
ಕೋಳಹಾಳ<ಕೋಲಾಹಲ=ಗೊಂದಲ
ಹಲುದುದಿಯಲಿ<ಹಲ್ಲುತುದಿಯಲ್ಲಿ
ವೊಲುವ = ಶಕ್ತನಾದ ಒಪ್ಪುವ
ಕಿಟಿದೇವ = ವರಹಾ
ಕುಂಜರ = ಗಜಾಸುರ
ಗೀರವಾಣ < ಗೀರ್ವಾಣ = ದೇವತೆ
ಪ್ರತಿಸಾರ = ಸಂಕಟ
ಹರಿಸಿದ = ಕಳೆದ, ದೂರಮಾಡಿದ
ಮಂದರ = ಸ್ವರ್ಗ ಮುತ್ತು
ನಾರಂದ < ನಾರದ
ಮಂದಾಕಿನಿ = ಗಂಗಾ
ಉರಗೇಂದ್ರಗಿರಿ = ಈಗಿನ ವೆಂಕಟಗಿರಿ
ಕೋಢ ವೇಷ = ವರಹಾ

೨

ಸಂಸಾರವೃಕ್ಷದ ಮೂಲ = ಲಿಂಗದೇಹ
ಬೇರರಸಿ ಕೀಳು = ಹುಟ್ಟದಂತೆ ಮಾಡು
ಕರಾಳ = ಭಯಂಕರ
ಅಘೋರ = ಸೌಮ್ಯ
ದುರಿತ ಸಂಹಾರ = ಪಾಪ ಕಳೆವ
ಈರೇಳು ಭುವನ = ೧೪ ಲೋಕ
ಮಗುವಿನ = ಪ್ರಹ್ಲಾದನ
ರಕ್ಕಸ = ಹಿರಣ್ಯಕಶ್ಯಪು
ತಗುಲಿ = ಸೇರಿ, ಕೂಡಿ
ಮೌಳಿ = ಒಡೆತನ, ಹಿರಿಯ
ತೂಳಿ < ತೂಲ = ಆಕಾಶ
ಪಂಚಮೌಳಿ = ಸಿಂಹಿ
ಮಾನವ = ನರ
ಲಟಕಟಿಸಿ = ಗಾಬರಿಗೊಳಿಸಿ
ವನಜಜಾಂಡ = ಬ್ರಹ್ಮಾಂಡ
ಕಟಹ = ಖರ್ಪರ
ಪುಟುತ್ತಟದಿ=ಬ್ರಹ್ಮಾಂಡ ಖರ್ಪರವು ಇಬ್ಭಾಗವಾಗಿ ಬಿಚ್ಚುತ್ತಿರಲು
ರಕ್ತಾಕ್ಷಿಯಲ್ಲಿ = ಕೋಪದಿಂದ
ತಟಿತ್ಕೋಟಿ = ಕೋಟಿ ಮಿಂಚು
ಊರ್ಭಟಗೆ = ಜಗತ್ತಿನ ಧೀರರಿಗೆ?
ಅರ್ಭಟ = ಸಡಗರ
ನಿಟಿಲನೇತ್ರ = ರುದ್ರಾತರ್ಂಗತ ನಾರಸಿಂಹ
ಸುರಕಟಕ = ದೇವತಾ ಸಮೂಹ
ತನಿಗಿಡಿ = ಉಜ್ವಲವಾದ ಕಿಡಿ
ಮುಂಜೋಣಿ = ಮುಂಭಾಗದ ಸಾಲು
ಹೊಗರೆದ್ದು = ಸುತ್ತಲೂ ಕಾಂತಿಯನ್ನು ಬೀರಿ
ಅಬ್ಜ = ಚಂದ್ರ
ಅಬ್ಧಿಸಪುತ = ಸಪ್ತಸಾಗರ
ಅಬುಜ = ಬ್ರಹ್ಮ
ಭವಾದಿಗಳ = ರುದ್ರದೇವರೇ ಮೊದಲಾದವರು
ತಬ್ಬಬ್ಬಿಗೊಂಡು = ಗಾಬರಿಗೊಂಡು
ಅಬ್ಬರ = ಕೂಗು
ನಭದ = ಆಕಾಶದ
ಗೂಳೆಯು ತಗಿಯೆ = ಸ್ಥಾನವನ್ನೆಬಿಡಲು
ನಿಬ್ಬರ = ತುಂಬಿದ
ಒಬ್ಬರಿಗೊಶವಲ್ಲದ=ಸರ್ವತಂತ್ರ ಸ್ವತಂತ್ರನಾದ
ಪೊರಮಟ್ಟಾ=ಹೊರಬಂದ, ಪ್ರಾದರ್ಭೂತನಾದ
ತುಡುಕಿ = ಬಲಾತ್ಕರಿಸಿ
ಹೇರೊಡಲ = ದೊಡ್ಡ ಹೊಟ್ಟೆಯ
ಕೂರುಗುರು = ಮೊನಚಾದ ಉಗುರು
ಪಡುವಲಗಡಲ = ಪಶ್ಚಿಮ ಸಮುದ್ರದ
ತಡಿಯ = ತೀರದ

ನಿಡಿಗರುಳು = ದೀರ್ಘವಾದ ಕರುಳು
ಶರಣರವಡೆವೆ = ಭಕ್ತಾಭರಣ
ಮಸಗೆ = ಮುಸುಕಲು
ಚತುರ್ದಶ ಧರಣಿ = ೧೪ ಲೋಕ
ತಲ್ಲಣ = ಗಾಬರಿ, ದುಃಖ
ತನ್ನ ಶರಣನ್ನ = ಪ್ರಹ್ಲಾದನ್ನ
ಸುರರುಪದ್ರ = ದೇವತೆಗಳ ಕಷ್ಟ

೩

ವಯನಾಯಕಾದ್ಯರು = ಗರುಡಾದಿಗಳು
ವ್ಯಯರಹಿತ = ನಾಶರಹಿತ
ಅಯುತಾಯುತ = ೧೦ ಸಾವಿರ
ನಿಯತಾ = ಲಕ್ಷ್ಯ ಸಂಖ್ಯೆ
ಸಯವಾಗಿ = ವಿದ್ಯುತ್‌ಗಳೊಳು ಮಿಂಚಿನಂತೆ
ಕೆಂಗೆಡಿಪದೇನು = ಗಾಬರೆಬ್ಬಿಸುವುದೇನು
ಹುಯಲಿಟ್ಟು = ಗದ್ದಲಮಾಡಿ
ಪಯೋನಿಧಿಸುತೆ = ಲಕ್ಷ್ಮೀದೇವಿ
ಕೈದು<ಕೆಯ್ದು = ಆಯುಧ
ಕಿಂತು ಇಲ್ಲದ = ದೋಷರಹಿತ
ಕರಾಳವಕ್ತ್ರ = ಭಯಂಕರ ಉದ್ದ ಹಲ್ಲುಗಳಿದ್ದ ವದನ
ಕರವಾಳಪಾಣಿ = ಖಡ್ಗ ಹಿಡಿದವ
ನಾಗೋಪದೀತ = ಸ್ವರ್ಗಾಧಿಪತಿ ಇಂದ್ರನ ವಜ್ರಾಯುಧದಂತೆ
ಝುಟ ಶತರೋಮ = ಸೆಟೆದುನಿಂತ ಗಟ್ಟಿಯಾದ ಕೂದಲು
ಕುಚಿತ ಕರ್ನ = ಸಣ್ಣ ಕಿವಿ
ಜ್ವಾಲಾಮಾಲಾ = ತಡೆರಹಿತ ಉರಿ
ಕಣಕಣ ಪ್ರವಾಹ = ಸೂಕ್ಷ್ಮ ಕಿಡಿಯ ಸಾಲು
ಭೃಕುಟಿತಟಿ = ಹುಬ್ಬಿನ ಕೊನೆಯ ಸಾಲು
ತಟಿತ್ಕಾಂತಿ = ಮಿಂಚಿನ ಹೊಳಪು
ಪಟುತರ = ಅತಿ ತೀಕ್ಷ್ಣವಾದ ಸಾಮರ್ಥ್ಯ
ಲಂಘಣೆ < ಲಂಘನೆ = ಉಡ್ಡಾಣ ಹಾರುವುದು
ಧಿಟ = ಧೈರ್ಯ
ಅಧಟ = ಪರಾಕ್ರಮ
ನಿಚ್ಚಟ = ನಿಜ, ವಿಶುದ್ಧ
ಅರ್ಭಾಟ < ಆರ್ಬಟ
ಅಟ್ಟಹಾಸ = ಬಡಿವಾರ, ಬಹಳ ನಗೆ
ಅಚ್ಚಟ = ನರಸಿಂಹನ ಕೋಪವು ನಿರ್ಮಲ ನಿರ್ದುಷ್ಟವಾದ ಸ್ವರೂಪಭೂತ ಜ್ಞಾನಾನಂದಾತ್ಮಕ

ಮಿಟಿಮಿಟಿ = ದಿಟ್ಟಿಸಿ ನೋಡುವಿಕೆ
ನಟನಟಣೆ = ನಟರಾಜನಾದ ಮಹರುದ್ರದೇವನ ನಟನೆಯನ್ನು ಧಿಕ್ಕರಿಸುವಿಕೆ
ಅಬ್ಬರ = ಭಯಾನಕ ಧ್ವನಿ
ಉಲ್ಬಣ = ಕ್ರೌರ್ಯ, ಪೀಡಿಸುವ
ನಿಬ್ಬರ = ನಿರ್ಬರವಾದ, ಬಹಳ ತುಂಬಿದ
ಕಟಿಕಟಿ = ಹಲ್ಲುಗಡಿದು ಧ್ವನಿಮಾಡುವುದು
ಕಾರ್ಬೊಗೆ (ಕಾರ್ = ಹೊಗೆ) = ಕಪ್ಪು ಮೋಡ, ಹೊಗೆ
ಹಬ್ಬಿಗೆ = ಹಬ್ಬಲು
ಮೊಬ್ಬು = ಕತ್ತಲು
ಉಬ್ಬಿಗೆ = ಹೆಚ್ಚಾಗಿ
ಜಬ್ಬಿಗೆ = ಅಧೈರ್ಯದಿಂದ ಶಕ್ತಿಗುಂದಿ
ಲುಬ್ಧ = ಸಿಕ್ಕಿಕೊಂಡ
ಭಟರ + ಶೂರದೈತ್ಯರ,
(ಭಟರ + ಎದೆ = ಭಟರೆದೆ)
ಇಬ್ಬಗೆ = ಭೇದವಾಗಿ, ಒಡೆದು
ಬೊಮ್ಮಾಂಡಕಟಹ = ಬ್ರಹ್ಮಾಂಡ ಖರ್ಪರ
ದಲ್ಲಣ = ಭೇದಿಸುವುದನ್ನು
ಭಟಕಟಕ = ಸೇವಕರಾದ ಭಕ್ತರು, ದೇವತೆಗಳು, ಋಷಿಪುಂಗವರ ಗುಂಪು
ಘೆ, ಉಘೆ, ಭಳಿರೆ, ಪೂತರೆ = ಜಯಜಯಕಾರ ಶಬ್ದಘೋಷ
ಘಟಿತಾ....ಗುಣಪೂರ್ಣ = ಸಮರ್ಥನಾದ, ಅಘಟನಾಘಟನ ಶಕ್ತಿಯುಳ್ಳ ನಿಜವಾದ ಆಶ್ಚರ್ಯ, ಆನಂದಾದಿ ಗುಣಪೂರ್ಣ
ಚಟುಲ = ನರಮೃಗಾಕಾರ (ಘೋರ ರೂಪವಾದರೂ ಸುಂದರಾಂಗ)
ನಿರ್ಜರರ ಕಟಕ = ದೇವತಾಸಮೂಹ
ಲಲೋಭ = ಲೋಭರಹಿತ, ಉದಾರ
ಅವಿರುದ್ಧಾ = ಸತ್ಕರ್ಮಾನುಕೂಲಕ್ಕೆ ಅನುಕೂಲ
ಸುವಿರುದ್ಧಾ = ಯೋಗ್ಯತಾತಿಕ್ರಮಿಸಿ ಮಾಡುವ ಕರ್ಮಾನುಷ್ಠಾನಕ್ಕೆ ಪ್ರತಿಕೂಲ, ಅಭಕ್ತರಾದರೆ ದೈತ್ಯರು ಸತ್ಕರ್ಮಾನುಷ್ಠಾನ ಮಾಡಲು ಅವರಿಗೆ ಪ್ರತಿಕೂಲ
ಕರ್ಮ = ಪ್ರಾರಬ್ಧಾದಿ ಕರ್ಮರಹಿತ
ವಿಕರ್ಮ ವಿದೂರ = ವಿರುದ್ಧವಾದ ಕರ್ಮಗಳಿಂದ ದೋಷದೂರ

ಪುಟಾಂಜುಳಿ < ಪುಟಾಂಜಲಿ = ಅಂಜಲಿಬದ್ಧ
ಕಟಿತರುವಾಯ = ಟೊಂಕದ ಮೇಲಿರುವ ವಿಚಿತ್ರತರವಾದ ರೂಪ

೪

ಇಂದ್ರಾನುಜ = ಉಪೇಂದ್ರ
ಭೂಮಿಸುರಾಗ್ರಣಿ = ಬ್ರಾಹ್ಮಣ ಶ್ರೇಷ್ಠ ಬ್ರಹ್ಮಚಾರಿ
ಮೇಖಳ = ಉಡದಾರ
ಕ್ಷೇತ್ರ = ಭೂಮಿ
ವ್ಯೋಮಗಂಗಾ = ಆಕಾಶಗಂಗಾ
ಸೋಮ = ಚಂದ್ರ
ಸನ್ನಿಭ = ಸದೃಶ
ಭೀಮದೈತ್ಯ = ಭಯಂಕರದೃಶ್ಯ
ಬಲಾರಾತ್ರಿ = ಇಂದ್ರ
ಬಲಿಷ್ಠ = ಬಲವಂತ
ವೆಗ್ಗಳ = ಹಿರಿದಾಗಿ, ಹೆಚ್ಚಾಗಿ
ಅಳುಕು = ಅಂಜು
ಜಲಜಮಗನ ಜನಕ = ಬ್ರಹ್ಮನ ತಂದೆ
ಅನಿಮಿಷಪತಿ = ದೇವತೆಗಳ ಒಡೆಯ ಇಂದ್ರ
ದಕ್ಷನ ತನುಜೆ = ಅದಿತಿದೇವಿ
ಶಕ್ರ = ಇಂದ್ರ
ಇಂದ್ರಸೇನ = ಬಲಿರಾಯ
ಮುದ್ದು ಮೋಹನ = ವಾಮನ
ಏಣಿಸಲಳವೆ = ಎಣಿಸಲು ಸಾಧ್ಯವೇ
ಬಾಣಾಸುರನ ಜನಕ = ಬಲಿಚಕ್ರವರ್ತಿ
ಸಿಂಧೂರಪಾಲ = ಗಜೇಂದ್ರರಕ್ಷಕ
ಸಿಂಧುತನುಜೆ = ಲಕ್ಷ್ಮೀದೇವಿ

೫

ಸತ್ಯವತಿ ಪುತ್ರ = ವೇದವ್ಯಾಸ
ಸೂರಿ = ಜ್ಞಾನಿ, ವೇದಗಳು
ತೌತ್ಯನೆ =
ಭೂಭಾರವನಕುಠಾರಾ = ಭೂಭಾರವೆಂಬ ವನಕ್ಕೆ ಖಡ್ಗಸದೃಶ
ದ್ವಿತ್ಯಕ್ತ = ಎರಡನ್ನು ಬಿಡಿಸು (ಜೀವಚ್ಛಾದಿಕ, ಪರಮಾಚ್ಛಾದಿಕ ; ಅಹಂ ಮಮಕ್ಕ ಇವೆರಡು ಮೂಲ)
ಅಗ್ನಿನೇಮಕ ಪರಶುಧರಾ = ಅಗ್ನ್ಯಾಂತರ್ಗತ ಪರಶುರಾಮ
ಭೂಮಿನಾಥಾ = ಅಗ್ನಿಯಂತೆ ಕಾಂತಿಯುಳ್ಳವ
ಧೂಮಕೇತುವರ್ನ = ಸಾಮಸ್ತ < ಸಮಸ್ತ
ಸೋಮಕುಲವೈರಿ = ಚಂದ್ರವಂಶ ಕ್ಷತ್ರಿಯರ ವೈರಿ

ಅಭ್ರ = ಆಕಾಶ
ಊರ್ಜಿತಾ = ನೆಲೆ ನಿಂತ, ಹೆಚ್ಚಿನ
ಏಕವಿಂಶತಿ = ಇಪ್ಪತ್ತೊಂದು
ವಾರಿಪತಿ = ಸಮುದ್ರರಾಜ, ವರುಣ
ಭೋಜಕ್ಷಿತಿಪ =
ಪಡುವಲವನಧಿ = ಪಶ್ಚಿಮಸಮುದ್ರ
ಅರಸಿದರೆ = ಹುಡುಕಿದರೆ
ಪುರುಷಪ್ರಧಾನಜನಕ = ಬ್ರಹ್ಮನ ತಂದೆ

೬

ರಾಜಶೇಖರ = ಚಂದ್ರಶೇಖರ
ರಾಜ = ಚಂದ್ರ
ರಿಪುರಾಜ = ವೈರಿಯಾದ ರಾಜರ
ರಾಜೀವ = ಕಮಲ
ದ್ವಿಜರಾಗ = ಗರುಡ
ಬಿಸನಿಧಿ = ಸಮುದ್ರ (?)
ತ್ರಿದಶರು = ದೇವತೆಗಳು
ಪಶುಪ = ಮಹರುದ್ರದೇವರು
ಕುಶಿಯದಲೆ = ಕುಗ್ಗದಲೆ
ಬಿಸಜಾಭವ = ಕಮಲದಲ್ಲಿ ಜನಿಸಿದವ ಬ್ರಹ್ಮ
ಹಸನಾಗಿ = ಪರಿಶುದ್ಧವಾಗಿ
ಮೂರುಗುಣ ರಹಿತ = ತ್ರಿಗುಣವರ್ಜಿತ
ತಡವರಿಸಿ = ಮೈಮೇಲೆ ಕೈಯಾಡಿಸಿ
ಈರೈದು ರಥದವನು = ದಶರಥನು
ಮುನಿಯಾಂಗನೆ = ಅಹಲ್ಯೆ
ಅನಲಾಕ್ಷಧನು = ಶಿವಧನು
ಇಕ್ಕಡಿ = ವಿಭಾಗ, ಚೂರು
ಅನುವರ = ಯುದ್ಧ
ಗತಲೋಚನ = ಕುರುಡ
ಕುಂಭಸುತ = ಅಗಸ್ತ್ಯ
ಮೋಸದ ಅಸುರಿ = ಸೂರ್ಪನಖಿ
ದಿನೇಶನ ತನುಜ = ಸೂರ್ಯನ ಮಗ ಸುಗ್ರೀವ
ಪುರುಹೂತ ಮಗ = ದೇವೇಂದ್ರನ ಮಗ ವಾಲಿ
ರವಿಜಾತ = ಸುಗ್ರೀವ
ಪ್ರದ್ಯೋತ ಶಶಿ ಉಳ್ಳನಕ = ಸೂರ್ಯ ಚಂದ್ರ ರಿರುವವರೆಗೆ
ಸಾಕೇತಪುರ = ಅಯೋಧ್ಯಾ

೭

ಪಚ್ಚ = ರತ್ನ
ಪಲಿಗೆ < ಹಲಿಗೆ
ಬೆತ್ತದವರು = ವಂದಿಮಾಗಧರು, ಭಟ್ಟಂಗಿಗಳು

ಚತ್ತುರ < ಚತುರ = ಮನೋಹರ, ನಿಪುಣ
ತೆತ್ತಿಸ = ಮೂವತ್ತುಮೂರು
ತೆತ್ತಿಗ = ಊಳಿಗದವ, ದಾಸ
ತನುಭವ = ಮಗ
ನಳಿನಜಾದ್ಯರು = ಬ್ರಹ್ಮಾದ್ಯರು
ಸಮಾಧಿ = ಧ್ಯಾನ, ಚಿತ್ತೈಕಾಗ್ರತೆ
ಮಲೆವಿಂಧ್ಯ = ವಿಂಧ್ಯಪರ್ವತ
ಮಲತವರ = ಪಾಪಿಗಳ
ಇನನಂದನ = ಸುಗ್ರೀವ
ಸರ್ವರಂತರ = ಎಲ್ಲರ ಯೋಗ್ಯತೆ
ಮಣಿಯ = ಬಾಗನು, ಅಂಜನು
ಕಟ್ಟಿಯನು = ಸೇತುವೆಯನ್ನು
ಜಡಿ = ಕುಂದು (?)
ಸುಧಾಕಾಯ = ಅಮೃತ ಶರೀರ, ಶುಭ್ರಕಾಯ
ವೆತ್ತಣದೊ < ಎಲ್ಲಿಯದೊ

೮

ಹೃದ್ವನಜ = ಹೃದಯಕಮಲ
ಅಧ್ವರ = ಯಜ್ಞ
ಕ್ಷಿತಿಸುತಿ = ಸೀತಾದೇವಿ

೯

ಕುಂದೆಂದು = ಅತಿನಿರ್ಮಲ, ನಿಷ್ಕಳಂಕ
ಒಂದೊಂದು ಒಂದಾರು ಮೇಲೊಂದು ಕಂಧರ
= ದಶಕಂದರ ೧ + ೧ + ೧ +
೬ + ೧ = ೧೦)
ರಂಗರಂಗೋ = ಮನೋಹರವಾದ ವರ್ಣ
ರಂಗಪುಂಗವಪರ್ಯಂಕ = ವೈಚಿತ್ರ್ಯವುಳ್ಳ,
ಉರುಗ, ಸರ್ಪಶ್ರೇಷ್ಠನ್ನ
ಹಾಸಿಗೆಯುಳ್ಳವ
ತುಂಗಮಾತಂಗರಿಪುಭಂಗ = ಗಜೇಂದ್ರನ
ವೈರಿಯಾದ ಸಕ್ರನನು ಸಂಹರಿಸಿದವ
ಪ್ಲವಂಗ ಕಟಕ = ಕಪಿ ಸಮೂಹ
ರಂಗುಮಾಣಿಕ = ಸುಂದರವಾದ ಮಾಣಿಕ್ಯ
ಮಾರ್ಗಣ = ಬಾಣ
ತಿಂಗಾಡಿ ಹಸ್ತ = ಧನುಸ್ಸಿನ ಹಗ್ಗವುಳ್ಳ (?)
ಶಂದನಹತ್ತು = ದಶರಥ
ರಂಗರಂಗ = ಅತ್ಯಂತ ಪ್ರಕಾಶನಾದ
ವಾನರ = ಹನುಮಂತ
ದಾನವ = ವಿಭೀಷಣ

೧೦

ನಿಕಾಯ = ಸಮೂಹ
ಅನಾದಿರೋಗ = ಜನನಮರಣ
ದೀರ್ಘತಮನಂದನ = ದೀರ್ಘತಮನೆಂಬ
ಋಷಿಯಲ್ಲಿ ಅವತರಿಸಿದ ಧನ್ವಂತ್ರಿ
ಶಶಿಮಂಡಲ ಸಂಸ್ಥಿತ = ಚಂದ್ರಮಂಡಲಗತವಾದ
೧೬ ಕಲೆಗಳನ್ನು
ಕಲಶ (ಕಲಾ-ಆಶ)= ಕಲೆಗಳನ್ನು ಧಿಕ್ಕರಿಸುವ
ಶ್ರೇಷ್ಠನು
ಕಲಶಪಾಣಿ = ಶ್ರೇಷ್ಠನಾದ ಅಮೃತಪೂರಿತ
ಕಲಶವನ್ನು ಹಿಡಿದವ
ಪೀಯೂಷ = ಅಮೃತ
ಅಸು ಇಂದ್ರಿಯಂಗಳ = ಪ್ರಾಣೇಂದ್ರಿಯಗಳು
ಪರಮಪೂರ್ಣಬ್ರಹ್ಮ = ಶ್ರೇಷ್ಠವಾದ ಜ್ಞಾನಾ
ನಂದಾದಿ ಪರಿಪೂರ್ಣ
ಬ್ರಹ್ಮ ಉದ್ಧಾರಕ = ಆಯುರ್ವೇದ ಪ್ರವರ್ತಕ
ಉರುಪರಾಕ್ರಮ = ಮಹಾಪರಾಕ್ರಮಿ, ಮಹಾ
ಬಲವಂತವಾದ ತೇಜಸ್ಸುಳ್ಳ
ತರುಣಗಾತುರ(ಗಾತುರ < ಗಾತ್ರ) = ಯುವ
ದೇಹವುಳ್ಳ, ಯೋಗ್ಯದೇಹ ಧರಿಸಿದ
ಖೇಳ = ವಿನೋದ
ಭವಬೀಜ = ಅನಾದಿಕರ್ಮ, ಲಿಂಗದೇಹ (?)
ಪ್ರಣವ = ಓಂಕಾರ

೧೧

ಹತ್ತೆಂಟು ಮೀರಿದ =
ಸಯವಾಗಿ = ಯತಾರ್ಥವಾದ,
ಸ್ವರೂಪಭೂತವಾದ, ನಿಜವಾದ
ಮಿಸುಣಿಪ = ಹೊಳೆಯುವ
ಕುಶಮೊನೆ = ತೀಕ್ಷ್ಣಬುದ್ಧಿ
ಮಸಕರಿ < ಮಸ್ಕರಿ = ಸನ್ಯಾಸಿ
ಪೊರಡು < ಹೊರಡು
ಹಯ = ದೇವತೆಗಳ ಶತ್ರುಗಳನು ನಾಶ
ಮಾಡುವವ
ವಾಜಿ = ತೀವ್ರವಾಗಿ ಓಡುವ
ಅರ್ವ = ಬಹಳ ಓಡತಕ್ಕ
ಅಶ್ವ = ಸ್ವಲ್ಪ ವೇಗದಿಂದ ಹೋಗುವುದು,
ದಣಿಕೆಯಿಲ್ಲದೆ ಬಹಳ ಭಾರವನು
ಹೊರುವುದು
ಅರಿವಾದು < ಅರಿಯುವುದು
ಹೇಳನ < ಹೇಲನೆ = ಮೇಳನ (?)
ಜಾತವೇದಸ = ಅಗಿ

೧೨

ಲೋಕೇಶ = ಬ್ರಹ್ಮ

ಮೇರುಗರ್ಭೋದಯ = ಮೇರುದೇವಿಯಲ್ಲಿ ಅವತರಿಸಿದ
ಭೂಮ = ಸರ್ವೋತ್ತಮ
ಮೇಧ = ಯಜ್ಞ
ನ್ಯಾಮಕ < ನಿಯಾಮಕ
ಅಜಗರ ವೃತ್ತಿ = ಪರಮಾತ್ಮನನ್ನೇ ನಂಬಿ ನಡೆವ ವೃತ್ತಿ
ತತುವ < ತತ್ವ
ಮೋದಾಂಬುಧಿ = ಆನಂದದ ನಿಧಿ
ತಪನೀಯ ವರ್ನ = ಪ್ರಕಾಶಮಾನವಾದ ವರ್ಣ
ಅಂತರ್ಧಾನ = ಕಾಣದಂತಾಗು
ಅಂಜನಾಭ (ಅಂಜನ + ಅಭ) = ನಿರ್ಮಲ, ನೀಲಮೇಘಶ್ಯಾಮ
ಅಮೃತವಪು = ನಾಶರಹಿತ ಶರೀರ ಅಪ್ರಾಕೃತ ಕಾಯ
ನಿರಂಜನ = ನಿರ್ದುಷ್ಟ, ದೋಷರಹಿತ

೧೩

ದೀಪ್ತ = ಪ್ರಕಾಶಮಾನ
ಚೂಡಾ = ಜುಟ್ಟು, ಮುಡಿ
ಚೀರಾಂಬರ = ನಾರುಬಟ್ಟೆ
ದತ್ತಾ = ವಿಷ್ಣು
ದುರ್ವಾಸ = ರುದ್ರ
ಚಂದ್ರಸಹಭವ = ಚಂದ್ರನ ಸಹಿತವಾಗಿ ಹುಟ್ಟಿದ ಬ್ರಹ್ಮ
ಸಾವಿರ ಹಸ್ತ = ಕಾರ್ತವೀರ್ಯಾರ್ಜುನ, ಬಾಣಾಸುರ
ಉತ್ತುಂಗ = ಶ್ರೇಷ್ಠ
ವ್ಯಾಪ್ತಾ = ಸರ್ವತ್ರದಲ್ಲಿ ಸ್ವತಂತ್ರನಾಗಿ ತುಂಬಿದವ
ಗೋಪ್ತಾ = ಗುಪ್ತನಾಗಿರುವ
ಪ್ರಾಪ್ತಾ = ಹೊಂದಲು ಯೋಗ್ಯ
ಸಂತೃಪ್ತ = ಸದಾ ತೃಪ್ತ
ದತ್ತ = ಕೊಡುವ
ದತ್ತಾತ್ರಯ = ಅತ್ರೇಯ ಮುನಿಯಲ್ಲಿ ಅವತರಿಸಿದ ದತ್ತಾ
ಮಗನಾಹ = ಮಗನಾಗುವ
ವಕ್ಕಣಿಸು = ತಿಳಿಸು, ವಿವರಿಸು
ಭೂಗೋಲ = ಭೂಮಂಡಲ
ತ್ರಯಗುಣನಾಶ = ತ್ರಿಗುಣ ವರ್ಜಿತ
ನಯಮತಿಯಿಂದ = ಒಳ್ಳೆಯ ಮನಸ್ಸಿನಿಂದ
ತ್ರಯ ಪರಿಚ್ಛೇದ = ಲಿಂಗದೇಹ

ವಿಭೇದನಾ = ನಾಶಮಾಡುವ
ಗತಿ ಲಬ್ಧಾ = ಗತಿ ದೊರೆವುದು
ಲುಬ್ಧಾ = ಲೋಭಿ
ತಬ್ಧಾ < ಸ್ತಬ್ಧ = ಮೂಢ
ಸುಯತಿ = ಜ್ಞಾನ
ಪಯಳಾಯಂತಿದೆ = ಮೇಘದಲ್ಲಿ ತುಂಬಿದ ನಿರ್ಮಲ ಜಲದಂತೆ
ಬಿಡಬ್ಧ = ಸಂಶಯ ಬಿಡು
ಅಬ್ಧಾ = ಮಂದಮತಿ

೧೪

ಉಪಜೀವ್ಯ = ಜೀವನ ಸಾಧನಕ್ಕೆ ಮುಖ್ಯ (?)
ಸಪುತ ಸಪುತ < ಸಪ್ತ ಸಪ್ತ = ಹದಿನಾಲ್ಕು
ತ್ರಪುತ < ತೃಪ್ತ
ಕನಕವರ್ಣ = ಬಂಗಾರ ಬಣ್ಣ
ಈದ್ದರೆ < ಈಧರೆ
ಅಪರಬುದ್ಧ = ಮೂಢ
ವೈಧಾತ್ರ = ಸನತ್ಕುಮಾರಾದಿ ಬ್ರಹ್ಮಪುತ್ರರು
ನಿರಾಕುಲ = ಶುದ್ಧ
ಪರಿಮಾಣಕ್ಕೆ = ಅಳತೆಗೆ

೧೫

ಸಿದ್ಧಿದಾಯಕ = ಸಿದ್ಧಿಯನ್ನು ಕೊಡುವ
ನಿದ್ರಾರಮಣ = ದುರ್ಗಾರಮಣ
ಗೌಣಾಂಡ (ಗೌಣ + ಅಂಡ) = ಲಾಕ್ಷಣಿಕವಾದ ಬ್ರಹ್ಮಾಂಡ
ಇನ = ಸೂರ್ಯ
ವಿದ್ಯೆ ಪೇಳುವನಲ್ಲಿ = ಗುರುಗಳಲ್ಲಿ
ಹರುವ = ಹರಿಯುವ
ವಲಿ < ಬಲಿ, ಮುಖ = ಮಂಗ
ಬಳಗ = ಸಮೂಹ
ತಮಪರಿಚ್ಛೇದ = ಅಜ್ಞಾನಾವರ್ಕ

೧೬

ದಿತಿಜ = ದೈತ್ಯ
ಸತ್ಯವತಿ ಸೂನು = ಸತ್ಯವತಿಯ ಮಗನಾಗಿ ಅವತರಿಸಿದ ವೇದವ್ಯಾಸ
ವೆಗ್ಗಳ = ಹೆಚ್ಚು
ಅಳಲಿ = ದುಃಖಿಸಿ
ಮೂರಾರು = ಹದಿನೆಂಟು
ತಮಸಂಬಂಧ = ಅಜ್ಞಾನ

೧೭

ತೃಪ್ತಸಂತತ = ಸದಾ ತೃಪ್ತ, ಸಂತುಷ್ಟ

ಅರಿಷ್ಟ = ಜನನ ಮರಣಾಖ್ಯ ದುಃಖ
ಮಸದು = ಉದ್ರೇಕಗೊಂಡು, ಕೋಪಿಸಿ
ನಿಗಳ = ಕಾಲಸರಪಣಿ
ದುರುಳಶ್ರೀಗಳ < ದುರುಳಾಶ್ರಯ (?)
ಧಾರುಣಿಸುರ = ಬ್ರಾಹ್ಮಣ, ಸುಧಾಮ
ಕಿರೀಟಿ = ಅರ್ಜುನ
ವಾರಿಜಧರ = ಪರಮಾತ್ಮ
ರಾಕಾಬ್ಜ = ಹುಣ್ಣಿಮೆಯ ಚಂದ್ರ
ಮೊಮ್ಮಗ = ಪ್ರದ್ಯುಮ್ನ
ಭೂಮಿತೂಕ = ಭೂಭಾರ
ತಾಳಾಂಕ = ಬಲರಾಮ
ತೊಂಡೆ = ಊಸರವಳ್ಳಿ
ಭೂಕಾಂತ = ರಾಜ, ದೊರೆ

೧೮

ಕೃತವಿರೋಧಿ = ಶಿವ
ಅಂಗಜ = ಕಾಮ
ರುಜು = ಶುದ್ಧ
ಉದ್ಯುಕ್ತ = ಸಿದ್ಧ
ಅವಿಕಾರ = ವಿಕಾರವಿಲ್ಲದ

೧೯

ಪಾರ್‍ಯಾಡಿ < ಹಾರಾಡಿ = ಕ್ರೀಡೆ ಮಾಡಿ
ನೀರನಿಧಿ = ಸಮುದ್ರ
ಪೆಚ್ಚಿ < ಹೆಚ್ಚಿ
ಮಸಗಿ = ಉದ್ರೇಕಗೊಂಡು
ಸುರಪನ ಪ್ರಸ್ತ = ಇಂದ್ರಪ್ರಸ್ತ
ಸುರವೈರಿ = ಹಿಡಿಂಬ
ತರಹರಿಸು = ತಾಳಿಕೊಳ್ಳು
ಪರಿಘ = ಕಿಚ್ಚಿನ ಉರಿಯೋಗ
ನಿಲ್ಲಲೀಯದೆ = ತಡಮಾಡದೆ
ಸ್ವಾಹಾವಲ್ಲಭಾಉದ್ಭವಳ = ಯಜ್ಞಕುಂಡದಿಂದ ಉದ್ಭವಿಸಿದ ದ್ರೌಪದಾದೇವಿ
ಸೊಲ್ಲಿಲಿ = ಮಾತಿನಿಂದ
ಕೃಷ್ಣೆ = ದ್ರೌಪದಿ
ಹಲ್ಲಣಿಸಿದ = ಸುಂದರವಾದ ಥಡಿ ಹಾಕಿದ
ಯಳ್ಳನಿತು = ಸ್ವಲ್ಪವೂ
ಅರಸುಯಾಗ = ರಾಜಸೂಯಯಾಗ
ಅಂಬರ = ವಸ್ತ್ರ
ಉರುಗಾದಿಗಳಿಗೆಲ್ಲ = ಶೇಷಾದಿಗಳಿಗೆಲ್ಲ
ದೇವಿ = ಭಾರತೀದೇವಿ
ನಿರ್ಮಳ ಭೂಮಿಸುರರು = ಜ್ಞಾನಿಗಳು

ಸಾಸಿರಾಕ್ಷನ ಸುತ, ವಾಸವಸುತ = ಇಂದ್ರನಮಗ ಅರ್ಜುನ
ಹಾಸ = ಮಂದಹಾಸ
ಶಾಶಿದಳಿದರು = ಮದುವೆ ಮಾಡಿದರು
ದಾಸಿನಂದನ = ವಿದುರ
ಕಳಶಸಂಭವ = ದ್ರೋಣ
ಅಧಟ = ಪರಾಕ್ರಮಿ
ಹಲಾಯುಧ = ಬಲರಾಮ
ಅಂಗಜಾಸ್ತ್ರವ ಬಲುಭಂಗ ಮಾಡಿದ = ಭೀಷ್ಮ (ಕಾಮಬಾಣವನ್ನು ಭಂಗಗೊಳಿಸಿ, ಇಂದ್ರಿಯ ನಿಗ್ರಹಿಸಿ ಬ್ರಹ್ಮಚರ್ಯದಿಂದಿದ್ದವ)
ಸಂಗರ = ಯುದ್ಧ
ರಥಾಂಗ = ಚಕ್ರ
ಪ್ಲವಂಗ ಧ್ವಜ = ಕಪಿಧ್ವಜ, ಅರ್ಜುನ
ಕೆಂಗೋಲು = ಕೆಂಪುಬಣ್ಣದ ಬಾಣ
ಮಂಗಳಾಂಗ = ಶ್ರೀಕೃಷ್ಣ
ಸಿಂಗ = ಸಿಂಹ
ಮುಂಗುಡಿಯಲಿ = ಮುಂದೆ ಎದುರಿಗೆ
ಬಂಗಾರಾಂಬರ = ಪೀತಾಂಬರ
ಮುತ್ತ್ಯಾ = ಭೀಷ್ಮಪಿತಾಮಹ
ಚಕ್ರಬಿಂಹ್ವ = ಚಕ್ರವ್ಯೂಹ
ಹತ್ತರ್ಧದಿವಸ = ಐದು ದಿನ
ಮಿತ್ರನಂದನ = ಕರ್ಣ

೨೦

ಬೆಳಗುಪ್ಪ ಝಾವದಲಿ = ಬೆಳಗಿನ ಝಾವದಲಿ
ಪೊಳಲು = ಪಟ್ಟಣ
ಪೊರಮಟ್ಟು = ಹೊರಟು
ತಳಲ್ಗರಿ ಪೊಂಬಟ್ಟೆ = ನುಣುಪಾದ ಅರುಣಾಂಬರ, ಪೀತಾಂಬರ
ವಲ್ಲರು = ಗೆಳೆಯರು
ಹೊಲಬುಗಾಣು = ದಾರಿಗಾಣು
ಚಲುವಗಂಗಳ = ಚೆಲುವಾದ ಕಣ್ಣುಗಳ
ಹಲಬರ = ಕೆಲವರ
ಕೆಲದಾಡು = ಸಮೀಪದಲ್ಲಿದ್ದು ಆಡು
ನಿಲಿಯ = ಮನೆಯ
ಅಟ್ಟಾಡಿಸಿ = ಅಣಕಿಸಿ, ಮೈಕೈ ಹಿಡಿದು ಪರಿಹಾಸ್ಯ ಮಾಡಿ
ತಲುವರಿತನ = ಹುಡುಗತನ
ಪುಲಿದೊಗಲಾ = ರುದ್ರದೇವ

ಚಿಕ್ರ = ನೆಲುವು
ತಳಿಹಗ್ಗಾ = ಮಲಕುಹಾಕುವ ಹಗ್ಗ
ಬುಕ್ಕು < ಮುಕ್ಕು = ತಿನ್ನು
ಉಡಿಯ = ಮಡಿಲಲ್ಲಿಯ
ಗುಗ್ಗರಿ = ನೆನಸಿದ ಕಡಲೆ
ಪಿಂಚಾ = ನವಿಲುಗರಿ
ಕುಂಚಿ = ಗೊಂಚು
ಒಖ್ಖಣಿಸುತಿರೆ = ಹೇಳುತ್ತಿರೆ
ಅಕ್ಕಟ < ಅಕಟ = ಆಶ್ಚರ್ಯ
ಹೆದ್ದೈವ = ಹಿರಿದಾದ ದೈವ, ಸರ್ವೋತ್ತಮ
ಪೊಕ್ಕಳ ಹೂವಿನ = ನಾಭಿಕಮಲದ
ರಜನಿಮುಖಕಾಲಾ = ದೈತ್ಯರಿಗೆ ಮೃತ್ಯುದೇವತೆ

೨೧

ಪೊಸತು < ಹೊಸದು = ಆಶ್ಚರ್ಯಕರ
ಪೊಂಗೊಳಲು = ಹೊನ್ನಿನ ಕೊಳಲು
ರಂಬಿಸಿ < ರಮಿಸಿ = ಪ್ರೀತಿಯಿಂದ
ಮುಂಬರಿದು = ಮುಂದುವರಿದು
ಚುಂಚುಗೂದಲು = ಮುಂಗುರುಳು
ಮೃಗಲಾಂಛನ = ಚಂದ್ರ
ತ್ವಂ ಚ = ನೀನು ಕೂಡ (ಮುಂದೆ)
ಅಹಂ ಚ = ನಾನು ಕೂಡ (ಮುಂದೆ)
ಮುಂಚಡಿ = ಮೊದಲಹೆಜ್ಜೆ
ಹೊಡುವಾ = ಹೊಡೆಯುವಾ
ತಿಪ್ಪಾರ ದಂಡಾವಾಡಿಸುವ = ಕೈಯೊಳಗೆ ಬಡಿಗೆ ಹಿಡಿದು ತಿರುಗಿಸುವ
ಅಪ್ಪಾರ < ಅಪಾರ
ಗಪ್ಪಚುಪ್ಪಾಗಿ = ಮೌನವಾಗಿ
ಅಪ್ರತಿ = ಪ್ರತಿಯಿಲ್ಲದ
ಅಪ್ಪಾನಾವಾರಪ್ಪಾ < ಅಪ್ಪನವರ ಅಪ್ಪ = ಬ್ರಹ್ಮನ ತಂದೆ
ಗಣಣೆ < ಗಣನೆ

೨೨

ನ್ಯಾವರಿಸಿ = ಮೈಮೇಲೆ ಕೈಯಾಡಿಸಿ
ಬಿತ್ತರಿಸು = ನಿರೂಪಿಸು
ತತ್ತಳಗೊಳ್ಳು = ಮನೋವಿಕಾರಗೊಳ್ಳು
ಮರವಾಗದಿರಲಿ = ಮರೆಯದಿರಲಿ
ಕಾಣಿ = ನಾಣ್ಯ, ಆಸ್ತಿ
ಗಣಿ = ಸಾಮೂಹಿಕಾನ್ನ
ಗಣಿಕಾ = ಸ್ವೇಚ್ಛಾಚಾರಿ, ವೇಶ್ಯಾನ್ನ ಜೋಯಿಸನ ಮನೆ ಅನ್ನ
ಶೂದ್ರ = ಶೂದ್ರಾನ್ನ
ಹೀನಾಳ = ನೀಚ ಜನರ ಮನೆ ಅನ್ನ
ತವಕರಾಜಾ (ತವಕರಜ) = ಶೀಘ್ರಕೋಪಿ ಮನೆಯ ಅನ್ನ
ವೈರಿಗಳು = ವೈರಿಯ ಮನೆ ಅನ್ನ
ಯೋನಿವಿಕ್ರಯ = ಹಾದರದಿಂದ ಉಪಜೀವಿಸುವವರ ಮನೆ ಅನ್ನ
ಬ್ರಹ್ಮವಿಘಾತಕ = ಬ್ರಹ್ಮಹತ್ಯಾ ಮಾಡಿದವನ ಮನೆ ಅನ್ನ
ಕೇಣಿಗೊಳದೆ = ವಿಚಾರ ಮಾಡದೆ

೨೩

ಧವಿ = ಬೆಳಕು, ಕಾಂತಿ
ದಿವಿಜ = ಗರುಡ
ಪವನಾಶನ = ಶೇಷ
ವೃದ್ಧಶ್ರವ = ಇಂದ್ರ
ಜವ = ಯಮ
ವೈಶ್ರವಣ = ವಿಶ್ರವಸ್ಸುವಿನ ಮಗ ಕುಬೇರ
ಪ್ರಳಯಾಲಳುವಿಲ್ಲಾ = ನಾಶವಿಲ್ಲದ ವೈಕುಂಠ
ಗುಂದು < ಕುಂದು = ಕಡಿಮೆಯಾಗು
ಪೊಳಲಾದ = ನಗರವಾದ
ಮುಕುಳಿದನಗೆ = ಮುಗುಳುನಗೆ
ಹಸ್ತಕರಾಗಿ = ಕೈಪಿಡಿದು
ಸಕಳ < ಸಕಲ = ಎಲ್ಲ
ಮೀಸಲ = ಅಪ್ರಾಕೃತ
ಮಾಸದ ಮಾಲಿಕೆ = ಕೌಸ್ತುಭಮಾಲೆ
ಕೀಸಲಯದ ಬಳ್ಳಿ = ಚಿಗುರೆಲೆಯ ಬಳ್ಳಿ
ಮಾನಿಸ = ಮನುಷ್ಯ

೨೪

ಸ್ವರ್ಗತಿ = ಸ್ವರ್ಗಾದಿ ಲೋಕವಾಸ
ನಿರ್ಗತಿ = ಮೋಕ್ಷ
ನಿರ್ಗುಣ = ಪ್ರಾಕೃತಗುಣಶೂನ್ಯ
ಝುಗಿಪ = ಹೊಳೆಯುವ
ವಿಗಡಿತನ = ಕ್ರೂರತನ, ನಗೆಚಾಟಿಕೆ
ನೀಗುಡುವೆ < ನೀನು ಕುಡಿಯುವೆ
ಸುತನ ಸ್ವರಮಣನೆ = ಸ್ವರಮಣನಾದರೂ ಬ್ರಹ್ಮ ವಾಯುದೇವರನ್ನು ಸ್ತ್ರೀರೂಪ ಧರಿಸಲು ಆಜ್ಞಾಪಿಸಿ ಅವರಿಂದ ರಮಣ ಮಾಡಿದವ
ಸತಿಯಾಗಿ = ಮೋಹಿನಿರೂಪ ತಾಳಿ
ಸ್ತಂಭಸಂಭವ = ನಾರಸಿಂಹ

ಜಂಭಾರಿ = ಇಂದ್ರ
ಸ್ವಯಂಭು = ಬ್ರಹ್ಮ

**೨೫**

ಮಹೋತ್ತಮ = ಸರ್ವಶ್ರೇಷ್ಠ, ಸರ್ವೋತ್ತಮ
ಭಾವದಲಿ = ಮನಸಿನಲಿ
ರಾಜೀವವದನ = ಕಮಲಮುಖಿ
ಹ್ಯಾವರಿಕೆ = ನಾಚಿಕೆಯುಳ್ಳ
ಡಾವಣಿ = ಎತ್ತುಗಳನ್ನು ಕಟ್ಟುವ ಹಗ್ಗ
ದ್ವಿಜಾಪತಿ = ಗರುಡ
ಪೂವಿಲ್ಲನಯ್ಯಾ = ಕಾಮನಯ್ಯಾ
ಅಚ್ಚಲ = ಪ್ರಶಾಂತ
ಅಚ್ಚ = ಅಪ್ಪಟ
ನಿಚ್ಚ = ನಿರ್ಮಲ
ನಿಚಯ = ಗುಂಪು, ರಾಶಿ
ನಿರ್ಮಲಾಂಗ = ಅಪ್ರಾಕೃತ ಶರೀರ
ನೊರಜು = ಬೆಣಗಲ್ಲು
ಮಾಡುಳ್ಳ = ಮಾಡಿದ
ಸದನದೊಳಗೆ ಮಾಡುಳ್ಳ ಪದಾರ್ಥ = ನಿತ್ಯ ಮಾಡುವ ಸಕಲ ಕರ್ಮ

**೨೬**

ಕಾಕ = ಕೆಟ್ಟ
ಲೇಕಿಗ = ತಿರುದುಂಬುವ, ಭಿಕ್ಷಾಪಾತ್ರ
ಲೇಖಿಗ = ಬ್ರಹ್ಮ
ಏಕನೇ = ಒಬ್ಬನೆ
ರಿಕ್ತಾ = ಬರಿದಾದವ, ಬಡವ, ಅಜ್ಞಾನಿ
ಕದಂಬ = ನೀರು
ಕೋಕನ = ಕಮಲ
ಆರೈದು = (೬ + ೫ = ೧೧) ಏಕಾದಾಶೇಂದ್ರಿಯ ಮನಸ್ಸು
ನೀರೇರುಹ = ಕಮಲ

**೨೭**

ನ್ಯಾವ < ಯಾವನು
ಗರ್ವಾದ್ರಿ = ಅಹಂಕಾರವೆಂಬ ಪರ್ವತ
ಕೇಣಿಗೊಂಬುವ = ದುರಾಶೆಪಡುವ

**೨೮**

ಧಟ = ಪರಾಕ್ರಮಿ, ನಿಂದಿಸುವ
ಉಳಿಕಾರ = ಕಳ್ಳ
ರಚ್ಚೆ = ಗುಟ್ಟನ್ನು ರಟ್ಟುಮಾಡು
ಕಲ್ಲಿನ ಮುಂದೆ = ಗೋವರ್ಧನ ಗಿರಿಯ ಮುಂದೆ
ಬೋನ = ಅನ್ನ
ಚಿದಕು = ಬಹಳ ಗೋಳಾಡಿಸು
ನೋತದ್ದು = ಮಾಡಿದ ಕರ್ಮ
ಇರಲಾಪ್ಯಾ = ಇರುವೆಯಾ
ಕವಳ = ಕತ್ತಲೆ
ನವನವ = ಹೊಸ ಹೊಸ
ಸವೆಯದಗತಿ = ಮೋಕ್ಷ

**೨೯**

ಕದುವದೇನು =ಕದಿಯುವುದೇನು
ಜುಣಗಿಯಾಡು = ತಿರುಗಾಡು (?)
ಪರಾಪರಾವ = ಉತ್ತಮೋತ್ತಮ

**೩೦**

ಪೋಕತನ = ಘಟಿಂಗತನ, ಹುಡುಗತನ
ಎದೆಯ ಮೇಲೊದೆದು ನುಡಿಸಿದವನ = ಭೃಗುಋಷಿಗಳ
ಸದರಿ ಬೆದರಿ = ದೃಷ್ಟಿಸಿ ಅಂಜಿ
ಇಟ್ಟಣಿಸಿ = ತಡೆಮಾಡಿ
ಅಟ್ಟುಳಿ = ಸಮೂಹ, ಗುಂಪು
ಅಟ್ಟಹಾಸ = ಬಡಿವಾರ, ನಗೆಚಾಟಿಕೆ
ಎನ್ನಾಧೀನ = ಎನ್ನಂತರಂಗದಲ್ಲಿದ್ದು ನನ್ನ ಯೋಗ್ಯತೆಯಂತೆ ಪ್ರೇರಿಸಿ ನನ್ನಾಧೀನವಾಗಿರುವ

**೩೧**

ಪರಂಜಲ = ನಿರ್ಮಲ
ಕೆಂಜೆಡಿಯ = ಶಿವ
ಕಿಂಜನನ = ನಿನ್ನ ಜನನವೇನು?
ಏಳಲು = ನಿಂದ್ಯ, ಅವಮಾನ
ಕಕ್ಕುಜಗೊಂಬೆನೊ = ಬೈಲಿಗಳೆಯುವನೊ
ಚಿಕ್ಕವನ ಹಿರಿಯನ ಮಾಡಿ = ಲಕ್ಷ್ಮಣ, ಶೇಷಾಂಶ, ಬಲರಾಮನ ಮಾಡಿ
ಹಾಗಾ = ಪೈ, ಕಾಸು
ಭೋಗೀಶ = ಕಾಳಿಂಗ
ನಾಗರಾಜ = ಗಜೇಂದ್ರ
ಸೂತಸತಿ = ಅಂಬಿಗಸ್ತ್ರೀ
ಕಾತುರೆಬ್ಬಿಸು = ಬಳಲಿಸು
ವದ್ದವ = ಭೃಗುಋಷಿ
ಮೆದ್ದವ = ಹನುಮಂತ
ಕದ್ದವ = ಕಿರೀಟ ಕದ್ದ ಬಲಿ
ಗೆದ್ದವ = ಭಕ್ತ ಭೀಷ್ಮ
ಇದ್ದವ = ಯಾದವರಲ್ಲಿದ್ದ ಉದ್ಧವ
ಎದ್ದವ = ಮುಚಕುಂದ

ಗದ್ದುಗೆ ನೀಡಿಸಿದವ = ಇಟ್ಟಿಗೆ ಕಲ್ಲು ಕೊಟ್ಟ ಪುಂಡಲೀಕ

ಪದ್ದು = ಹೊಂದಿಕೊಂಡಿರು

೩೨

ಸರಕು = ಗಮನ, ಲಕ್ಷ್ಯ

ಲೆಂಡ < ಲಂಡ = ನೀಚ

ಪತ್ರಿ = ಬಾಣ

ವರ್ಮ = ರಕ್ಷಣೆ, ಕವಚ

ದೂರು = ನಿಂದೆ, ದೂಷಣೆ, ಫಿರ್ಯಾದೆ

೩೩

ನಾನುಂಡು = ನಾನು ಅನುಭವಿಸಿ

ಬಿದ್ದು ಹೋಹ = ಹಾಳಾಗುವ

ವಾಗ್ಗಳಿಯಾ (ವಾಕು + ಕಳಿಯಾ) = ಭಕ್ತರ ಮಾತು ಮೀರನು, ಶ್ರೇಷ್ಠ

ಮುಗ್ಗಿದಲ್ಲಿಗೆ = ಶಕ್ತಿಯಿಲ್ಲದೇ ತಡವರಿಸಿದಾಗ, ನಾನು ಅಸ್ವತಂತ್ರನೆಂಬ ಅರಿವಾದಾಗ

೩೪

ನಂಬುವ = ದೃಢಭಕ್ತಿಯಿಂದ

ಅಂಬುವದು = ಸ್ತೋತ್ರ ಮಾಡುವುದು

ಹೇವರಿಕೆ = ನಾಚಿಕೆ

ಸದೈವ = ಯಾವಾಗಲೂ

ಗುಂಡೇರಿ ಬಾಡಿ ಒಣಗಿಸಿ = ಬೇಸಿಗೆಯ ಬಿಸಿಲಲ್ಲಿ ಎತ್ತರವಾದ ಗುಂಡುಕಲ್ಲನ್ನು ಧೈರ್ಯದಿಂದ ಏರಿ, ಜ್ಞಾನರಹಿತ ಕರ್ಮ

ಸಪ್ತವೆರಡು ಲೋಕ = ೧೪ ಲೋಕ

ಸಪ್ತಾರ್ಚಿ = ಅಗ್ನಿ

ಮೂರೊಂದು = (೩ + ೧ = ೪) ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ

ಮೂರೆರಡು (೩ + ೨ = ೫) = ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ

ಮೂರು ಮೂರು = (೩ X ೩ = ೯) ವಿಮಲೋತ್ಕರ್ಣ, ಜ್ಞಾನಾದಿ ಒಟ್ಟು ೨೨ ಕಾರ್ಯಕಾರಣ ರೂಪಗಳು

ಮೂರು ಮೂಲೆ = ಹೃತ್ಕಮಲದ ತುದಿ, ಕಮಲ, ಕಮಲನಾಳ

ಮೂರುತಿಯಿಂದ = ಅಗ್ರೇಶ, ಪ್ರಾದೇಶ, ಮೂಲೇಶ

ಮೂರುತಿ ನಿರ್ಮಳರಾಗಿ = ದೇಹ ಶುದ್ಧರಾಗಿ

ಮೂರರೊಳಗೆ ಒಂದು = ಜ್ಞಾನ

ಮೂರು ಪುರಾದಲ್ಲಿ = ಶ್ವೇತದ್ವೀಪ, ಅನಂತಾಸನ, ವೈಕುಂಠ

ಮೂರೊಂದು ಪದವಿ = (೩ + ೧ = ೪) ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ

ಮೂರುತಿವಂತನಾಗಿ = ಬಿಂಬ ಮೂರ್ತಿ ಧ್ಯಾನವುಳ್ಳವನಾಗು

ಮೂರು ಆರು ಎರಡು ಕಲಿತು = (೩ + ೬ + ೨= ೧೧) ಏಕಾದಶೇಂದ್ರಿಯ ಕೃತ ಸರ್ವಕರ್ಮಗಳನ್ನು ವಿದ್ಯುಕ್ತವಾಗಿ ಶ್ರೀಹರಿಗರ್ಪಿಸುವುದನ್ನು ಕಲಿತು

ಮೂರು ರೂಪಾದವನ = ವಿಶ್ವ–ಜಾಗೃತ, ತೈಜಸ ಸ್ವಪ್ನ, ಪ್ರಾಜ್ಞ–ಸುಷುಪ್ತಿ ಈ ಮೂರು ರೂಪಕಾರ್ಯ ನಿಜವೆಂದು ನಂಬಿ

ಮೂರು ಮೂವತ್ತರ ಕೂಡೊ = (೩ + ೩೦ = ೩೩) ಮೂವತ್ತು ಮೂರು ಕೋಟಿ ದೇವತೆಗಳನ್ನು ಕೂಡು

೩೫

ನೀನಿತ್ತ ಬಾರದೆ = ನೀನು ಹೃದಯದಿ ಹೊಳೆಯದೆ, ಸಮ್ಮುಖನಾಗದೆ

ನೀನಿತ್ತ ಪೋಗದು = ಲಿಂಗಶರೀರ ನಾಶವಾಗದು

ವಾರಣ = ರಕ್ಷಣ

ತೈರಕೆಯವನಾಗಿ = ಅರಿಯದವನಂತೆ

ತ್ಯಾರಿಗೆತ್ಯಾರಿ = ಉದಾಸೀನ

ತಿರುವೆಂಗಳ (ತಿರು = ವೆಂಗಳ) = ತಿರುಗಿ ವಾರಿ ನೋಟದ ಸ್ತ್ರೀಯರಲ್ಲಿರುವ

ಲಾವಂಗ = ಲಾವಣ್ಯ

ಹಿಂಗಳದಡೆ = ಕೆಡುವುದಿಲ್ಲ

ನಿನ್ನಂಗನಿರಲು = ನಿನ್ನ ಪ್ರತಿಬಿಂಬನಾಗಿರಲು

ಅಂಗಿ = ಲಿಂಗದೇಹ

ಹೃಷಯಂಗಳಿಗೆ = ಇಂದ್ರಿಯಗಳಿಗೆ

ನೀನರಸಾದ = ನೀನು ಸ್ವಾಮಿಯಾದ

ಪದರದೆ < ಹೆದರದೆ

ಸ್ವಾರಾ = ಸ್ವರಸಹಿತವಾದದ್ದು, ವೇದ

ವಿತ್ತಮ = ವೇದದಿಂದ ತಿಳಿಯುವುದರಲ್ಲಿ ಶ್ರೇಷ್ಠವಾದ

ಸರಿವರ = ಸಮ್ಯಗ್, ವರ್ಣನೀಯವಾದದ್ದು

೩೬

ಅಂತುಗಾಣು = ಕೊನೆಗಾಣು
ಪಂಥಿ = ಮಾರ್ಗ
ಸ್ವರೂಪಾ = ಜ್ಞಾನಾನಂದಾತ್ಮಕ ಚಿದಾನಂದ ಶರೀರ
ಅರೂಪ = ಪ್ರಾಕೃತಿಕರೂಪ ರಹಿತ
ಅಪರೂಪ = ನಿತ್ಯನೂತನ ಲೋಕೋತ್ತರ ಸೌಂದರ್ಯ
ಸ್ವರತಿ = ಸ್ವರಮಣ, ತನ್ನಲ್ಲಿ ತಾನು ರತಿಯುಳ್ಳವ
ಸ್ವತೇಜ = ಸ್ವರೂಪಭೂತವಾದ ತೇಜ, ಬಲಶಾಲಿ
ಸ್ವಪ್ರಕಾಶ = ಸ್ವರೂಪ ಕಾಂತಿ, ತನಗೆ ತಾನೇ ಬೆಳಗುವ
ಸ್ವರಾಧೇಯ = ತನ್ನ ಪೂಜೆಯನ್ನು ತಾನೇ ಮಾಡಿಕೊಳ್ಳುವವ
ಆರಾಧೇಯ = ಭಕ್ತರಿಂದ ಪೂಜೆಗೊಳ್ಳುವವ
ಸ್ವಾರೋಗಣೆಯ = ತನ್ನ ಸೌಖ್ಯ ಶುಭರಸವನ್ನು ತಾನೇ ಉಣ್ಣುವವ
ಸ್ವಬಂಧು = ತನಗೇ ತಾನೇ ಬಂಧು (ವಾಸುದೇವಾದಿ ರೂಪಗಳು)
ಬಂಧು = ಭಕುತರ ಬಂಧು
ಹೊಂತಕಾರಿ = ಬುದ್ಧಿವಂತ
ಮೂರು ತೊಡಕು = ಈಷಣತ್ರಯ (ದಾರೇಷಣ, ಪುತ್ರೇಷಣ, ವಿತ್ತೇಷಣ) ಅಥವಾ ತ್ರಿತಾಪ (ಆಧ್ಯಾತ್ಮಿಕ, ಆಧಿದೈವಿಕ, ಅದಿಭೌತಿಕ)
ವಡವಹ್ನಿ = ಒಡವಾಗ್ನಿ
ಏವಂತಿ ಜಾಯತೇ = ಈ ಪ್ರಕಾರವಾಗಿ ನಿನ್ನ ರೂಪಗಳು ಆವಿರ್ಭಾವ ಹೊಂದುತ್ತವೆ (ಎಂದು ವೇದಗಳು ಹೊಗಳುತ್ತವೆ)
ಪಾವಿನ ಹಿರಿಯ = ಶೇಷದೇವ
ಪಾವಿವರಸೆ = ರಕ್ತಸಂಬಂಧ, ಆಪ್ತತ್ವ, ಬಂಧುತ್ವವಿಲ್ಲದಲೇ ನಿರಪೇಕ್ಷನಾಗಿ ಕಾಯುವ (ಇದು ವ್ಯಾವಹಾರಿಕ ಪದ)

೩೭

೩೮

ಓರಂತೆ = ಚಿಂತಿಸುವಂತೆ

೩೯

ಶಾತಕುಂಭದವನ ಭವಾಂಡದ = ಬಂಗಾರದ ಒಡಲ, ಬ್ರಹ್ಮಾಂಡ
ಭೂತಿ = ಇರುವಿಕೆ

೪೦

ಹರಿಗಂಡವನು = ಮಾರ್ಗವನ್ನು ತಿಳಿದವನು
ಹರಿದಿಂಬ < ಹರಿದು ತಿನ್ನುವ = ಪಾಪವೆಂಬ ಸೊಕ್ಕಿದ ಆನೆಗೆ ಸಿಂಹ, ಪಾಪಹರ
ಬೊಮ್ಮನ ಕುಲದಲ್ಲಿ = ಬ್ರಹ್ಮನ ಮಗ ಪುಲಸ್ತ್ಯನ ಕುಲದಲ್ಲಿ
ಉತ್ಪನ್ನವಾದನು = ಹುಟ್ಟಿದನು, ರಾವಣ
ಕುಂಭಶ್ರವಣ = ಕುಂಭಕರ್ಣ
ಅಣೆಚಿ = ರಸಾತಲಕ್ಕೆ ಒತ್ತಿ
ತನುಜೆ = ಗಂಗಾದೇವಿ

೪೧

ರಾಕಾಬ್ಜಸೋಮಾ = ಹುಣಿಮೆಯ ಚಂದ್ರ
ತುರುಗಿದ = ತುಂಬಿಕೊಂಡು, ಇಟ್ಟುಕೊಂಡು
ಮುಕುರ = ಕನ್ನಡಿ

೪೨

ಅಚ್ಚಾಟಾಡು = ನಿರ್ಮಲವಾದ ಲೀಲೆ
ಪುಚ್ಛಭಾಗದಲ್ಲಿ = ಧ್ರುವರಾಜನನ್ನು ತನ್ನ ಬಾಲಾಗ್ರಹದಲ್ಲಿ ಧರಿಸಿದ ಶಿಂಶುಮಾರ ರೂಪ
ಚಚ್ಚರ = ತ್ವರೆ, ಬೇಗ
ಎಚ್ಚಕ = ಕೊಡುವ ದಾತಾರ
ಅಯ್ಯೋಯೊ ಹೊಹೊಹೊ = ಕನಿಕರದ ಪದ
ತೊಡರು = ತೊಂದರೆ

೪೩

ಬರಲಿಸಾ = ಬರಗೊಡಾ
ಭಕುತೇಶ = ಸಾಧ್ಯರಾದ ಭಕುತರಿಗೆ ಸ್ವಾಮಿ
ಮುಕುತೇಶ = ಸಿದ್ಧರಾದ ಮುಕ್ತರಿಗೆ ಸ್ವಾಮಿ
ರಿಕುತ < ರಿಕ್ತ = ಬಡವ
ವಿಕಳ = ಕಡಿಮೆ, ಅಧಮ
ಅತಿಶಯ ಬಿಟ್ಟು = ಭಕ್ತಿಮಾರ್ಗ ಬಿಟ್ಟು
ಲೌಕಿಕವೆಲ್ಲ ಬ್ರಹ್ಮಸ್ವರೂಪವೆಂದು = ಜಗದಾಕಾರನೇ ಬ್ರಹ್ಮನೆಂದು ತಿಳಿದ ಅಜ್ಞಾನಿ
ವೈಕಾರಿಕ ಮಾರ್ಗ = ಸತ್ವಮಾರ್ಗ
ಮಾಳೆಸೋಗನೊ = ಬೇರೆಯವರ ವಸ್ತ್ರವನ್ನು ಧರಿಸಿ ಬಡಿವಾಗ ಮಾಡುವ ಅಗಸ
ಇಮ್ಮಡಿ = ಎರಡು ಪಾಲು
ಮುಮ್ಮಡಿ = ಮೂರು ಪಾಲು

೪೪

ಪಂಚಮುಖಿ = ವಾಯುದೇವರು
ರಂಗರಂಗ = ಸುಂದರ ರೂಪನಾದ ಶ್ರೀಹರಿ

ವಿಹಂಗ ತುರಂಗ = ಗರುಡವಾಹನ
ಮಂಗಳಾಂಗ = ಶುಭಕಾಯ
ತರಂಗಮಹಿಮಾ = ಅನಂತಮಹಿಮಾ
ಅಂಗುಟಾಗ್ರದಿ ಗಂಗೆಯ ಪೆತ್ತ = ತ್ರಿವಿಕ್ರಮ
ಅಂಗಜಜನಕ = ಕಾಮಪಿತ
ತುಂಗಕಾಯ = ಶ್ರೇಷ್ಠಕಾಯ, ಅಪ್ರಾಕೃತಕಾಯ
ಸುರರ್‍ಗಳ ಕೋಶ = ದೇವತೆಗಳಿಗೆ ಧನಪ್ರಾಯನಾದವ
ಲಾಂಗುಲಿ ರಮಣ = ಜಾಂಬುವತಿಪತಿ
ಭಸುಮ < ಭಸ್ಮ
ವಲ್ಪಿಗೆ = ಡಾಂಬಿಕತನಕ್ಕೆ, ವೇಷಕ್ಕೆ

೪೫

ಬೋಧರು = ಆಚಾರ್ಯ ಮಧ್ವರು
ವಿಷದಲ್ಲಿ ತಪಿಸುತ = ಸಂಸಾರವೆಂಬ ವಿಷದಲ್ಲಿ ತಾಪಪಡುತ್ತ
ಎಸಹ ಮೆದ್ದಂತೆ = ತೃಪ್ತಿಯಾಗುವಂತೆ

೪೬

ವೆಗ್ಗಳ = ಹೆಚ್ಚಿನ ಮಹತ್ತ್ವ
ನಿರ್ಗುಡಿದಂತೆ < ನೀರು ಕುಡಿದಂತೆ = ಸುಲಭವಾಗಿ
ಕೂರ್ಗಣೆ = ತೀಕ್ಷ್ಣಬಾಣ
ದುರ್ಗಮ = ಕಠಿಣವಾದ, ದಾಟಲು ಅಶಕ್ಯ
ಲಗ್ಗಿಗೆ = ಓಡಲಿಕ್ಕೆ
ಮುಗ್ಗ ಮಾಡುವ = ಕುಗ್ಗಿಸುವ
ವಗ್ಗಟ್ಟಿಕೊಂಡು = ಅಧೀನವಾಗಿ
ತೊಲಗ ತೊಬ್ಬಿದ ಜ್ಞಾನ = ಬಿಡದೆ ಅಭಿವೃದ್ಧಿ ಹೊಂದಿದ ಜ್ಞಾನ
ನೆಗ್ಗುಬೀಳದು = ನಾಶವಾಗದು
ಋಗ್ಗುವೇದ < ಋಗ್ವೇದ
ಜಿಜ್ಞಾನಾಪ = ಅಪರೋಕ್ಷಜ್ಞಾನದಾತಾ
ಉಗ್ಗಡ = ಪೂರ್ವಮಹಿಮೆ ವಿಶೇಷವಾದ
ಬಟ್ಟೆ = ದಾರಿ
ಶಠ = ದುಷ್ಟ
ಘಟಕರಾಗುವರು = ಕೊಡುವರು
ಪಡಿಗಾಣೆ = ಸರಿಗಾಣೆ
ಅಂತಕನ = ಯಮನ
ಪಿಂತಿ < ಪಿಂತೆ = ಹಿಂದೆ
ಆಪಾರಾ < ಅಪಾರ = ಎಲ್ಲೆಯಿಲ್ಲದ
ಉಕ್ತಿವಂತ = ಯುಕ್ತಿವಂತ
ಕಾವೆ = ಕಾಯುವೆ, ಸಂರಕ್ಷಿಸುವೆ

೪೭

ನರಕಾನರಕ = ನರಕ ಸ್ವರ್ಗ
ನಿರಭಯ < ನಿರ್ಭಯ = ಹೆದರಿಕೆಯಿಲ್ಲದ
ಪಾವನಮತ = ಮಧ್ವಮತ
ಹಣ್ಣಿಕೊಂಡು = ಸಿಟ್ಟಿಗೆದ್ದು, ಅಭಿಮಾನದಿಂದ

೪೮

ಧರಾಧರ = ಶೇಷ
ಧರಧರ = ಭೂಮೀಪತಿ
ಬೀಳಲೀಸನು = ಬೀಳಿಸನು
ಒಪ್ಪಚಾರ = ಉಪಚಾರ, ಗೌರವ
ಕುರುಹು = ಗುರುತು

೪೯

ಬಿನ್ನಾಣದಲ್ಲಿ = ಪ್ರೀತಿಯಿಂದ ಚಂದದಿಂದ
ಮನಸಾರೆ = ಯಥೇಚ್ಛ
ಮನಸಿಜನುಪಹತಿ = ಕಾಮನಕಾಟ
ಧಿಟ್ಟಾ = ಜ್ಞಾನಿ
ಭವದನಿಗಳ = ಸಂಸಾರ ಬಂಧನ
ವಿಗಡ = ದುಷ್ಟ

೫೦

ನಿಡಿದಾ = ಸೀದಾ, ನೇರವಾಗಿ
ಬೆಸನೆ = ವ್ಯಸನ, ಚಿಂತೆ
ಭಣಗು = ಕೀಳು, ಕೆಟ್ಟ
ನಿರಿಯಾ = ನರಕ

೫೧

ದುರಿತ ಘನಾವಳಿ = ಪಾಪವೆಂಬ ಮೇಘ ಸಮೂಹ
ಎರಡಂಟು ದಿಕ್ಕು = ದಶದಿಕ್ಕು, ಎಲ್ಲ ಕಡೆಗೆ

೫೨

ವಜ್ರರ ಪಂಜರ = ಗಟ್ಟಿಯಾದ ಕವಚ
ಕರವ ಉತ್ತರಿಸುವ = ಕೈಯನ್ನು ಕತ್ತರಿಸುವ
ಮರ = ಮೂಢ
ಕಾಲಾಕಾಲ = ಕಾಲ ಅಕಾಲ

೫೩

ಅನಾಮಯ = ನಿರ್ದೋಷ
ಅನರ್ಪಿತನ್ನೆ = ಪ್ರಾಣಾಂತರ್ಯಾಮಿಗೆ ಅರ್ಪಿಸಲು
ಆನ = ಪ್ರಾಣದೇವರು
ತ್ರಾಣರನ್ನೆ = ಸಮರ್ಥರನ್ನಾಗಿ
ತುಲ < ತೂಲ = ಹತ್ತಿ

೫೪

ನಿರ್ನಯ < ನಿರ್ಣಯ
ಸಂಕೀರ್ಣವುಳ್ಳ = ತತ್ವ ತುಂಬಿದ, ವ್ಯಾಪ್ತೋಪಾಸಕರು
ಹಮ್ಮು = ಗರ್ವ
ಸೊಮ್ಮು = ಆಸ್ತಿ, ಐಶ್ವರ್ಯ
ಬೆನ್ನಾಗಿಪ್ಪ = ಬೆನ್ನು ಬಿಡದೆ ಕಾಯ್ವ
ಸದರ = ಅಪೇಕ್ಷೆ, ಪ್ರೀತಿ

೫೫

ವಾಗೀಶ = ಬ್ರಹ್ಮ
ಬ್ಯಾಗಿ = ಕಿಚ್ಚು
ತಂಬಲಾಗುವಂತೆ = ಯಥೇಚ್ಛವಾಗಿ
ಹಾಗಾರಾ = ಬೆಲೆ, ನಾಣ್ಯದ ಹೆಸರು
ಹಾಗಾ = ಅತಿ ಚಿಕ್ಕ ನಾಣ್ಯ, ಪೈ (ಆ ಕಾಲದ್ದು) ಕಾಸುವೀಸದಂತೆ
ಸ್ತುತ್ಯಾ < ಸ್ತೋತ್ರ

೫೬

ಭಾವಜ್ಞ = ಜ್ಞಾನಿ
ಅಂಬಲಿ = ಗಂಜಿ
ಸರ್ಪಕೇತನ = ದುರ್ಯೋಧನ

೫೭

೫೮

ಸುಳಿ = ಕಣ್ಣಿಗೆ ಕಾಣಿಸು
ಕುಮಾಯದ = ತುಚ್ಛವಾದ ಸಂಸಾರದ
ನಡುಸುಳಿಯಿಂದ = ತಿರಗಣಿ, ಮಡುವಿನ ಸುಳಿಯಿಂದ, ಸಂಸಾರ ಸುಳಿಯಿಂದ
ಸುಳಿಸುವದಾಲಿಸು = ಪ್ರತ್ಯಕ್ಷವಾಗುವ, ಉಪಾಯ ತೋರು
ಸುಳಿಸದಿರಿಲ್ಲಿಯೆ = ಈ ಸಂಸಾರದಲ್ಲಿ ತಿರುಗಾಡಿಸಬೇಡ
ಸುಳಿದಿನವಿದ್ದರು = ಕೆಲವು ಕಾಲ ತಿರುಗುವ ಅನುಭವವಿದ್ದರೂ
ಸುಳವಾಗಿ = ಸುಲಭದಿಂದ
ಸುಳುವು ಕಾಣದಿದ್ದ = ದೃಷ್ಟಿ ಕಾಣದ, ಮಾರ್ಗ ತೋರದ, ಅಜ್ಞಾನಿ
ಸುಳಿಯೋ = ದರ್ಶನ ಕೊಡು
ಸುಹೃತ್ತಮ = ನಿರಪೇಕ್ಷ, ಅನಿಮಿತ್ತ ಬಂಧು
ಕಾಣಾಸಿಯಾಗಿರಲಿ = ಕಾಣುವ ಆಶೆಯಿರಲಿ
ನದಿಸುತ = ಭೀಷ್ಮ
ವಕ್ಕಲಗೈಸು = ಆಶ್ರಯ ಕೊಡು, ಇರಗೊಡು
ಅವತ್ತ ಗುಣದವನಿಂದ = ಅಧಮನಿಂದ
ತಳಲಗಾಳಿ = ಕೆಂಪು ಚಿಗುರೆಲೆ
ಶೆಳಗೋಲು = ದನ ಕಾಯುವರ ಬಡಿಗೆ
ಹಲವಂಗ = ಅನೇಕ ರೂಪಿ
ಮೃಗನಾಭಿ = ಕಸ್ತೂರಿ
ರಭಸ = ಧ್ವನಿ
ಸೂಸು = ಹೊರಚಲ್ಲು
ಇಂದು = ಚಂದ್ರ

೬೦

ಸಂತರಿಸಿ = ಸಂತೈಸಿ

೬೧

ಓವಿಗ = ರಕ್ಷಣೆ ಮಾಡುವ
ಮುಕುಳಿತ = ಮುಚ್ಚಿದ
ಆರ < ಯಾರ
ಆರನ್ನ < ಆರ ಅನ್ನ = ಯಾರ ಅನ್ನ
ಆರೋದಕ < ಆರ ಉದಕ
ಆರರ್ಥ = ಯಾರ ದ್ರವ್ಯ
ಆರಾಟ = ಯಾರ ಆಟ
ಆರದಲ್ಲ = ಬತ್ತದಲ್ಲ
ಆರುವರ್ಜಿತ = ಷಡೂರ್ಮಿವರ್ಜಿತ(?) (ಕ್ಷುಧೆ, ತೃಷೆ, ಶೋಕ, ಮೋಹ, ಜರೆ, ಮೃತ್ಯು), ಕಾಮಕ್ರೋಧಾದಿ ಷಡ್ರಿಪು (?)
ಒಳಗಿದ್ದವರು = ತತ್ವದೇವತೆಗಳು
ಬತ್ತಲಚ್ಚಂದಿಯಾಡೇ = ಬತ್ತಲೆ ಕುಣಿದರೆ, ಮನಬಂದಂತೆ ಚರಿಸಲು

೬೨

ಪ್ರಾಚುರ್ಯ = ವಿಪುಲ
ಪ್ರಥಮ = ಶ್ರೇಷ್ಠ, ಮುಖ್ಯ
ಪ್ರತಿಭಟಿಸು = ಕೋಪಗೊಳ್ಳು, ಪ್ರತಿಧ್ವನಿಮಾಡು
ಬಾತು = ಉಬ್ಬಿ
ಬಸಿದು = ಸೋರಿ, ಉಬ್ಬಿದ ಸಂತೋಷವಳಿದು
ಧಾತುಗೆಡುವೆ = ಬಲಗುಂದುವೆ
ನಾಡಿ = ಗಳಿಗೆ ಕಾಲ, ಚೇತನರಲ್ಲಿರುವ ನಳಿಕೆ
ಜಾಡಮಯ್ಯ = ನೇಕಾರ
ಬಾಡಿಬೇಡುವ = ನಮ್ರತೆಯಿಂದ ಕೇಳುವ
ಹೋಡಿನವ = ಗರ್ವಿಷ್ಟ, ಅಹಂಕಾರಿ
ಅಪಯನ = ವಿರುದ್ಧ, ಎದಿರಾದ, ಹಾನಿಮಾಡುವ
ಸಪುತಾರ್ಚಿಸ್ತಂಭ = ಅಗ್ನಿಸ್ತಂಭ

೬೩

ಸಯವಾಗಿ = ಸರಿಯಾಗಿ
ಕರೇಮಣಿ ಕಟ್ಟಿರೆ = ಒಡೆಯನೆಂದು, ಪತಿಯೆಂದು ಭಾವಿಸಿರೆ, ದೀನತ್ತ ಹೊಂದಿರಲು
ಸರಿಯದೆ ಸಮೀಪವಿರಲು = ಸದಾ ಹತ್ತಿರವಿರಲು
ಭಯದ ಗಂಟಲನೊದದು = ಕಷ್ಟದ ಕುತ್ತಿಗೆ ಒತ್ತಿ

೬೪

ದುರ್ಲಭೆ = ಅಪ್ರಾಪ್ಯಳು
ಸುಲಭೆ = ಸುಲಭರಾಗಿ ಲಭ್ಯವಾಗದಿದ್ದರೂ ಸುಲಭಳು
ದುರ್ಗಮ = ತಿಳಿಯಲಶಕ್ಯ
ಭರ್ಗಾದಿಗಳು = ರುದ್ರಾದಿಗಳು
ದುರ್ಗಣ = ದೈತ್ಯಸಮೂಹ
ಸಂಸೃತಿ = ಸಂಸಾರ
ನಿರ್ಗಮ = ಬಿಡುಗಡೆ
ದುರ್ಜಯೆ = ಗೆಲ್ಲಲು ಶಕ್ಯವಿಲ್ಲದವಳೆ
ದುರ್ಧಷೆ ಶಕ್ತಿ = ಸೈರಿಸಲಾರದಷ್ಟು ಶಕ್ತಿ, ಅಪರಿಮಿತ ಶಕ್ತಿ
ಗರ್ಗರ ಶಬ್ದ = ಪ್ರವಾಹದ ಗರಗರ ಧ್ವನಿ
ನಿರ್ಗಳಿತನಾಗಿ = ಕಂಠ ಶ್ವಾಸ ಕುಂದದೆ ತಡೆಯಿಲ್ಲದಂತೆ
ಸುರ್ಗಣ = ದೇವತಾಗಣ
ಕರ್ಗಳಿಂದಲಿ = ಕೈಗಳಿಂದ
ಅರಿದಾಂಕುಶ = ಚಕ್ರ, ಶಂಖ, ಅಂಕುಶ
ಪರಶು = ಚಪ್ಪಗೊಡಲಿ
ನೇಗಲಿ = ನೇಗಿಲ
ಮುದ್ಗರ = ಭಾರವುಳ್ಳ ದೊಣ್ಣೆ
ಚಾಪ = ಬಿಲ್ಲು
ಮಾರ್ಗಣ = ಬಾಣ
ಮುಸಲ = ಒನಕೆ, ಗದೆ
ಕರಾಳ ವದನೆ = ಭಯಂಕರ ಮುಖವುಳ್ಳವಳು (ದೈತ್ಯರಿಗಾಗಿ)
ಹಸ್ತಿ = ಆನೆ
ಕ್ಷಿತಿಭಾರ ಹರಣೆ = ಭೂಭಾರ ನಿವಾರಣೆ
ದಿತಿಜಾತೆ = ದೈತ್ಯ
ನಿಗ್ರಹೆ = ಸಂಹಾರಕಳೆ
ಕಲ್ಮಷೆ = ಪಾಪವಿದೂರೆ
ರೌದ್ರೆ = ಉಗ್ರಸ್ವರೂಪಳೆ
ತ್ರಿನೇತ್ರೆ = ಮೂರುಕಣ್ಣುಗಳುಳ್ಳ
ಅಪ್ರತಿಹತೆ = ಎಣಿಕೆಯಿಲ್ಲದ, ಬಹು ಹೆಚ್ಚಿನ
ಕಪರ್ದಿಯೆ = ಮಂಗಳಪ್ರದಳೆ
ವಾಲಗ = ಸೇವೆ
ಏಳಲು = ಉದಾಸೀನ
ಧಾತ್ರಿತ್ರಯಕೆ = ಮೂರುಲೋಕಕ್ಕೆ
ನೇತ್ರತ್ರಯ = ಶಿವ
ಸುತ್ರಾಮ = ಇಂದ್ರ
ಘಾತ್ರವಾದ = ಗಡುತರವಾದ
ಮಹಾಹಲಹಲ = ಅತಿದಾರುಣವಾದ ಕಾಳಕೂಟ ವಿಷ
ಗಾತ್ರವನು ಬಚ್ಚಿಟ್ಟು = ರೂಪವನು ಬದಲಿಸಿ (ಮೋಹಿನಿರೂಪ)
ದಾನವಮರೋಡೆ = ದೈತ್ಯರು ದೇವತೆಗಳು ಓಡಿಹೋಗಲು
ಪನೆಯ = ಬಂಗಾರದ
ಮಾತ್ರದಲ್ಲಿ = ಕ್ಷಣಾರ್ಧದಲ್ಲಿ
ಪಶುಪತಿ = ರುದ್ರ
ಮೂರುರು = ತ್ರಿಪುರ
ಅಸಿ = ಖಡ್ಗ
ಅಸುರುಹ = ದೈತ್ಯರ ಪ್ರಾಣಾಂತರ
ಹನುಮ = ಜ್ಞಾನ
ಜಗಸೇತುವೆ = ಪರಮಾತ್ಮ
ಭೂಮಿನೀಯ = ನರಕಾಸುರ
ಉರುಳಿ = ಉಳಿಸಿ
ಹರಹಿ = ಹರಡಿ

೬೬

ಗೀರ್ವಾಣರು = ದೇವತೆಗಳು
ಕೋಣಿ = ದಿಕ್ಕುಗಳು
ವಿಕೋಣಿ = ಉಪದಿಕ್ಕುಗಳು
ಚಂದದ ಸುಂದರ ರಸಾಯನ =
ಭೋಕ್ತನು = ಮನೋತತ್ವರಸಮೀರಿದ ಮಹ ತತ್ತ್ವಗತವಾದ ಪ್ರಾಣಾಖ್ಯ ರಸವನ್ನು ಸ್ವೀಕರಿಸುವವ
ತರಣಿ......ನೀನೆ = (ಇದರಲ್ಲಿ ಷಟ್ಪ್ರಶ್ನೋಪನಿಷತ್ ಪ್ರಮೇಯ ಅಡಕವಾಗಿದೆ) ಹಗಲಿಗೆ, ಪುರುಷ ಹಾಗೂ ಪುರುಷ ರೇತಸ್ಸಿಗೆ, ಉತ್ತರಾಯಣಕ್ಕೆ, ಶುಕ್ಲಪಕ್ಷಕ್ಕೆ ವಾಯುದೇವರು ಅಭಿಮಾನಿಗಳು

ಇರುಳು.... ನಿನ್ನ ರಮಣಿ = ರಾತ್ರಿಗೆ ಸ್ತ್ರೀ ಹಾಗೂ ಸ್ತ್ರೀಲೋಹಿತ, ದಕ್ಷಿಣಾಯನಕ್ಕೆ, ಕೃಷ್ಣಪಕ್ಷಕ್ಕೆ ಭಾರತೀದೇವಿಯರು ಅಭಿಮಾನಿ

೬೭

ಕುಲಶಧರ = ಇಂದ್ರ
ಜಲಜಾಪ್ತ = ಸೂರ್ಯ
ಹುಲು = ಕ್ಷುದ್ರ
ಬಿಡಾಲ = ಬೆಕ್ಕು, ಸಣ್ಣ ರೂಪ
ಮೇರು ಭಾಗ = ಆನಂದಗಿರಿ
ಕರುಣಾಭಿಮಾನಿಗಳ = ಇಂದ್ರಿಯಾಭಿಮಾನಿಗಳ
ನೊರಜು = ನುಸಿ, ದೋಮಾರಿ
ಪುರುಹೂತನ ವೈರಿ = ಇಂದ್ರನ ಶತ್ರುವಾದ ಇಂದ್ರಜಿತು
ಹರಿಯ ರೂಪಾನಂತ ಧರಿಪನೆ = ದೇವರ ಪ್ರತಿರೂಪಕ್ಕೆ ತಕ್ಕಂತೆ, ಅವನಾಜ್ಞೆಯಿಂದ ಅವನ ಸೇವೆಗಾಗಿ ಒಂದೊಂದು ರೂಪ ಧರಿಸುವವನೆ
ಭರಣ = ಧರಿಸಿರುವ
ಆರಬ್ಧಾಂತಗಾಮಿನಿ = ಮೊದಲಿಂದ ಕೊನೆಯವರೆಗೆ ತಿರುಗುವವ
ಜಿತಶಕ್ರ = ಇಂದ್ರಜಿತು
ಸುತ್ರಾಮಸುತ = ದೇವೇಂದ್ರನ ಮಗ, ಅರ್ಜುನ
ಸೋಮಾರ್ಕ = ಚಂದ್ರಸೂರ್ಯ

೬೮

ಮದನನೃಪನನುಜ = ದುರ್ಯೋಧನನ ತಮ್ಮ ದುಶ್ಶಾಸನ
ಶಣಿಸುವರಿಗೆ = ವೈರಿಗಳಿಗೆ
ನೂರಾರು ಖಂಡಗ... ಹಸ್ತ = ವಲಲ ವೇಷದಿಂದ ಅಡುಗೆ ಮಾಡಿದ್ದು
ಮರಾರಿ = ರುದ್ರ
ವಾರಣ = ಆನೆ
ಬಿಸಜಸಖ = ಸೂರ್ಯ

೬೯

ಮೃಗೇಂದ್ರನಗದ್ದುಗೆ = ಸಿಂಹಾಸನ
ಕಂಜಸಖ = ಸೂರ್ಯ
ಕಂಜಮಿತ್ರನ ಮಗ = ಸೂರ್ಯನ ಮಗ ಸುಗ್ರೀವ
ಕುಂಜರನಾಥನ ಮಗ = ಇಂದ್ರಸುತ ವಾಲಿ
ಪುಂಜರ = ಸಮೂಹ
ನಂಜು = ವಿಷ

ಜಂಝಾಳ < ಜಂಝಾನಿಲ = ಮಳೆಯೊಡನೆ ಬರುವ ಬಿರುಗಾಳಿ
ಗುಂಜಿತೂಕದಿನಿತು = ಸ್ವಲ್ಪವೂ
ಧನಂಜಯಗೆ = ಅಗ್ನಿಗೆ
ಎಡೆಣಿಸು = ಆಹುತಿ ನೀಡು
ವ್ಯಂಜಕ = ಸ್ಪಷ್ಟವಾಗಿ
ಕಿಂಜಲ್ಕವಾಸ = ಹೃತ್ಪದ್ಮದಲ್ಲಿ ಮೂಲೇಶನಂಘ್ರಿ ಮೂಲದಲ್ಲಿದ್ದು ಪೂಜೆ ಮಾಡುವವನು
ಜಿಗುಳಿ = ರಕ್ತ ಹೀರುವ ಹುಳ
ಆಹಿ < ಅಹಿ = ಸರ್ಪ
ತರುಬು = ತಡೆ
ಅರ್ತಿ = ಪ್ರೀತಿ
ಆರ್ತಿ = ಬಯಕೆ, ಅಪೇಕ್ಷೆ

೭೦

ಪಾರ್‍ಯಾಡು = ಹಾರಾಡು
ಕಚ್ಚುಟ = ಕೌಪೀನ, ಲಂಗೋಟಿ
ವೀತಿಹೋತ್ರ = ಅಗ್ನಿ
ಖದ್ಯೋತ ಮಂಡಲ = ಸೂರ್ಯ ಮಂಡಲ
ಪೊಳ್ಳು = ಸುಳ್ಳು
ಪೂತರೆ = ಪರಿಶುದ್ಧನಾದ
ಪೋತಭಾವ = ನಿರ್ಮಲಾಂತಃ
ಕೈಟಭಾರಿ (ಕೈಟಭ + ಅರಿ) = ಕೈಟಭನೆಂಬ ದೈತ್ಯನ ವೈರಿ, ವಿಷ್ಣು
ಅವಧಾನ ಮಾಡಲಿ = ಧರಿಸಲಿ
ಮುಂದಣ ವಾಣೀಶ = ಮುಂಬರುವ ವಾಣಿಯ ಅರಸ, ಬ್ರಹ್ಮ

೭೧

ಸ್ಮೇರಾನನ (ಸ್ಮೇರ + ಆನನ) = ಮುಗುಳುನಗೆಯ ಮುಖ, ಮುಖ ಮಂದಹಾಸ
ಸಾಮವಿಖ್ಯಾತ = ವೇದಪ್ರಸಿದ್ಧ
ಗುರುಲಘು = ಹಿರಿ-ಕಿರಿಯ
ಗುರು = ಹಿರಿತನ
ಅಸಂಗ = ಮುಖ್ಯಪ್ರಾಣ
ಬೆಸಸು = ಹೇಳು
ಆಂಘ್ರಿ ಎಸಳು = ಪಾದ ಕಮಲ, ಹೂವಿನ ಎಸಳು
ದುರ್ಮೋಷದ = ದುರ್ಮತಿ, ಮಹಾಪಾಪಿ
ಮುಂದುರವಣಿಸಿ = ಬಹುತ್ವರೆಯಿಂದ
ಕೋಪಗಡಿ = ಸಿಟ್ಟಿಗೆದ್ದು
ಬೀಸ್ಗರ = ನಾಶ, ಕೊನೆಗಾಲ
ರುಧಿರ = ರಕ್ತ

೭೨

ಯೋಗ = ಧ್ಯಾನ, ಯೋಗತೆ
ನಾಗಾರಿ = ಗರುಡ
ಭೋಗ = ಸುಖಾನುಭವ
ಭಾವಿ ವಾಗೀಶ = ಭಾವಿ ಬ್ರಹ್ಮ
ಮಣಿಮಾನ = ಮಣಿಮಂತ
ಕುಶಲಮತಿ = ಚುರುಕುಬುದ್ಧಿ, ಯಥಾರ್ಥಬುದ್ಧಿ
ಹಸನಗೆಡಿಸು = ಸ್ಥಿತಿಗೆಡಿಸು
ದ್ವಿಷಗ = ದ್ವೇಷಿಗ, ವೈರಿ
ಸ್ತೌತ್ಯ < ಸ್ತುತಿ
ಮರುಳಿ < ಮರಳಿ = ಪುನಃ
ರಸಪೂರಿತ = ಸತ್ವಯುತ
ತ್ರಿದಶ ಮೇಲೇಳು = ಮೂವತ್ತೇಳು
ದರುಶನ < ದರ್ಶನ = ತತ್ತ್ವಶಾಸ್ತ್ರ
ದಾವಾ = ಕಾಡಗಿಚ್ಚು

೭೩

ಚರಣಡಿ = ಕಾಲಡಿ
ಜಿಗುಳುಪೋಗೆ = ಕಳಚಿ ಬೇರ್ಪಡಲು
ಜಯತನುಜ = ಪವಮಾನ
ಶ್ವಬಚಿ < ಶ್ವಪಚಿ = ಚಾಂಡಾಲ
ಅನುವು = ಆಶ್ರಯ, ಅನುಕೂಲ
ತಮಸು = ಅಜ್ಞಾನ, ಅಂಧಕಾರ

೭೪

ಮಧುಪ = ಭ್ರಮರ
ಧೈರ್ಯ = ದಿಟ್ಟತನ, ತಾಳ್ಮೆ
ಯೋಗ = ಸದ್ಗುಣ, ಉತ್ಸಾಹ, ಏಕಾಗ್ರತೆ
ಧುರ್ಯ = ಮುಂದಾಳು, ನಾಯಕ
ಪರಣಾ = ಜೀವ, ಮುಖ್ಯಪ್ರಾಣ(?)
ಅನುಮಾನ ತೀರಥ = ಮಧ್ವಾಚಾರ್ಯರು
ಕೋಮಲಮತಿ = ನಿರ್ದುಷ್ಟಜ್ಞಾನ

೭೫

ಪಂಚಪರಣ = ಪಂಚಪ್ರಾಣ, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ
ಗಣಣೆ ಮಾಡದೆ = ಲೆಕ್ಕಿಸದೆ
ಬೆಳಗು = ಬಿಂಬ (?)
ಅನ್ಯೋನ್ಯ = ಪರಸ್ಪರ ಸ್ನೇಹ
ಚಿಣ್ಣ = ಬಾಲಕ, ಚಿಕ್ಕ ಹುಡುಗ
ಅವಿಚ್ಛಿನ್ನ = ನಾಶರಹಿತ, ತುಂಡಾಗದು
ಪರಶುಕ್ಲತ್ರಯ = ವಾಯುದೇವರು
ಬಿನಗು = ನೀಚ, ಪಾಮರ

ವೆಕ್ಕಸ = ಕಠಿಣ, ಕ್ರೂರ
ಋಷಿಕಲ್ಪ = ಯತಿಕಲ್ಪ (ಯತಿಪ್ರಣವಕಲ್ಪ)
ನಿಶಿಕರ = ಚಂದ್ರ
ಎರಡಾರು ಪುಂಡ್ರಮುದ್ರೆಧರರು = ವೈಷ್ಣವರು, ಮಾಧ್ವರು
ಸರಸಿಜನಾಭ ಮುನಿ = ಪದ್ಮನಾಭ ತೀರ್ಥರು
ಏಕೋದರ = ತಮ್ಮ
ವರ್ನಿಸೆ < ವರ್ಣಿಸೆ

೭೬

ಜಯದೇವಿ....ಆಶ್ರಮಮಾಡಿಕೊಂಡಿಪ್ಪ ಜಯಾಪತಿ ಸಂಕರುಷಣನನ್ನು ಆಶ್ರಯ ಮಾಡಿರುವ ಶೇಷದೇವರು
ತಪೋವಿತ್ತಪ = ತಪಸ್ಸೇನಿಧಿಕನಾದ ಯೋಗಿಶ್ರೇಷ್ಠ
ಲಯವಿವರ್ಜಿತ = ನಾಶರಹಿತ
ಸ್ವಯಮಾಗಿ = ಸ್ವತಃ, ಸಮೀಚೀನವಾಗಿ
ಆಯುತಕ್ಕಾದರೂ = ಉಚಿತವಾದರೂ
ತ್ರಯನಾಮ = ಮೂರುನಾಮ, ಅಚ್ಯುತ, ಅನಂತ, ಗೋವಿಂದ
ಕರ್ಮಕ್ಷಯ = ಕರ್ಮನಾಶ
ಪಯ = ಹಾಲು
ಪಯೋಧರಗಳ ತಿನದಂತೆ = ಮೊಲೆಯುಣ್ಣದಂತೆ, ಮತ್ತೆ ಹುಟ್ಟದಂತೆ
ಭಯಕೃದ್ಭಯನಾಶ = ಭಯ ತೋರಿ ಭಯನಾಶ ಮಾಡುವವ
ರಾವುತ =ಕುದುರೆಯ ಸವಾರ
ಪಾವಿನಪರಿ = ಶೇಷಾಂಶರಾದ
ತುಷ್ಟ = ತೃಪ್ತ
ನಿಷ್ಠೆ = ವೃತಾದಿ ನಿಯಮದಿಂದ ಜ್ಞಾನಪೂರ್ವಕ ಭಕ್ತಿವಿಶ್ವಾಸ ಮಾಡುವವ
ಬೆಸನೆ ಬೆಸನೆ = ಒಬ್ಬರೂ ಕಾಣದಂತೆ
ಮೇಘನಾಥಪುರ = ಇಂದ್ರಪುರ (?)
ಕಕುರವೇಣಿ = ಕಾಗಿನಾ ನದಿ

೭೭

ಆಪರ್ಥ < ಅಪಅರ್ಥ = ವಿರುದ್ಧವಾದ ಅರ್ಥ
ಭೂಪಾರ = ಭೂಮಿಯಲ್ಲಿರುವ ಎಲ್ಲ ವಸ್ತು
ಕೂಪಾರ = ಸಾಗರ
ರಾಗಂಗಳ = ಕಾಮಕ್ರೋಧಾದಿಗಳ
ಹಕ್ಕಲ = ಕ್ಷುದ್ರವಾದ ಅನ್ಯಥಾಮತಿ
ಧ್ರುವ = ನಿಶ್ಚಯವಾಗಿ (ಇವರೇ ಧ್ರುವರಾಜರೆಂದು)
ವೃಂದಾರಕ ಮುನಿ = ದೇವಋಷಿ

ಎರಡೊಂದು ಮಾರ್ಗ = ಜ್ಞಾನ, ಭಕ್ತಿ, ವೈರಾಗ್ಯ
ಬೇವು = ವಿಷ
ಅಟನ್ಯ = ಹೀರಿ, ನಾಶಮಾಡಿ

೭೯

ಹಯವಕ್ತ್ರ = ಹಯವದನ
ಜಡಧರಿವಾಣದಲಿ = ನವರತ್ನಖಚಿತವಾದ ಬಂಗಾರದ ಹರಿವಾಣದಲ್ಲಿ
ಉಡುರಾಜಮುಖ = ಚಂದ್ರಮುಖ
ವಾಮದೇವ = ರುದ್ರದೇವರು
ಅಜ = ಬ್ರಹ್ಮ
ಗಜವೈರಿ = ನಕ್ರ
ಅಜಪದ = ಬ್ರಹ್ಮಪದ
ಇನತನೋದ್ಭವ = ಸೂರ್ಯನ ಮಗ, ಯಮ

೮೦

ತಿಳಿಪಿ = ತಿಳಿಸಿ
ಹರಿ = ಸಿಂಹ
ರುಕ್ಷ = ಕಠಿಣವಾದ, ನೀರಸವಾದ
ಅಡವಿಗೆ ಬಿದ್ದವನ = ಮಾರ್ಗತಪ್ಪಿದವನ
ಜಡಮತಿ = ಅಜ್ಞನ
ಕೆಡಿಸುವ ಕಳ್ಳರ = ತತ್ವದ್ವೈತ್ಯರ, ಷಡ್ವೈರಿಗಳ

೮೧

ಹವಣರ = ಸಿದ್ಧರ
ಸಂದಿಸಿದೆನೊ = ಸೇರಿದನೊ

೮೨

ಪಾಪಪುಂಜರ = ಪಾಪದ ರಾಶಿ
ಮೂರಕ್ಕೆ = ಹೆಣ್ಣು, ಹೊನ್ನು, ಮಣ್ಣಿಗೆ
ಶ್ರೀನಾರಾಯಣಯೋಗಿ = ಶ್ರೀಶ್ರೀಪಾದರಾಜರು
ಮೇಧ = ಯಾಗ
ಗೋಘೃತ = ಪರಿಶುದ್ಧವಾದ ಭಕ್ತಿ
ನಾಶವಿಲ್ಲದ ಜ್ಞಾನ = ದೃಢಜ್ಞಾನ, ನಿಶ್ಚತಜ್ಞಾನ
ಮಿಗಿಸಿದ = ಉಳಿಸಿದ

॥ ಶ್ರೀ ಕೃಷ್ಣಾರ್ಪಣಮಸ್ತು ॥



ಶ್ರೀ ವಿಜಯದಾಸರು

**॥ ಶ್ರೀ ಗುರುರಾಜೋ ವಿಜಯತೇ ॥**

## ಭಗವದವತಾರಗಳ ಸ್ತೋತ್ರ ಸುಳಾದಿಗಳ ಲಘುಟಿಪ್ಪಣಿ

**(ಸುಳಾದಿಗಳ ಅನುಕ್ರಮ ಸಂಖ್ಯೆ ಕೊಡಲಾಗಿದೆ)**

೧

ಕೃತಯುಗದಲ್ಲಿ ಶುಕ್ಲ ಸಂವತ್ಸರದ ಮಾಘ ಶು॥೭ ಅಶ್ವಿನೀ ನಕ್ಷತ್ರ, ಸಾಧ್ಯನಾಮಯೋಗ ಭಾನುವಾರ ದಿನ ಹಗಲು ೮ ಘಳಿಗೆಗೆ **ವರಹಾವತಾರವಾಯಿತು.**

ಹಿರಣ್ಯಾಕ್ಷನನ್ನು ಸಂಹಾರಮಾಡಿ ಸಾಧನಕ್ಷೇತ್ರವಾದ ಈ ಭೂಮಿಯನ್ನು ತಂದುದೇ ಈ ಅವತಾರದ ಮಹತ್ಕಾರ್ಯವಾಗಿದೆ.

ಉರಗಗಿರಿಯಲ್ಲಿ ಅಂದರೆ ಶೇಷಾಚಲದಲ್ಲಿ, ಈಗಿನ ವೇಂಕಟಗಿರಿಯಲ್ಲಿ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ಭಾಗಕ್ಕಿರುವ ದೇವಾಲಯದಲ್ಲಿ ವರಾಹ ದೇವರಿದ್ದಾರೆ, ತಿರುಪತಿಯ ನಿಯಮದಂತೆ ಶ್ರೀ ವೇಂಕಟೇಶನ ದರ್ಶನಕ್ಕೆ ಮುಂಚೆ ಈ ವರಾಹದೇವರ ದರ್ಶನ ಪಡೆದರೆ ಕ್ಷೇತ್ರದರ್ಶನದ **ಪೂರ್ಣ ಫಲವೆಂದು** ಹೇಳುತ್ತಾರೆ.

೨

ಪರಮಾತ್ಮನ **ನಾಲ್ಕನೇ ಅವತಾರವೇ ನಾರಸಿಂಹ.** ತನ್ನ ಮಗನಾದ, ಪರಮ ಭಾಗವತ ಶಿರೋಮಣಿಯಾದ ಪ್ರಹ್ಲಾದನನ್ನು ಹಿರಣ್ಯಕಶ್ಯಪನು ಕಾಡಿಸಲು, ಭಕ್ತವರನಾದ ಪ್ರಹ್ಲಾದನನ್ನು ರಕ್ಷಿಸಲು ಪರಮಾತ್ಮನು ನರಸಿಂಹರೂಪದಿಂದ ಕಂಬದಿಂದ ಪ್ರಾದುರ್ಭವನಾದನು.

ಕೃತಯುಗದಲ್ಲಿ ಅಂಗೀರಸ ಸಂವತ್ಸರದ ವೈಶಾಖ ಶುದ್ಧ ೧೪ ಸ್ವಾತಿ ನಕ್ಷತ್ರ, ಪರಿಘನಾಮ ಯೋಗ, ಶನಿವಾರದ ದಿನ ಹಗಲು ೨೮ ಘಳಿಗೆಗೆ ಆರ್ಭಟಿಸುತ್ತ ನರಸಿಂಹನು ಹಿರಣ್ಯಕಶ್ಯಪನನ್ನು ಸಂಹರಿಸಿದನು.

೩

ಶ್ರೀಮನ್ನಾರಾಯಣನು ಅದಿತಿ ದೇವಿಯಲ್ಲಿ ತ್ರೈತಾಯುಗದಲ್ಲಿ ಧಾತುನಾಮ ಸಂವತ್ಸರ ಭಾದ್ರಪದ ಶುದ್ಧ ೧೨ ಶ್ರವಣಾನಕ್ಷತ್ರ ಧ್ರುತಿನಾಮಯೋಗ, ಶುಕ್ರವಾರದ ದಿನ ಹಗಲು ೧೫ ಘಳಿಗೆಗೆ **ವಾಮನನೆಂಬ** ನಾಮದಿಂದ ಅವತರಿಸಿದನು.

ವಾಮನನು ವಿರೋಚನನ ಮಗನಾದ ಬಲಿಚಕ್ರವರ್ತಿಯಿಂದ ಮೂರು ಪಾದ ಭೂಮಿಯನ್ನು ದಾನ ಪಡೆದನು. ಒಂದು ಪಾದ ಭೂಮಂಡಲವನ್ನೆಲ್ಲ ವ್ಯಾಪಿಸಿತು. ಎರಡನೆಯ ಪಾದ ಆಕಾಶಕ್ಕೆ ವ್ಯಾಪಿಸುತ್ತ ಬ್ರಹ್ಮಾಂಡ ಖರ್ಪರವನ್ನು ಭೇದಿಸಿತು. ಆಗ ಸುರನದಿ ಹುಟ್ಟಿತು. ಮೂರನೆಯ ಪಾದದಿಂದ ಬಲಿಯನ್ನು ರಸಾತಳಕ್ಕೆ ಮೆಟ್ಟಿದನು. ಈತನಿಗೆ ತ್ರಿವಿಕ್ರಮನೆಂದು ಹೆಸರು.

೫

ಶ್ರೀ **ಪರಶುರಾಮನಾಮಕ ಪರಮಾತ್ಮನು** ತ್ರೈತಾಯುಗದ ಪ್ರಮಾಥಿನಾಮ

ಸಂವತ್ಸರ ವೈಶಾಖ ಶುದ್ಧ ೩ ರೋಹಿಣಿ ನಕ್ಷತ್ರ ಸುಕನಾಮ ಯೋಗ, ಶನಿವಾರ ರಾತ್ರಿ ೧೧ ಘಳಿಗೆಗೆ ಅವತರಿಸಿದನು.

**ಪರಶುರಾಮ ಪರಮಾತ್ಮನ ಆರನೆಯ ಅವತಾರ.** ಕ್ಷತ್ರಿಯರ ಪಿಡುಗನ್ನು ನಿರ್ಮೂಲನಗೊಳಿಸಲು ಹಾಗೂ ವಿಪ್ರವೃಂದವನ್ನು ಸಂರಕ್ಷಿಸಲು ಪರಮಾತ್ಮನು ಭೃಗುವಂಶಜನಾದ ಜಮದಗ್ನಿ ಋಷಿಗಳಲ್ಲಿ ಅವತರಿಸಿದನು.

೬

ತ್ರೈತಾಯುಗದಲ್ಲಿ ತಾರಣನಾಮ ಸಂವತ್ಸರ ಚೈತ್ರ ಶುದ್ಧ ೯ ಪುನರ್ವಸು ನಕ್ಷತ್ರ, ಶೂಲನಾಮ ಯೋಗ, ಸೋಮವಾರದ ದಿನ ಹಗಲು ೬ ಘಳಿಗೆಗೆ **ಶ್ರೀ ರಾಮಾವತಾರವಾಯಿತು.**

೮

ಇದು ಶ್ರೀಮನ್ಮೂಲರಾಮದೇವರ ಸ್ತೋತ್ರ ಸುಳಾದಿ : ಶ್ರೀ ನರಹರಿತೀರ್ಥರಿಗೆ ಒಲಿದು ಬಂದ ವಿಷಯವನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.

ಆಚಾರ್ಯರು ನರಹರಿತೀರ್ಥರಿಂದ ತರಿಸಿ ಪೂಜಿಸಿದ ವಿಗ್ರಹಗಳು ಬಹಳ ಪುರಾತನವಾದವು. ಚತುರ್ಯುಗ ಮೂರ್ತಿಗಳೆಂದು ಪ್ರಸಿದ್ಧವಾದವು. ಇವುಗಳ ಇತಿಹಾಸ ವಾಶಿಷ್ಠ ರಾಮಾಯಣ, ಆಧ್ಯಾತ್ಮ ರಾಮಾಯಣ, ಮಾರ್ಕಂಡೇಯ ಪುರಾಣಗಳಲ್ಲಿ ಉಕ್ತವಾಗಿದೆ. ಇದೆಲ್ಲವುಗಳ ಆಧಾರದಿಂದ ಈ ಸುಳಾದಿಯಲ್ಲಿಯ ವಿಷಯವನ್ನು "ಗುರುಚರಿತೆ" ಎಂಬ ಗ್ರಂಥದಲ್ಲಿ ವಿವರಿಸಿದ್ದನ್ನು ಸಂಗ್ರಹವಾಗಿ ಇಲ್ಲಿ ಕೊಡಲಾಗಿದೆ.

ಜಗತ್ಸರ್ಜಕನಾದ **ಚತುರ್ಮುಖ** ಬ್ರಹ್ಮದೇವರು ನಾನಾವಿಧವಾಗಿ ಭಗವತ್ಪೂಜೆಯನ್ನು ಮಾಡಿ ಆನಂದ ಪಡುತ್ತಾರೆ. ಪರಮಾತ್ಮನನ್ನು ಪ್ರತಿಮೆಯ ಮೂಲಕ ಪೂಜಿಸಿ ತುತಿಸಬೇಕೆಂದು ಅವರು ತಮಗೆ ಪ್ರತ್ಯಕ್ಷರಾದ ದಿವ್ಯ ಮಂಗಳ ಮೂರ್ತಿಗಳಾದ **ಸೀತಾ ರಾಮಚಂದ್ರ ಪ್ರತಿಮೆಗಳನ್ನು** ರಚಿಸುವಂತೆ **ವಿಶ್ವಕರ್ಮನಿಗೆ** ಆಜ್ಞೆ ಮಾಡಿದರು. ರಚಿತವಾದ ಆ ಪ್ರತಿಮೆಗಳನ್ನು ತಾವು ಬಹುಕಾಲ ಪೂಜಿಸಿ ಲೋಕೋದ್ಧಾರಕ್ಕಾಗಿ ಜಾಬಾಲಿಮುನಿಗಳಿಗೆ ಕೊಟ್ಟರು. ಅಲ್ಲಿಂದ ಅದನ್ನು **ಕೈಲಾಸಪತಿ** ಪೂಜಿಸಿ **ಪಾರ್ವತಿ** ಪೂಜಿಸುತ್ತಿದ್ದಳು. ಅನಂತರ **ದಕ್ಷಪ್ರಜೇಶ್ವರನಲ್ಲಿಗೆ** ಬಂದಿತು. **ಸೌಭರಿಮುನಿಗಳು** ಅದನ್ನು ಪೂಜಿಸಿದರು. ಆಮೇಲೆ ಮತ್ತೆ ಆ ಪ್ರತಿಮೆಗಳು ಸತ್ಯ ಲೋಕದಲ್ಲಿ ಕಂಗೊಳಿಸಿದವು. ಅಲ್ಲಿಂದ ಅದು ವಿವಸ್ವಾನಿಗೆ ತಪಸ್ಸಿನಿಂದ ಲಭ್ಯವಾದವು. ಅವನು ತನ್ನ ಮಗ **ವೈವಸ್ವತ** ಮನುವಿಗೆ ಕೊಟ್ಟನು.

ಅದೇ ಸೂರ್ಯವಂಶದ ಪರಂಪರೆಯಲ್ಲಿ **ಇಕ್ಷ್ವಾಕುವು** ಈ ಪ್ರತಿಮೆಗಳನ್ನೇ ತನ್ನ ಕುಲದೇವತೆಗಳೆಂದು ಆರಾಧಿಸಿದ. ಅವನ ವಂಶಜರಾದ **ಮಾಂಧಾತ, ಅನರಣ್ಯ, ತ್ರಿಶಂಕು, ಹರಿಶ್ಚಂದ್ರ, ಸಗರ, ಭಗೀರಥ, ಅಂಬರೀಷ, ದಿಲೀಪ,** ಮೊದಲಾದ ಚಕ್ರವರ್ತಿಗಳು ಪೂಜಿಸಿದರು. **ದಶರಥ** ಚಕ್ರವರ್ತಿ ಅದನ್ನು ಬಹಳ ಭಕ್ತಿಯಿಂದ ಇಷ್ಟದೈವವೆಂದು ಆರಾಧಿಸಿ **ರಾಮಜನನವಾದ ಮೇಲೆ ಆ ಪ್ರತಿಮೆಗಳ ಹೆಸರನ್ನೇ**

**ಮಗನಿಗೂ ಇಟ್ಟ.** ಅಂದಿನಿಂದ ಆ ಪ್ರತಿಭೆ **ಮೂಲರಾಮ ಪ್ರತಿಮೆಯೆಂದು ಪ್ರಸಿದ್ಧವಾಯಿತು. ಭಗವಂತನಾದ ರಾಮನೂ** ಅದನ್ನು ಅರ್ಚಿಸಿದ. **ಅಮ್ಮನವರೂ** ಪೂಜೆ ಮಾಡಿದರು. **ಲಕ್ಷ್ಮಣನೂ** ಆರಾಧಿಸಿದ. **ಜಾಂಬವಂತರೂ** ಪೂಜಿಸಿದರು.

ರಾಮದರ್ಶನಾಕಾಂಕ್ಷಿಯಾಗಿದ್ದ **ವೇದಗರ್ಭ**ನೆಂಬುವನಿಗೆ ರಾಮದೇವರು ಆ ಪ್ರತಿಮೆಗಳನ್ನು ಪೂಜೆಗಾಗಿ ಕೊಟ್ಟರು. ಅವನು ಕೊನೆಯವರೆಗೂ ಪೂಜಿಸಿ ಮತ್ತೆ ರಾಮರ ಆ ಸ್ಥಾನಕ್ಕೆ ಒಪ್ಪಿಸಿದ. **ಹನುಮಂತ ದೇವರು** ತ್ರೇತಾಯುಗ ಮುಗಿದು ದ್ವಾಪರ ಯುಗದವರೆಗೂ ಪ್ರತಿಮೆಗಳನ್ನು ಆರಾಧಿಸುತ್ತಿದ್ದು ಸೌಗಂಧಿಕಾಪುಷ್ಪ ತರಲು ಬಂದ ಸ್ವಾಂಶರಾದ **ಭೀಮಸೇನ ದೇವರಿಗೆ** ಕೊಟ್ಟು **"ತಮ್ಮ, ಮುಂದೆ ಕಲಿಯುಗದಲ್ಲಿ ಅವತರಿಸಿ ಯತಿಯಾದಾಗಲೂ ಇದನ್ನೇ ಆರಾಧಿಸು"** ಎಂದು ಹರಿಸಿದರು.

ಪಾಂಡವರಿಂದ ಆರಾಧಿತವಾದ ಈ ಪ್ರತಿಮೆಗಳು **ಕ್ಷೇಮಕರಾಜನ** ಪರ್ಯಂತರವೂ ಅರಸರಿಂದ ಪೂಜಿತವಾಗಿ **ಗಜಪತಿಯ ಕೋಶಾಗಾರದಲ್ಲಿ** ನೆಲಸಿದ್ದವು. ಎಷ್ಟೋ ಕಾಲ ಗತಿಸಿತು.

ಶ್ರೀಮದಾನಂದತೀರ್ಥ ಭಗವತ್ಪಾದರು ಪ್ರಥಮ ಬದರೀ ಯಾತ್ರೆಯನ್ನು ಮುಗಿಸಿಕೊಂಡು ಬರುವಾಗ ಕಳಿಂಗದೇಶಕ್ಕೆ ಬಂದರು. ಅಲ್ಲಿ ಶೋಭನ ಭಟ್ಟ (ಪದ್ಮನಾಭ ತೀರ್ಥರು)ರ ಜೊತೆಗೆ **ಶಾಮಾಶಾಸ್ತ್ರಿಗಳೆಂಬ** ಮಹಾ ಪಂಡಿತರು ಆಚಾರ್ಯರೊಡನೆ ವಾಕ್ಯಾರ್ಥ ಮಾಡಿದರು. ಮಹಾ ಪ್ರತಿಭಾಸಂಪನ್ನರಾದ ಇವರು **ಆಚಾರ್ಯರ ಸಿದ್ಧಾಂತಗಳಿಗೆ ಮನಸೋತು, ಅವರ ಶಿಷ್ಯವೃತ್ತಿಯನ್ನು ಅವಲಂಬಿಸಿ** ಅವರೊಡನೆ ಸುಮಾರು ಕ್ರಿ.ಶ. ೧೨೬೨ ರಲ್ಲಿ ಉಡುಪಿಗೆ ಬಂದರು. ಉಡುಪಿಯಲ್ಲಿ ಆಚಾರ್ಯ ಮಧ್ವರಿಂದ ಆಶ್ರಮವನ್ನು ಸ್ವೀಕರಿಸಿ **'ನರಸಿಂಹತೀರ್ಥ'**ರೆಂದು ಪ್ರಖ್ಯಾತರಾದರು.

ಅಲ್ಲಿ ಆಚಾರ್ಯರ ಸೇವೆಯನ್ನು ಸ್ವಲ್ಪಕಾಲ ಮಾಡಿದ ಬಳಿಕ ಕಳಿಂಗದೇಶದಲ್ಲಿದ್ದ ಚತುರ್ಯುಗ ಮೂರ್ತಿಯಾದ ಶ್ರೀಮೂಲ ಸೀತಾರಾಮ ಪ್ರತಿಮೆಗಳನ್ನು ತರಬೇಕೆಂದು ಆಚಾರ್ಯರು ಆಜ್ಞಾಪಿಸಿದರು.

**"ತತ್ರಾಸ್ತೇ ರಾಮದೇವಃ ಸಕಲ ಸುರಪತಿ ಬ್ರಹ್ಮಪೂಜ್ಯಾಂಘ್ರಿಕುಂಜಃ ।**
**ಸೀತಾಯುಕ್ತಸ್ತಮೇನಂ ಚತುರತರಧಿಯೇ ಹಾನಯೇತ್ಯುಕ್ತ ಆಸೀತ್ ॥"**

– ಜಯತೀರ್ಥವಿಜಯ

ನರಹರಿತೀರ್ಥರು ಗುರುಗಳ ಆಜ್ಞೆಯನ್ನು ಶಿರಸಾ ವಹಿಸಿ ಅಲ್ಲಿಂದ ಹೊರಟು ತಮ್ಮ ದೇಶಕ್ಕೆ ತೆರಳಿದರು. ಅಲ್ಲಿ **ಕ್ರಿ.ಶ. ೧೨೬೩ರಿಂದ ನಲವತ್ತು ವರ್ಷಗಳ ಪರಿಯಂತರ ದೇಶದ ಆಧಿಪತ್ಯವನ್ನು** ವಹಿಸಿ ಶತ್ರುಗಳಾದ ಶಬರರಿಂದ ದೇಶವನ್ನು ರಕ್ಷಿಸಿ ದೇವ ಬ್ರಾಹ್ಮಣರ ಪಾಲನೆಯನ್ನು ಮಾಡಿದರು. ಅವರ ಶ್ರೇಷ್ಠವಾದ ಆಡಳಿತಕ್ರಮದಿಂದ ದೇಶದಲ್ಲಿ ಶಾಂತಿ ನೆಲೆಯೂರಿತು. ಅವರ ಮಹಿಮೆಯು **ಕ್ರಿ.ಶ. ೧೨೬೩ ರಿಂದ ೧೨೯೩ರ** ವರೆಗಿನ ನಾಲ್ಕು ಶಿಲಾಶಾಸನಗಳಲ್ಲಿ ಲಿಖಿತವಾಗಿದೆ. ಆ ಶಿಲಾಲೇಖಗಳು ಶ್ರೀ ಕೂರ್ಮಗ್ರಾಮದಲ್ಲಿ ಯೋಗಾನಂದ ನೃಸಿಂಹ ದೇವಾಲಯವನ್ನು ಸ್ಥಾಪಿಸಿದ ಸಂಬಂಧವಾಗಿಯೂ ವಿಶಾಖಪಟ್ಟಣದ ಸಿಂಹಾಚಲದಲ್ಲೂ ಇದೆ.

**ಹೀಗೆ ಇವರು ರಾಜ್ಯಪಾಲಕರಾಗಿದ್ದು, ಸನಾತನ ಧರ್ಮರಕ್ಷಣೆ ಮಾಡಿ ಆಮೇಲೆ ಅಲ್ಲಿ ಭಂಡಾರದಲ್ಲಿದ್ದ ಶ್ರೀ ಮೂಲ ಸೀತಾರಾಮ ವಿಗ್ರಹಗಳನ್ನು ಪಡೆದುಕೊಂಡರು** ಎಂಬ ವಿಷಯ ಆಧ್ಯಾತ್ಮ ರಾಮಾಯಣದ ೧೫ನೆಯ ಅಧ್ಯಾಯದಲ್ಲಿ ವಿವರವಾಗಿ ಕಾಣುತ್ತೇವೆ.

ಶ್ರೀ ಮೂಲ ಸೀತಾರಾಮ ವಿಗ್ರಹಗಳ ಪೆಟ್ಟಿಗೆಯನ್ನು ತೆಗೆದುಕೊಂಡು ಸಕಲ ರಾಜಮರ್ಯಾದೆಗಳೊಡನೆ ಹೊರಟು ಉಡುಪಿಗೆ ಬಂದರು. **ಪಿಂಗಳನಾಮ ಸಂವತ್ಸರ ಆಶ್ವೀಜ ಮಾಸದಲ್ಲಿ ಎಂದರೆ ೨೫ನೆಯ ಅಕ್ಟೋಬರ್ ೧೭೧೭ರಂದು ಆಚಾರ್ಯರಿಗೆ ಆ ವಿಗ್ರಹಗಳನ್ನು ಒಪ್ಪಿಸಿದರು.** ಆಚಾರ್ಯರು ಆ ಪ್ರತಿಮೆಗಳನ್ನು ಅಂದಿನಿಂದ ಎಂಭತ್ತು ದಿನಗಳವರೆಗೆ ಪೂಜೆ ಮಾಡಿ ಶ್ರೀ ಪದ್ಮನಾಭ ತೀರ್ಥರಿಗೆ ಕೊಟ್ಟು ಬದರಿಗೆ ಪ್ರಯಾಣ ಮಾಡಿದರು.

ಶ್ರೀ ಪದ್ಮನಾಭ ತೀರ್ಥರಿಂದ ರಕ್ತಾಕ್ಷಿ ನಾಮ ಸಂವತ್ಸರ ಕಾರ್ತೀಕ ಬ॥೧೪ ದಿನ ವೇದಾಂತ ಸಾಮ್ರಾಜ್ಯವನ್ನು ನರಹರಿತೀರ್ಥರು ವಹಿಸಿಕೊಂಡು ಒಂಭತ್ತು ವರುಷ ಸಂಸ್ಥಾನಾಧಿಪತಿಗಳಾಗಿದ್ದು ಶ್ರೀ ಮಾಧವತೀರ್ಥರಿಗೆ **ಕ್ರಿ.ಶ. ೧೫೫೫ ರಲ್ಲಿ ವೇದಾಂತ ಸಾಮ್ರಾಜ್ಯವನ್ನು ವಹಿಸಿಕೊಟ್ಟು ಶ್ರೀಮುಖ ಸಂವತ್ಸರದ ಪುಷ್ಯ ಬ ॥ ೭ ದಿನ (ದಿನಾಂಕ ೨೯-೧೨-೧೫೫೫ ಬುಧುವಾರ)** ನಾರಾಯಣನ ಪಾದಕಮಲವನ್ನು ಸೇರಿದರು. ಇವರ ಬೃಂದಾವನ ಹಂಪೆಯಲ್ಲಿ ಚಕ್ರತೀರ್ಥದ ಹತ್ತಿರ ನದಿ ಮಧ್ಯದಲ್ಲಿ ಒಂದು ಬಂಡೆಯ ಮೇಲಿದೆ.

ಹೀಗೆ ಮಹಾವಿಭೂತಿ ಪುರುಷರಿಂದ ಅರ್ಚಿತವಾದ ಪ್ರತಿಮೆಯಲ್ಲಿ ಭಗವತ್ಸಾನ್ನಿಧ್ಯವಿಷ್ಟಿದೆಯೆಂದು ಹೇಳಬೇಕಾಗಿಯೇ ಇಲ್ಲ 'ಪ್ರತಿಮಾಯಾಂತು ಸಾನ್ನಿಧ್ಯಂ ಅರ್ಚಕಸ್ಯ ತಪೋ ಬಲಾತ್' ಎಂಬ ಪ್ರಮಾಣವನ್ನು ವಿಚಾರ ಮಾಡಿದರೆ ಜಗತ್ಪಿತೃಗಳಾದ ಲಕ್ಷ್ಮೀನಾರಾಯಣರು, ಚತುರ್ಮುಖ ಅವತಾರತ್ರಯದಲ್ಲೂ ವಾಯುದೇವರು ಪೂಜಿಸಿದ್ದಾರೆಂದಮೇಲೆ ಅದೇ ಈಗ ಪ್ರತ್ಯಕ್ಷ ದೇವರೆನ್ನಬಹುದು. ತಿರುಪತಿಯಲ್ಲಿ ಶಿಲಾವದ್ದೃಶ್ಯತೇ ಹರಿಃ ಎನ್ನುವ ಪ್ರಮಾಣದಂತೆ 'ಲೋಹವದ್ದೃಶ್ಯತೇ ಹರಿಃ' ಎಂದು ಇಲ್ಲಿಯೂ ಹೇಳಬಹುದು. ಇಂತಹ ಪವಿತ್ರತಮ ಪ್ರತಿಮಾ ಸ್ಪರ್ಶ ಮಾಡುವವರೇ ಪುಣ್ಯಶಾಲಿಗಳು, ವಿಭೂತಿ ಪುರುಷರು. ಈ ಪ್ರತಿಮಾ ಆರಾಧಕರು ಮನುಷ್ಯರೇ ಅಲ್ಲ ಅವರು ಅಂಶಪುರುಷರು ಎಂದು ಪುರಾಣೋಕ್ತಿ.

**ಆಚಾರ್ಯರ ಮುಖ್ಯ ಸಂಸ್ಥಾನದಲ್ಲಿ ಇಂದಿಗೂ ಈ ಮೂರ್ತಿಗಳು ಕಂಗೊಳಿಸುತ್ತಿವೆ.**

**ವೃತ್ತ ಪೀಠಾ ಲಂಬಕರ್ಣಾ ತ್ರಿವಿಕ್ರಾ ಸೀತಯಾ ಸಹ ।**
**ಕರ್ಣತೋಕವರ್ಣತಶ್ಚೈವ ಪೀಠತಃ ಪರಿಮಾಣತ ॥**
**ಸೀತಾರಾಮಾರ್ಚಯೋಃ ಸಾಮ್ಯಮ್ ।**

ಎಂಬ ನುಡಿಯಂತೆ, ದುಂಡು ಪೀಠದ ಜೋಲು ಕಿವಿಯ ಸೊಟ್ಟರಾಮನನ್ನು ನೋಡುವುದೇ ಬಲುಚನ್ನ ಅದಕ್ಕಾಗಿ ಶ್ರೀ ಜಗನ್ನಾಥದಾಸರು **'ರಾಮನ ನೋಡಿರೈ ನಿಮ್ಮಯ ಕಾಮಿತ ಬೇಡಿರೈ'** ಎಂದು ಹೇಳುತ್ತ **"ಬಲು ನಂಬಿದ ಭಕುತರ ಕಲಿ ಮಲಗಳ ಕಳೆದ ಮನದೊಳು ಪೊಳೆದ । ಸುಲಲಿತ ಗುಣನಿಧಿ ವಸುಧೇಂದ್ರಾರ್ಯರ**

**ಪ್ರಿಯ ಕವಿಜನಗೇಯ**'' ಎಂದು ಅವನ ಭಕ್ತ ವಾತ್ಸಲತೆಯನ್ನು ವರ್ಣಿಸುತ್ತ "**ಆರಾಧಿಪರಿಗೆ ಅಖಿಳಾರ್ಥಗಳನು ಕೊಡುವ ದುರಿತವ ತಡೆವ**'' ಎಂದಿದ್ದಾರೆ.

೧೧

ಸಮುದ್ರಮಥನ ಸಮಯದಲ್ಲಿ ಶ್ರೀಹರಿಯು ಅಮೃತ ಕಲಶವನ್ನು ಹಿಡಿದುಕೊಂಡು ಸಾಗರದಿಂದ ವ್ಯಕ್ತನಾದನು ಇವನೇ ಧನ್ವಂತರಿ ಎನಿಸಿದನು. – ಶ್ರೀಮದ್ಭಾಗವತ

೧೨

ಮೇರದೇವಿ ಮತ್ತು ನಾಭಿ ಮಹಾರಾಜರು ಶ್ರೀಹರಿಯನ್ನು ಸೇವಿಸಿದಾಗ ಅವರೀರ್ವರಲ್ಲಿ ಅವತರಿಸಿ **ಋಷಭ**ನೆಂದೆನಿಸಿದನು. ಇವನು ಸನ್ಯಾಸಾಶ್ರಮದ ಸತ್ಸಂಪ್ರದಾಯಗಳನ್ನು ಮುಕ್ತಿಯೋಗ್ಯರಾದ ಜೀವರಿಗೆ ಉಪದೇಶಿಸಿದನು.

೧೩

**ಅತ್ರಿ ಋಷಿಗಳು** ಹಾಗೂ ಅವರ ಪತ್ನಿ **ಅನಸೂಯಾದೇವಿ**ಯವರು ಶ್ರೀಹರಿಯನ್ನು ಕುರಿತು ತಪಸ್ಸು ಮಾಡಿದರು. ಅವರ ತಪಸ್ಸಿಗೆ ಪ್ರೀತನಾದ ಶ್ರೀಹರಿಯು ಅವರ ಅಪೇಕ್ಷೆಯಂತೆ ಅವರಲ್ಲಿ **ದತ್ತನೆಂಬ** ಹೆಸರಿನಿಂದ ವ್ಯಕ್ತವಾದನು. ಇವನು ಪ್ರಲ್ಹಾದ ಮತ್ತು ಅಲರ್ಕ ಎಂಬ ಸಚ್ಛಿಷ್ಯರಿಗೆ ಪರಾಪರ ತತ್ತ್ವಗಳನ್ನು ವಿಶದವಾಗಿ ತಿಳಿಸಿದನು.

೧೪–೧೫

ಶ್ರೀಹರಿಯು **ಕಪಿಲರೂಪ**ದಿಂದ ವ್ಯಕ್ತನಾಗಿ ವಾಸುದೇವನೆನಿಸಿದನು. ಸಿದ್ಧ ಪುರುಷರಾದ ಬ್ರಹ್ಮಾದಿ ದೇವತೆಗಳಿಗೆ ಕಾಲ ಬಲದಿಂದ ನಶಿಸಿ ಹೋಗುತ್ತಿರುವ ಸಾಂಖ್ಯವೆಂಬ ಹೆಸರಿನ ವೇದಾರ್ಥಪೂರ್ಣವಾದ ಶಾಸ್ತ್ರವನ್ನು ಬೋಧಿಸಿದನು.

ಆದಿ ಮನ್ವಂತರದಲ್ಲಿ ವ್ಯಕ್ತನಾದ ಇವನು ತನ್ನ ತಾಯಿಯಾದ ದೇವಹೂತಿ ದೇವಿಗೆ ಗುಣ ಮೊದಲಾದ ತತ್ತ್ವವನ್ನು ತಿಳಿಸಿದನು.

೧೫ನೆಯ ಸುಳಾದಿಯ ಆದಿತಾಳದಲ್ಲಿ ದಾಸರಾಯರು ಕಪಿಲನಾಮಕ ಪರಮಾತ್ಮನ ಸ್ಮರಣೆಯನ್ನು ಯಾವ ಯಾವ ಸ್ಥಳದಲ್ಲಿ ಮಾಡಬೇಕೆಂಬುದನ್ನು ಹೇಳಿದ್ದಾರೆ.

೧೬

**ಪರಾಶರ ಮತ್ತು ಸತ್ಯವತಿ ದೇವಿಯಲ್ಲಿ ಶ್ರೀಹರಿಯು ವೇದವ್ಯಾಸ** ರೂಪದಿಂದ ವ್ಯಕ್ತವಾದನು. ಮನುಷ್ಯರ ಮಂದಪ್ರಜ್ಞರೆಂಬುದನ್ನರಿತು ಅವರ ಸೌಕರ್ಯಕ್ಕಾಗಿ ವೇದಗಳನ್ನು ವಿಭಾಗ ಮಾಡಿದನು. ಎಲ್ಲ ಶಾಖೆಗಳ ಅರ್ಥವನ್ನು ನಿರ್ಣಯ ಮಾಡುವುದಕ್ಕಾಗಿ **ಬ್ರಹ್ಮಸೂತ್ರಗಳನ್ನು ರಚಿಸಿದನು.**

ಇಪ್ಪತ್ತೆಂಟನೆಯ ದ್ವಾಪರದ ಕೊನೆಯಲ್ಲಿ ವ್ಯಕ್ತನಾದ ಈ ವೇದವ್ಯಾಸದೇವರಿಗೆ ಬಾದರಾಯಣ, ಕೃಷ್ಣ ದ್ವೈಪಾಯನ ಎಂಬ ಮುಂತಾದ ನಾಮಗಳಿವೆ.

೧೭

ದ್ವಾಪರ ಯುಗದಲ್ಲಿ ವಿರೋಧಿನಾಮ ಸಂವತ್ಸರ ಶ್ರಾವಣ ಬ ॥ ೮ ರೋಹಿಣಿ ನಕ್ಷತ್ರ, ವಜ್ರನಾಮ ಯೋಗ ಬುಧುವಾರ ದಿನ ಅರ್ಧರಾತ್ರಿಯಲ್ಲಿ **ಶ್ರೀಕೃಷ್ಣನು ಪ್ರಾದುರ್ಭೂತನಾದನು.**

**ಶ್ರೀಹರಿಯ ಅವತಾರಗಳಲ್ಲಿ ಯಾವ ಭೇದವೂ ಇಲ್ಲ.** ಆದರೂ ಕಲಿಯುಗಕ್ಕೆ ಕೃಷ್ಣಾವತಾರದ ಮಹಿಮೆ ಹೆಚ್ಚು. "ಕಲೌ ಕೃಷಃ ಪ್ರಶಸ್ಯತೇ" ಎಂಬುದು ಶಾಸ್ತ್ರದ ಸವಿನುಡಿ. ಈ ಇಪ್ಪತ್ತೆಂಟನೆಯ ಕಲಿಯುಗದ ಹಿಂದಿನ ದ್ವಾಪರ ಯುಗದಲ್ಲಿಯೇ ಕೃಷ್ಣಾವತಾರವಾದದ್ದು. ಅಂತೆಯೇ **ಈ ಕಲಿಯುಗಕ್ಕೆ ಕೃಷ್ಣನೇ ಯುಗದೇವತೆ.**

ಕಲಿಯುಗದಲ್ಲಿ ಪಾಮರರ ಉದ್ಧಾರಾರ್ಥವಾಗಿ ವೈಕುಂಠದಿಂದ ತಿರುಪತಿಯಲ್ಲಿ ಬಂದು ನಿಂತ. ಪದ್ಮಾವತಿಯೊಂದಿಗೆ ವಿವಾಹವಾದ **ಶ್ರೀನಿವಾಸ ತಾನು ಕೃಷ್ಣನೆಂದೇ** ಹೇಳಿಕೊಂಡಿದ್ದಾನೆ.

ಆಚಾರ್ಯ ಮಧ್ವರು **ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿದರು.** ಆಚಾರ್ಯರ ಪ್ರತಿನಿಧಿಗಳಂತಿದ್ದ **ಶ್ರೀ ಚಂದ್ರಿಕಾಚಾರ್ಯರು, ಶ್ರೀರಾಘವೇಂದ್ರ ಗುರುಸಾರ್ವಭೌಮರೂ** ಕೃಷ್ಣಾರಾಧನೆ ಮಾಡಿದರು. ಆದ್ದರಿಂದ **ಶ್ರೀಕೃಷ್ಣ ಎಲ್ಲರಿಗೂ ಇಷ್ಟದೈವ.**

ಭಗವಂತನ ಇತರ ಅವತಾರಗಳ **ಜಯಂತ್ಯುತ್ಸವಕ್ಕಿಲ್ಲದ ನಿಯಮ ಕೃಷ್ಣ ಜಯಂತಿಗಿದೆ.** ಇದನ್ನು ವ್ರತವಾಗಿ ಆಚರಿಸುವ ರೂಢಿ ಇದೆ. ಆಚಾರ್ಯ ಮಧ್ವರು **"ರೋಹಿಣ್ಯಾಮರ್ಧರಾತ್ರೇತು ಯದಾ ಕೃಷ್ಣಾಷ್ಟಮೀ ಭವೇತ್ । ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶನೀ ॥"** ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಹರಿತತ್ತ್ವ ಪ್ರಚಾರಕ್ಕಾಗಿ ರಚಿತವಾದ **ಶ್ರೀಮದ್ಭಾಗವತ ಪುರಾಣದಲ್ಲಿ ಕೃಷ್ಣನ ಮಹಿಮೆಗೇ ಹೆಚ್ಚು ಪ್ರಾಶಸ್ತ್ಯ.**

ನಮ್ಮ ಸಕಲ ಕರ್ಮಗಳನ್ನು **"ಶ್ರೀಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು"** ಎಂದು ಸಮರ್ಪಿಸುವುದು ತುಂಬಾ ಅರ್ಥಗರ್ಭಿತವಾಗಿದೆ.

ಈ ಎಲ್ಲ ವಿಷಯಗಳನ್ನು ನೋಡಿದಾಗ ಕನ್ನಡದ ಹರಿದಾಸರುಗಳು ಕೃಷ್ಣನ ಮಹಿಮಾವರ್ಣನೆಗೆ ಹೆಚ್ಚು ಗಮನ ಕೊಟ್ಟಿದ್ದಾರೆ. ಕನ್ನಡ ದೇಶದಲ್ಲಷ್ಟೇ ಅಲ್ಲ, ಭಾರತದ ಇತರ ದೇಶದ ಹರಿಶರಣರಲ್ಲೂ ಕೃಷ್ಣಭಕ್ತಿ ಹೆಚ್ಚು. ಸೂರದಾಸರು, ಮೀರಾಬಾಯಿ, ಜಯದೇವ ಹಾಗೂ ಬಂಗಾಳದ ಚೈತನ್ಯ ಪಂಥದ ಮುಖ್ಯ ಸೂತ್ರವೇ ಕೃಷ್ಣಭಕ್ತಿ.

ಸುಳಾದಿ ೧೭ ರಿಂದ ೩೨ ರವರೆಗೆ ದಾಸರಾಯರು ಚಿತ್ರಿಸಿದ ಶ್ರೀಕೃಷ್ಣನ ಶಬ್ದಚಿತ್ರವನ್ನು ಕಾಣುತ್ತೇವೆ.

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುರಾಜೋ ವಿಜಯತೇ ॥

## ವಿಜಯ ಸುಭಾಷಿತಗಳು

(ಸುಳಾದಿಗಳ ಅನುಕ್ರಮದಂತೆ)

೧೯. ೧. ಜೊಳ್ಳು ತೂರಿದಂತೆ.
೨. ಸಿಂಗ ನರಿಯ ಪೆಟ್ಟಿಂಗೆ ಸುಮ್ಮನಿದ್ದಂತೆ.
೨೦. ೩. ಕಳಲುತ್ತೈರದಿ ಕದಡುತ್ತ, ತಳಲ ತಾಪಕೆ ಬಾಡಿದಂತೆ
೨೨. ೪. ಬತ್ತಿಯ ಚಾಚಿದಂತೆ, ದಿನದಿನಕೆ ಎನ್ನ ಭಾರ ಪೊತ್ತ ಅತ್ಯಂತ ಶಕ್ತ
೨೭. ೫. ಶ್ವಾನಗೆ ಶಾವಿಗೆ ಏಸು ಉಣಿಸಿದರೇ ।
೨೮. ೬ ತಾನುಂಡು ಸಂತೋಷವನು ಬಡಬಲ್ಲದೇ ।
ಕಣ್ಣಿದ್ದು ಕುರುಡನಾಗಿ ದಾರಿ ನಡೆದ ಮೂರ್ಖನಂತೆ.
೨೮. ೭ ಬಾಯಿ ಇಲ್ಲದವಗೆ ಎಲ್ಲಿ ಪೋದರೂ ಬದುಕಿಲ್ಲ
೮. ಸಾಧು ಎತ್ತಿಗೆ ಎರಡು ಗೋಣಿ ಹೇರುವರು
೯. ಕೇದಿಗೆಯಲ್ಲಿ ಸರ್ವ ಅವಗುಣಗಳಿದ್ದರೂ ಒಂದು ಗುಣವಿರುತ್ತದೆ.
೧೦. ರವಿಗೆ ಅಂಗೈವಡ್ಡಾಲು ಕವಳ ಕವಿದ್ವದೇನೋ
೩೦. ೧೧. ತಿಲವನ್ನು ಕರತಳದಲ್ಲಿ ಇಟ್ಟುಕೊಳ್ಳಲು
ಸುಲಭದಿಂದ ತೈಲ ಫಲಿಸೋದೆ
೩೧. ೧೨. ಅಳಕುವವಗೆ ಕಾವಳದೊಳು ಹುಲ್ಲುಸರವೇ ತುಳಿದರೆ,
ಮನಸಿಗೆ ಪೊಳೆವೊದು ಫಣಿ ಓಲು
೧೩. ಅಳುಕದವಗೆ ಜಲಧಿ ಮೊಳಕಾಲ ಉದಕವೋ
೧೪. ಇಳಿಯ ಮುಳುಗಿದವಗೆ ಛಳಿಯ ಪರವೇನು
೧೪. ಸಿಡಲಿಗಂಜದವನು ಹೆಗ್ಗೋಳಿಗಂಜುವನೆ
೧೫. ಭೀತಿಗೊಂಬವರಿಗೆ ತೃಣಮೇರುವಾದಂತೆ
೧೬. ಕೋತಿ ಕೊರವಂಗೆ ಸಿಕ್ಕಿದಂತೆ
೩೨. ೧೭ ಭಂಡುದೇವರಿಗೆ ಲೆಂಡು ಪ್ರತಿ
೧೮. ಹಾವಿಗೆ ತಡೆ ಬೇರು ಇದ್ದಂತೆ ಇರಬೇಕು
೩೩. ೧೯. ಜೇನು ಕಾನನದೊಳು ತಾನಿಟ್ಟು ಉಣದಂತೆ
೨೦. ನಾಯಿಗೆ ಶಾವಿಗೆ ಪರಮಾನ್ನದ ತುತ್ತು
ಬಾಯಿಯೊಳಗಿಡಲು ಉಂಡು ಜೀವಿಸುವದೇ?
೨೧. ಬಿದ್ದು ಹೋಹ ಪತ್ರದ ಮೇಲೆ ಬರೆದರೆ
ಪೊದ್ದಿರದೆ ಪೋಗೋವು ತನಗಲ್ಲದೇ
೩೪. ೨೨. ಗೋವು ಜನ್ನಿಗೆ ಪಾಲು ಶುನಕನ ಮರಿ ತಂದು
ದೇವರ ಮನೆಯೊಳು ಕುಡಿಸಿದಂತೆ
೩೫. ೨೩. ಆರು ಇಲ್ಲದ ಒಬ್ಬ ಊರ ಪರದೇಶಿಯ ವೈದು

ನೀರೊಳಗೆ ಹಾಕಿ ತೀರದಲ್ಲಿ ಇರದೆ ದೂರದಲ್ಲಿ ನಿಂತು
ಮೋರೆ ನೋಡುವರೆ

೩೯. ೨೪. ಭೂತ ಸೋಕಿದವಗೆ ದೂಷಣ ಭೂಷಣವೇನು

೪೨. ೨೫. ಹಿಡಿ ಹೊನ್ನು ಉಂಬಾ ಸಂಬಳಿಗನು ಕಾಯ್ದಂತೆ

೪೫. ೨೬. ಬಿಸಲೊಳಗೆ ತಪಿಸಿ ಬಂದ ತೃಷಿಯಾದ ಮನುಜಗೆ
ರಸದಾಳಿ ಕಬ್ಬು ಕೂಲಿಗೆ ಹಸನಾಗಿ ತಿನಿಸಿದಂತೆ

೪೬. ೨೭. ಘಟದೊಳಗೆ ಉದಕವಿದ್ದ ತೆರದಿ ನಿನ್ನ
ಜಠರದೊಳಗೆ ಲೋಕವಿರಲದರಲ್ಲಿ ।

೨೮. ಪಕ್ಕೆಯೊಳಗೆ ಪಕ್ಕಿ ಮಕ್ಕಳ ಸಾಕಿದಂತೆ ।

೪೭. ೨೯. ಕಣ್ಣು ತೆರೆಯ ಕುನ್ನಿ ಹುಲಿಯ ಕೂಡ
ಹಣ್ಣಿಕೊಂಡು ಯುದ್ಧವನ್ನು ಮಾಡಿದರುಂಟೆ

೪೮. ೩೦. ವಿಜಯ ವಿಠ್ಠಲನ ನಾಮ ಮುದ್ರಾಂಕಿತದವಗೆ
ಭೂಮಿಯಾಕಾಶಕ್ಕೆ ಒಂದೇ ಸುಮಾರ್ಗ

೪೯. ೩೧. ವಿಜಯ ವಿಠ್ಠಲನ ನಾಮ ಸುಧಿ ವಿಗಡನಾಗದೆ ಸುರಿಯೆ
ರಗಳೆ ಭವದ ನಿಗಳಹರ.

೫೧. ೩೨. ಅನುಭವವಿಲ್ಲದ ಜ್ಞಾನದ ಫಲವೇನು?

೩೩. ಅನುದಿನ ಜ್ಞಾನಕ್ಕೆ ಪ್ರತಿಷ್ಠೆಯಾತಕ್ಕೆ

೫೨. ೩೪. ಹರಿನಾಮನ ನೆನೆಯದಿರೆ, ಶರಧಿ ಬತ್ತಿದ ಮೀನು
ವರಲಿದಂತೆ ವರಲಿ ಹೀನಾಗುವರು

೫೩. ೩೫. ತುಲವೆಂಬೊ ಪಾಪಕೆ ಪಾವಕ ಹರಿನಾಮ

೫೪. ೩೬. ವಿಷಯಂಗಳಲ್ಲಿ ಚರಿಸಿದರೇನು
ಪರಮಾತ್ಮನ ಪೆಸರುಗೊಂಡರೆ ಪುಣ್ಯ

೫೬. ೩೭. ಉಪ್ಪಿಲ್ಲದಂಬಲಿ ಕುಡಿವ ನರಗೆ ಕೋಟಿ
ಕೊಪ್ಪರಿಗೆ ಧನ ಇದ್ದಲ್ಲಿ ದೊರೆತಂತೆ

೩೮. ತಿಪ್ಪೆಯ ಮೇಲೆ ಹೊರಳಿ ಮಲಗುವ ಮನುಜಗೆ
ಉಪ್ಪರಿಗೆ ಮೇಲೆ ಸುಖಿಸುವಂತೆ

೩೯. ಚಿಪ್ಪು ಗೀರಿ ತಿಂಬ ದಟ್ಟ ದಾರಿದ್ರಗೆ
ತುಪ್ಪ ಸಕ್ಕರಿ ಪಾಲ ಹಣ್ಣು ಮೆಲಿಸಿದಂತೆ

೫೭. ೪೦. ಮಂದಿಯೊಳಗೆ ನೋಡಿದಂದ ತುದಿ ಫಲವ
ಬಂದು ಹೆಳವ ನೋಡಿ ತಿಂದೆನೆಂತೊಂಬೊ
ಮಂದಮತಿಯಾದೆ

೫೮. ೪೧. ಹೆಳುವನು ಬಯಸಿದ ಫಲವು
ಚಲಿಸದೆ ಇರುತಿದ್ದು, ಕೆಳಗೆ ಬೀಳೆ ಪಾವನದಿಂದ
ಲಲೆ ಪಣ್ಣು ದೊರಕಿದಂತೆ

೫೯. ೪೨. ಚಂದ್ರನುದ್ಭವನಾಗೆ ಚತುರಂಗುಲದಷ್ಟು
ಸಿಂಧುರಾಜನ ಉಬ್ಬಿ ಮೇಲಕ್ಕೆ ಸೂಸುವ
೪೩. ಅಂಧಕಗೆ ಕಣ್ಣು ಬಂದಂತೆ
೬೦. ೪೪. ಮುಕುಳಿತವಾಗಿದ್ದ ಕುಸುಮ ಇದ್ದರೆ
ಇದಕೆ ಪರಿಮಳ ತಾನೆ ಹೊರಬೀಳ್ವದೆ
೬೨. ೪೫. ಆಡಿನ ಕೊರಳೊಳು ಸ್ತನವುಳ್ಳ ತೆರದಂತೆ ।
೪೬. ರಾಡಿಕಲೆತ ನೀರಿನಂತೆ ನಾನಿಪ್ಪೆನೋ ।
೪೭. ಸಪುತಾರ್ಚಿ ಸ್ಥಂಭ ಬಲ್ಲ ಬಲವಂತ ಮನುಜಗೆ ।
ಅಪರಿಮಿತವಾದ ಕೊಳ್ಳಿಯ ಭೀತಿಯುಂಟೆ ।
೬೩. ೪೮. ಹಯಗಮನನಾಗಿ ಕತ್ತೆಯನ್ನು ಹಾರೈಸಿದಂತೆ ।
೭೨. ೪೯. ಜೀವೇಶ್ವರರಿಗೆ ಅಭೇದ ಪೇಳುವವ ।
ಭೃತ್ಯಾ ತನ್ನೊಡಿಯನ ಹತ್ಯಾ ಮಾಡಿದಂತೆ ।
೫೦. ಗುರುಮುಖವಿಲ್ಲದೆಲೆ ದೊರಿಯದು ಜ್ಞಾನಮಾರ್ಗ ।
೭೩. ೫೧. ದುರ್ಮತವನು ಮೆಚ್ಚಿ ಕರ್ಮಕ್ಕೆ ಬೀಳದಿರು ।
೫೨. ಮಾಯಿಯ ಮನೆ ಮುಂದೆ ಮದಕರಿಯಾಗಿದ್ದು ।
ಆಯುಷ್ಯಾಭಿವೃದ್ಧಿ ಸುಖಬಡುವದಕ್ಕಿಂತ ।
ನಾಯಿಯ ಮರಿಯಾಗಿ ಮಧ್ವಮತದವರ ।
ಕಾಯಿದು ಮನೆ ಮುಂದೆ ಇಪ್ಪ ಕ್ಷಣವೇ ಲೇಸು ।
೫೩. ವಾಯುಮತ ಬಿಟ್ಟು ಅನ್ಯಮತವ ಸಾರೆ ।
ತಾಯಿಯ ಜರಿದು ಶ್ವಬಚಿಗೆರಗಿದಂತೆ ।
೫೪. ಪ್ರಾಣಗತಿ ಬಂದರು ಮಧ್ವಮತ ಬಿಡದಿರೀ ।
೭೭ ೫೫. ಶ್ರೀಪಾದ ಪದುಮವನ್ನು ನೆರೆನಂಬಿದವನ ಭಾಗ್ಯ ।
ಅಪಾರವಲ್ಲದೆ ಲೇಶ ಕೊರತೆ ಇಲ್ಲ ।
೫೬. ಗೋಪಾದ ಉದಕದೊಳು ರತುನ ದೊರಕಿದಂತೆ ।
೫೭ ದೀಪದ ಬೆಳಕಿನಲ್ಲಿ ಸರ್ವವು ಕಂಡಂತೆ ।
೮೦. ೫೮. ಹರಿಯಳೆ ಮರಿ ತಾರುಕ್ಷನ ವನದೊಳು ।
ಇರಲು ಸಳದು ಕಡಿಗೆ ತೆಗೆದಂತೆ ।
೫೯. ಅಡವಿಗೆ ಬಿದ್ದವನ ದಾರಿಗೆ ತಂದಂತೆ ।
೬೦. ಒಡಲಿಗೆ ಇಲ್ಲದವನ ಸುಧಿಯೊಳಗಿಟ್ಟಂತೆ ।
೬೧. ಕೊಡೆ ಇಲ್ಲಾದವಗೆ ಸುರತರು ವಲಿದಂತೆ ।
೬೨. ನಡಿಯಲರಿಯದವಗೆ ನಡಿಯಕಲಿಸಿದಂತೆ ।
೬೩. ನುಡಿಯಲರಿಯದವಗೆ ನಿಗಮ ತಿಳಿಸಿದಂತೆ ।
೬೪. ಮಡುವಿಗೆ ಬಿದ್ದವಗೆ ನಾವಿದೊರಕಿದಂತೆ ।

೬೫. ಪೊಡವಿ ಎಡಯವಗೆ ಹರಿವಾಣ ದೊರೆತಂತೆ ।
೬೬. ಮುಡಿಯ ಪೊತ್ತು ಪೋಪಗೆ ಊಟವು ಸಿಕ್ಕಿದಂತೆ ।
೬೭. ಕಡುರೋಗಾದವಗೆ ಸಂಜೀವನದಂತೆ ।
೬೮. ಮೀನು ಉದಕದೊಳಗಿದ್ದಂತೆ ।
೬೯. ಶ್ವಾನ ಛಳಿಯೊಳಿರೆ ವಜ್ರಕವಚನ್ನು ।
ಮೇಣು ದೊರತದ್ದು ನೋಡು ಎನ್ನ ಭಾಗ್ಯ ।
೭೦. ಮಾನವನು ಪವಮಾನ ಮತ ನಂಬಿ ।
ಜ್ಞಾನೋಪದೇಶವಾಗದಲೆ ।
ತಾನು ಯೇಸುಕಾಲ ಬದುಕಿದ ಫಲವೇನು ।
ಬಾಣವಿಲ್ಲದ ಬಿಲ್ಲಿನಂತೆ ।
೭೧. ಇರುವ ಮೆದ್ದದರಿಂದ ಕರಿ ಏಂಡಿಗೆ ಕೊರತೆಯಾಗದು ।
೭೨. ವಿಜಯ ವಿಠ್ಠಲ ತಾನೆ ಚಿಂತೆ ಮಾಡುವ
ತನ್ನ ನೆನಿಸಿದ ಭಕ್ತನಿಗೆ ।

॥ ಶ್ರೀ ಕೃಷ್ಣಾರ್ಪಣಮಸ್ತು ॥